# ಬೆಳಗಾವಿ ಜಿಲ್ಲೆಯ ಚಿತ್ರಕಲೆ

ಎಂ.ಫಿಲ್. ಪದವಿಗಾಗಿ ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಎಂ.ಫಿಲ್. ಸಂಶೋಧನ ಪ್ರಬಂಧ


ಸಂಶೋಧಕರು

ಮಹಾಕೋಟೆಶ್ವರಗೌಡಾ. ಎಸ್. ಪಾಟೀಲ

ಮಾರ್ಗದರ್ಶಕರು

ಡಾ. ಎಸ್.ಸಿ. ಪಾಟೀಲ
ಮುಖ್ಯಸ್ಥರು, ಪ್ರಾಧ್ಯಾಪಕರು
ಹಾಗೂ ಡೀನ್ ಲಲಿತಕಲಾ ನಿಕಾಯ





ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮



ವಿ

# ಬೆಳಗಾವಿ ಜಿಲ್ಲೆಯ ಚಿತ್ರಕಲೆ

ಎಂ.ಫಿಲ್. ಪದವಿಗಾಗಿ ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಎಂ.ಫಿಲ್. ಸಂಶೋಧನ ಪ್ರಬಂಧ


ಸಂಶೋಧಕರು

ಮಹಾಕೋಟೇಶ್ವರಗೌಡಾ. ಎಸ್. ಪಾಟೀಲ


ಗಾ





ಮಾರ್ಗದರ್ಶಕರು

ಡಾ. ಎಸ್.ಸಿ. ಪಾಟೀಲ
ಮುಖ್ಯಸ್ಥರು, ಪ್ರಾಧ್ಯಾಪಕರು
ದೃಶ್ಯಕಲಾ ವಿಭಾಗ
ಹಾಗೂ ಡೀನ್ ಲಲಿತಕಲಾ ನಿಕಾಯ


ಳ






ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮


ಬೆ

# ಪ್ರಮಾಣ ಪತ್ರ

**'ಬೆಳಗಾವಿ ಜಿಲ್ಲೆಯ ಚಿತ್ರಕಲೆ'** ಎಂಬ ಸಂಪ್ರಬಂಧವನ್ನು ಡಾ. ಎಸ್.ಸಿ. ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 30-10-2008.

ಸ್ಥಳ : ವಿದ್ಯಾರಣ್ಯ

ಮಹಾಕೋಟೇಶ್ವರಗೌಡಾ. ಎಸ್. ಪಾಟೀಲ

ಸಂಶೋಧಕರು

ದೃಶ್ಯಕಲಾ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

# ದೃಢೀಕರಣ ಪತ್ರ

**'ಬೆಳಗಾವಿ ಜಿಲ್ಲೆಯ ಚಿತ್ರಕಲೆ'** ಎಂಬ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ **ಮಹಾಕೋಟೇಶ್ವರಗೌಡಾ. ಎಸ್. ಪಾಟೀಲ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 31-10-2008.

ಸ್ಥಳ : ವಿದ್ಯಾರಣ್ಯ

( **ಡಾ. ಎಸ್.ಸಿ. ಪಾಟೀಲ** )

ಮುಖ್ಯಸ್ಥರು, ಪ್ರಾಧ್ಯಾಪಕರು
ದೃಶ್ಯಕಲಾ ವಿಭಾಗ
ಹಾಗೂ ಡೀನ್ ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**ನನ್ನುಡಿ**

ಕನ್ನಡಿಗರ ಮಾತೃ ಸಂಸ್ಥೆ ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಎಂ.ಫಿಲ್ ಪದವಿ ಅಧ್ಯಯನ ಮಾಡುವ ಯೋಗ ನನಗೆ ಒದಗಿ ಬಂದದ್ದೇ ಹೆಮ್ಮೆ ಎನಿಸುತ್ತದೆ. ದೃಶ್ಯಕಲೆಯ ಸಾಹಿತ್ಯಾಸಕ್ತಿ ಹಾಗೂ ಸಂಶೋಧನ ಆಸಕ್ತಿ ನನ್ನಲ್ಲಿ ಹುಟ್ಟುವುದಕ್ಕೆ ವಿಶ್ವವಿದ್ಯಾಲಯದ ಪರಿಸರವೇ ಕಾರಣ. ಕನ್ನಡ ಸಂಸ್ಕೃತಿಕ ಶೋಧದ ಮತ್ತು ಪ್ರಸಾರದ ಉದ್ದೇಶವನ್ನಿಟ್ಟುಕೊಂಡ ಕನ್ನಡ ವಿಶ್ವವಿದ್ಯಾಲಯ ಕಲೆಯ ಪಾರಂಪರಿಕ ವಿದ್ಯೆಯನ್ನು ನೀಡುವ ಜೊತೆಗೆ ಸಂಶೋಧನೆಗೆ ಕೂಡ ಹೆಚ್ಚು ಒತ್ತು ನೀಡಿದೆ. ನನ್ನ ಎಂ.ಫಿಲ್ ಪದವಿಯ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ವಿಷಯ "ಬೆಳಗಾವಿ ಜಿಲ್ಲೆಯ ಚಿತ್ರಕಲೆ"ಯಾಗಿದೆ. ಇಂತಹ ಕಲೆಯ ಪರಂಪರೆಯೊಂದನ್ನು ಅಧ್ಯಯನ ಮಾಡಲು ಅನುವು ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯಕ್ಕೆ ಮೊದಲು ಕೃತಜ್ಞತೆಗಳನ್ನು ಅರ್ಪಿಸುವೆ. ಇಂತಹ ಸಾಂಸ್ಕೃತಿಕ ಶೋಧದ ಪರಿಸರವನ್ನು ಅಭಿವೃದ್ಧಿಪಡಿಸಲು ನಿರಂತರವಾಗಿ ಶ್ರಮಿಸುತ್ತಿರುವ, ಕನ್ನಡ ವಿ.ವಿ. ಹಂಪಿಯ ಮಾನ್ಯ ಕುಲಪತಿಗಳಾದ ಡಾ. ಎ. ಮುರಿಗೆಪ್ಪರವರು, ಮಾನ್ಯ ಕುಲಸಚಿವರಾದ ಹಿ.ಚಿ ಬೋರಲಿಂಗಯ್ಯನವರು, ಅಧ್ಯಯನಾಂಗದ ನಿರ್ದೇಶಕರಾದ ಡಾ. ಡಿ. ಪಾಂಡುರಂಗ ಬಾಬು ಅವರು, ಹಣಕಾಸು ಅಧಿಕಾರಿಗಳಾದ ಡಾ. ರಮೇಶ ನಾಯಕ ಅವರು, ಉಪ ಕುಲಸಚಿವರಾದ ಡಾ. ಪ್ರೇಮ್‌ಕುಮಾರ ಅವರು, ಸಹಾಯಕ ಕುಲಸಚಿವರಾದ ಗುರುಬಸಪ್ಪನವರಿಗೆ, ಗ್ರಂಥಪಾಲಕರಿಗೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ವಿಶೇಷ ಘಟಕದ ಸಂಯೋಜನಾಧಿಕಾರಿಗಳಾದ ಡಾ. ಚಿನ್ನಸ್ವಾಮಿ ಸೋಸಲೆ ಅವರು, ವಿಶ್ವವಿದ್ಯಾಲಯದ ಯೋಜನಾಧಿಕಾರಿಗಳಾದ ಡಾ. ಕೃಷ್ಣಾ ಕಟ್ಟಿ ಅವರುಗಳಿಗೆ ಹಾಗೂ ಮೈಸೂರಿನ ಸಂಗೀತ ವಿಶ್ವವಿದ್ಯಾಲಯದ ವಿಶೇಷ ಅಧಿಕಾರಿಗಳಾದ ಪ್ರೊ. ಹನುಮಣ್ಣ ನಾಯಕ ದೊರೆ ಎಲ್ಲ ಗುರುಗಳಿಗೂ ಅನಂತ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಅಧ್ಯಯನದ ಸಂದರ್ಭದಲ್ಲಿ ನನಗೆ ಸಂಶೋಧನೆಯ ಒಳ ಹೊರಹುಗಳನ್ನು ಹೇಳಿ ಪ್ರಸ್ತುತ ಪ್ರಬಂಧ ರೂಪುಗೊಳ್ಳಲು ಕಾರಣಕರ್ತರು, ಕನ್ನಡ ವಿ.ವಿ. ಹಂಪಿ ದೃಶ್ಯಕಲಾ ವಿಭಾಗದ ಎಲ್ಲ ವಿದ್ಯಾರ್ಥಿಗಳ ಪ್ರೀತಿಗೆ ಪಾತ್ರರಾದ ಹಾಗೂ ನನ್ನ ಪಾಲಕರ ಸ್ಥಾನವನ್ನು ತುಂಬಿದಂತವರು. ಮಾರ್ಗದರ್ಶಕರು, ಲಲಿತಕಲಾ ನಿಕಾಯದ ಡೀನ್ ಮತ್ತು ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರಾದ ಡಾ. ಎಸ್. ಸಿ. ಪಾಟೀಲ ಗುರುಗಳಿಗೆ ಎಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಸಾಲದು. ಜೊತೆಗೆ ಅಧ್ಯಯನದ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಹಕರಿಸಿದ ಬೆಳಗಾವಿ ಜಿಲ್ಲೆಯಲ್ಲಿರುವ ಕಲಾವಿದರು, ಕಲಾಶಾಲೆಯ ಪ್ರಾಚಾರ್ಯರು, ಕಲಾಶಿಕ್ಷಕರು ಇವರಲ್ಲರನ್ನೂ ಸಹ ನಾನು ನೆನೆಯುತ್ತೇನೆ.

ಅಧ್ಯಯನದ ಪ್ರತಿ ಹಂತದಲ್ಲೂ ಸಹಕರಿಸಿದ ಅಧ್ಯಾಪಕರಾದ ಡಾ. ಯಾದಪ್ಪ ಪರದೇಶಿ, ಡಾ. ಶಿವಾನಂದ ಬಂಟನೂರ, ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ, ಡಾ. ಮಂಜುನಾಥ ಬೇವಿನಕಟ್ಟಿ, ಡಾ. ಮಲ್ಲಕಾರ್ಜುನ ವಣೇನೂರ, ಡಾ. ವಾಸುದೇವ ಬಡಿಗೇರ, ಡಾ. ಸಿ. ಮಹಾದೇವ, ಡಾ. ಶ್ರೀನಿವಾಸ, ಡಾ. ವಿಠ್ಠಲರಾವ್ ಗಾಯಕವಾಡ, ಹಾಗೂ ಆತ್ಮಿಯರಾದ ಆರ್.ವಿ. ದೇಶಪಾಂಡೆ ಅಕ್ಕ ಪರಿಮಳ, ಶ್ರೀ ರಾಮಸ್ವಾಮಿ, ಜಿ. ಶಿವಕುಮಾರ, ಗುರುಮೂರ್ತಿ, ಮರಿಸ್ವಾಮಿ, ಕೃಷ್ಣಕುಮಾರ, ಕೆ. ವೆಂಕಟೇಶ, ವಿರುಪಾಕ್ಷಯ್ಯ, ಪಂಪಾಪತಿ, ಗಾದಿರ್ಲಿಂಗಪ್ಪ, ಬೋರಯ್ಯ, ಕರೀಮ, ಪಂಪಯ್ಯಸ್ವಾಮಿ, ನಾರಾಯಣ ನಾಯ್ಕ್, ನಿರ್ವಾಣಿ, ಶಿವಾನಂದ, ಕೆ. ಸುರೇಶ, ತಿಮ್ಮಕ್ಕ ಹನುಮಂತಪ್ಪ ಇವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸ್ನೇಹಿತರಾದ ಸುನಿತಾ ಪ್ರಸಾದ್, ದ್ರಾಕ್ಷಾಯಿಣಿ, ವಿಜಯಲಕ್ಷ್ಮಿ, ಈಶ್ವರಿ, ಅನು ಸತೀಶ, ಶ್ರೀನಿವಾಸ್, ಆಂಜನೇಯ, ಗೋವಿಂದ್, ರಮೇಶ, ಬಶೀರ, ಶಿವಾನಂದ ಬಡಿಗೇರ, ಸವಿತಾ ಜಗದೀಶ್, ಬೇಬಿ ರಾಜಶೇಖರ್, ಜೆ. ಅರುಣ, ಡಿ. ಓಬಯ್ಯ, ನಿಂಗಪ್ಪ, ಶಶಿಧರ ಬಳ್ಳಾರಿ, ಎ.ಡಿ. ಬಸವರಾಜ, ಹನುಮೇಶ್, ಸ್ಟಾಲ್ ವಿರೇಶ್, ಕೃಷ್ಣಪ್ಪ ಕುಪ್ಪಯ್ಯನ ಕ್ಯಾಂಪ್, ವಿಶ್ವವಿದ್ಯಾಲಯದ ಎಲ್ಲ ಆತ್ಮಿಯರನ್ನು ಮತ್ತು ವಿದ್ಯಾರ್ಥಿ ನಿಲಯದ ಸ್ನೇಹಿತರನ್ನೂ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರನ್ನೂ ಈ ಸಮಯದಲ್ಲಿ ನೆನೆಯದೆ ಇರಲಾರೆ.

ನನ್ನ ಬದುಕು ರೂಪಿಸಿದ, ನನ್ನ ಶ್ರೇಯಸ್ಸನ್ನೇ ಬಯಸುವ ತೀರ್ಥರೂಪ ನನ್ನ ಪೂಜ್ಯ ತಂದೆಯವರಾದ ಶ್ರೀ ಶಂಕರಗೌಡಾ ಡಿ. ಪಾಟೀಲ, ನನ್ನ ಪ್ರೀತಿಯ ಅಮ್ಮ ಶ್ರೀಮತಿ ನೀಲಾಂಬಿಕಾದೇವಿ ಎಸ್. ಪಾಟೀಲ, ನನ್ನ ಪ್ರೀತಿಯ ಅಮ್ಮ ಶಿವಕ್ಕಮ್ಮ ರ. ಶಿಂಗಾರಿ ಇವರುಗಳ ಪಾದಾರವಿಂದಗಳಿಗೆ ಪ್ರಣಾಮಗಳನ್ನು ಅರ್ಪಿಸುತ್ತ ಮತ್ತು ಅಧ್ಯಯನದ ಪ್ರತಿ ಹಂತದಲ್ಲೂ ಸಹಕರಿಸಿ ಈ ಅಧ್ಯಯನಕ್ಕೆ ಸ್ಫೂರ್ತಿ ನೀಡಿ, ಈ ಅಧ್ಯಯನವು ಒಂದು ಪ್ರಬಂಧವಾಗಿ ರೂಪುಗೊಳ್ಳಲು ಕಾರಣಕರ್ತಳಾದ, ಅಷ್ಟೇ ಅಲ್ಲದೇ ನನ್ನ ಉಸಿರಿಗೆ ಉಸಿರಾದ ಪ್ರೀತಿಯ ನನ್ನ ಧರ್ಮಪತ್ನಿ ಶ್ರೀಮತಿ ಉಮಾದೇವಿ ಎಂ. ಪಾಟೀಲ ಹಾಗೆಯೇ ನನ್ನ ಸಹೋದರ ಚೇತನ್, ಸಹೋದರಿಯರಾದ ರಷ್ಮಿ, ರೂಪಾ ಬಾವನವರಾದ ಸೋಮಶೇಖರ ಇವರನ್ನು ಕೂಡ ಈ ಸಂದರ್ಭದಲ್ಲಿ ನೆನೆಯುವೆ.

**ಮಹಾಕೋಟೆಶ್ವರಗೌಡಾ. ಎಸ್. ಪಾಟೀಲ.**

# ಬೆಳಗಾವಿ ಜಿಲ್ಲೆಯ ಚಿತ್ರಕಲೆ

## ಪರಿವಿಡಿ

ಜನಾಂಗದ ಬದುಕು ಜೀವನಚರಿತ್ರೆಯೆನಿಸಿದರೆ, ಕಲೆಗಳು ಅದರ ಆತ್ಮ ಚರಿತ್ರೆಯೆನಿಸುತ್ತದೆ. ವ್ಯಾಪಕವಾದ ಅರ್ಥದಲ್ಲಿ 'ಜನತೆ ಬದುಕಿದ್ದ ರೀತಿ, ಅನುಸರಿಸಿದ ಧರ್ಮ, ಕಟ್ಟಿದ ಕಲೆ, ಅವರ ಜೀವನಸಮಸ್ಯೆ, ಜೀವನಮೌಲ್ಯ ಇತ್ಯಾದಿಗಳ ವಿವರಣೆಯೇ ಇತಿಹಾಸವೆನಿಸುತ್ತದೆ. ಆ ಇತಿಹಾಸದ ಒಳ ಚೌಕಟ್ಟಿನಲ್ಲಿ ಬೆಳೆದು ಬಂದ ಕಲೆಗಳು ಅದಕ್ಕೆ ಸುಂದರ ಸಂಸ್ಕಾರವನ್ನು ನೀಡುತ್ತವೆ.[೧] ಕಲೆಯು ದೇಶದ ಅಥವಾ ಒಂದು ಜನಾಂಗದ ಇತಿಹಾಸವನ್ನು ತಿಳಿಸುವ ಮಹತ್ವದ ಸಾಧನವಾಗಿದೆ. ಇದು ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದರ ಜೊತೆಗೆ ಆನಂದವನ್ನು ನೀಡುತ್ತದೆ.

ಮಾನವನು ಆದಿಯಿಂದಲೂ ತನ್ನ ಸುತ್ತಮುತ್ತಲಿನ ಪ್ರಕೃತಿಯನ್ನು ನೋಡಿ ಉಂಟಾದ ಆನಂದವನ್ನು ವಿವಿಧ ಕಲೆಗಳಲ್ಲಿ ವ್ಯಕ್ತಪಡಿಸುತ್ತಿದ್ದನು. ನಾಟ್ಯ, ಸಂಗೀತ, ಚಿತ್ರ, ಶಿಲ್ಪ ಮುಂತಾದ ಕಲೆಗಳೆಲ್ಲವೂ ಈ ಆನಂದದ ಪ್ರತಿಬಿಂಬಗಳು. ಭೂಮಿಯ ಮೇಲೆ ಮನುಷ್ಯನ ಜನನವಾಗಿ ಹತ್ತು ಇಪ್ಪತು ಲಕ್ಷ ವರ್ಷಗಳಾಗಿವೆಯೆಂಬುದು ಮಾನವಶಾಸ್ತ್ರಜ್ಞರ ಅಭಿಮತವಾಗಿದೆ. ಇದರಲ್ಲಿ ಮನುಷ್ಯನು ನಾಗರಿಕತೆಯ ಹಂತವನ್ನು ಏರಿದುದು ಇಂದಿಗೆ ಸುಮಾರು ಐದಾರು ಸಾವಿರ ವರ್ಷಗಳಿಂದೀಚೆಗೆ.

---

೧. ಡಾ.ಎಸ್.ಸಿ. ಪಾಟೀಲ: ಉತ್ತರ ಕರ್ನಾಟಕದ ಜನಪದ ಚಿತ್ರಕಲೆ, ಪುಟ, ೩

ಈ ಐದಾರು ಸಾವಿರ ವರ್ಷಗಳ ನಾಗರಿಕ ಇತಿಹಾಸ ನಂತರದಲ್ಲಿಯೂ ಕಲೆ ಎಂದರೇನು ಎಂಬುದು ಚರ್ಚಾಸ್ಪದವಾಗಿಯೇ ಉಳಿದಿದೆ. ಸ್ಥೂಲವಾಗಿ ನೋಡಿದಲ್ಲಿ ಕಲೆಯು ಮನುಷ್ಯನ ಸೌಂದರ್ಯಾನುಭವದ ಪ್ರತಿಬಿಂಬವೆನ್ನಬಹುದು. ಈ ಆನಂದವನ್ನು ಕವಿಯು ಅಕ್ಷರಗಳಲ್ಲಿ, ಸಂಗೀತಗಾರನು ಇಂಪಾದ ಸಂಗೀತದಲ್ಲಿ, ಶಿಲ್ಪಿಯು ತನ್ನ ಶಿಲ್ಪಕಲಾಕೃತಿಯಲ್ಲಿ ಹಾಗೆಯೇ ಚಿತ್ರಗಾರನು ರಮ್ಯವಾದ ಚಿತ್ರದಲ್ಲಿ, ಹೀಗೆಯೇ ಈ ಎಲ್ಲ ಕಲಾವಿದರು ತಮ್ಮ ತಮ್ಮ ಮಾಧ್ಯಮದಲ್ಲಿ ಪ್ರತಿಬಿಂಬಿಸುವರು. ಹಾಗೂ ಸೌಂದರ್ಯವು ಅವರವರ ಅಭಿರುಚಿಗನುಸಾರವಾಗಿ ವ್ಯಕ್ತವಾಗುತ್ತದೆ.

ಒಂದು ಚಿತ್ರ ಅಥವಾ ಶಿಲ್ಪಕಲಾಕೃತಿ, ಹಾಗೂ ವಾಸ್ತುಶಿಲ್ಪಗಳು ಅಲ್ಲದೇ ಹಸ್ತಪ್ರತಿ ಚಿತ್ರಗಳು ಸಾವಿರಾರು ವರ್ಷಗಳ ಇತಿಹಾಸವನ್ನು ನಮ್ಮ ಕಣ್ಣೆದುರಿಗೆಯೇ ಕಾಣಿಸುವಂತಹ ಶಕ್ತಿಯನ್ನು ಪಡೆದಿವೆ. ಮಾನವನ ಮೊದಲ ಭಾಷೆ ಚಿತ್ರಕಲೆಯೆಂದೇ ಹೇಳಬಹುದು. ಏಕೆಂದರೆ ಭಾಷೆಯು ಹುಟ್ಟಿದ್ದು ಚಿತ್ರಕಲೆಯಿಂದಲೇ ಎನ್ನುವ ಸತ್ಯ ಸಾಮಾನ್ಯವಾಗಿ ಎಲ್ಲರಿಗೂ ತಿಳಿದಂತ ವಿಷಯವಾಗಿದೆ. ಹಾಗೆಯೇ ಲಿಪಿಯ ಉಗಮಕ್ಕಿಂತ ಮೊದಲೇ ಚಿತ್ರಕಲೆ ಬಳಕೆಯಲ್ಲಿತ್ತು ಎಂಬುದು ತಿಳಿದು ಬರುತ್ತದೆ. ಲಲಿತಕಲೆಗಳು ಆಯಾಕಾಲದ ಸಾಂಸ್ಕೃತಿಕ ಇತಿಹಾಸವನ್ನು ತಮ್ಮಲ್ಲಿ ಒಡಮೂಡಿಸಿಕೊಂಡಿರುತ್ತವೆ.

ಕರ್ನಾಟಕದಲ್ಲಿ ಚಿತ್ರಕಲೆಯು ಕಾಲಮಾನದಿಂದ ಅತ್ಯಂತ ಪುರಾತನ ಚಿತ್ರಗಳು ಕಂಡುಬರುತ್ತವೆ. ಅವುಗಳಲ್ಲಿ ಅತೀ ಪ್ರಾಚೀನ ಚಿತ್ರಗಳ ನೆಲೆಗಳು ಬಾದಾಮಿ ಬಳಿ ಇರುವ ಅರೆಗುಡ್ಡ, ಹಿರೇಗುಡ್ಡ ಎಂಬಲ್ಲಿಯ ಕಲ್ಲಾಸರೆಯಲ್ಲಿ, ಸಮೀಪದ ಸೀತಿದೋಣಿ, ಸಿಡ್ಲಫಡಿಯಲ್ಲಿ ಹಾಗೂ ಬೆಳಗಾವಿ ಜಿಲ್ಲೆಯ ರಾಮದುರ್ಗದ ಪಶ್ಚಿಮಕ್ಕೆ ೪ ಕಿ.ಮಿ. ದೂರದಲ್ಲಿರುವ ಮೇಗುಂಡೇಶ್ವರ ದೇವಾಲಯದ ಬಳಿಯ ಖಾಜಿಗುಡ್ಡದಲ್ಲಿ ಕಂಡುಬರುತ್ತವೆ. ಇವು ಸೂಕ್ಷ್ಮ ಶಿಲಾಯುಗ ಕಾಲದ ಕ್ರಿ.ಪೂ. ೧೦,೦೦೦ ವರ್ಷಗಳ ಕಾಲಾವಧಿಗೆ, ಇಲ್ಲವೇ ಅದಕ್ಕೂ ಪೂರ್ವದ ಅಂತ್ಯ ಹಳೇ ಶಿಲಾಯುಗದ ಕ್ರಿ.ಪೂ. ೪೦,೦೦೦ ವರ್ಷಗಳ ಅವಧಿಗೆ ಸೇರುತ್ತವೆ. ಇದುವರೆಗೆ ತಿಳಿದುಬಂದಂತೆ ದಕ್ಷಿಣ ಭಾರತದ ಅತ್ಯಂತ ಪುರಾತನ ಚಿತ್ರಗಳು ಇವೇ ಆಗಿವೆ ಎಂದೂ ಡಾ.ಅ.ಸುಂದರ ಅವರು ಅಭಿಪ್ರಾಯಪಡುತ್ತಾರೆ.[೨] ಸವದತ್ತಿ ತಾಲೂಕಿನ ನವಿಲು ತೀರ್ಥ, ಸುರೇಬಾನ ಈ ನೆಲೆಗಳಲ್ಲಿ ನೂತನ ಶಿಲಾಯುಗ, ಶಿಲಾತಾಮ್ರಯುಗದ ಪ್ರಾಗೈತಿಹಾಸಿಕ ಚಿತ್ರಗಳ ಕುರುಹುಗಳಿವೆ. ಅಲ್ಲದೇ ಪ್ರಾಗೈತಿಹಾಸ ಚಿತ್ರಕಲೆಯ ಮುಂದಿನ ಬೆಳವಣಿಗೆಯ ಹಂತವಾಗಿ ಜನಪದ ಚಿತ್ರಕಲೆಯು ಸಹ ಮಾನವ ಸಂಸ್ಕೃತಿಯ ಒಂದು ಭಾಗವಾಗಿ ಬೆಳಗಾವಿ ಜಿಲ್ಲೆಯು ಚಿತ್ರಕಲೆಯ ಪರಂಪರೆಯನ್ನು ಕಂಡುಕೊಂಡಿದೆ.

---

೨. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಗಳು ಒಂದು ಅಧ್ಯಯನ, ಪುಟ, ೪೨,



ಹಾಗೆಯೇ ಇತರ ಆಕಾರಗಳಿಗಿಂತ ಬೇರೆಯಾಗಿ ಚಿತ್ರಕಲೆಯು ಸಾಂಸ್ಕೃತಿಕ ಇತಿಹಾಸವನ್ನು ಪುನರ್ ರಚಿಸಲು ಸಹಾಯ ಮಾಡುತ್ತದೆ ಎಂಬುದು ಗಮನಾರ್ಹ.

**ಉದ್ದೇಶ :**

ಚಿತ್ರಕಲಾ ಪರಂಪರೆಯನ್ನು ನಮ್ಮ ಪೂರ್ವಜರು ಧರ್ಮ ಪ್ರಚಾರದ ಸಾಧನವಾಗಿ, ಸಮಾಜವನ್ನು ರೂಪಿಸುವಲ್ಲಿ ಮನರಂಜನೆಗಾಗಿ, ವೈಯಕ್ತಿಕ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಗಾಗಿ, ರಾಜಕೀಯ ಉದ್ದೇಶಗಳಿಗಾಗಿ ಹೇಗೆ ಬಳಸಿಕೊಂಡರು ಎಂಬುದರ ಜೊತೆಗೆ ಚಿತ್ರಗಳ ಶೈಲಿ ಕಾಲದಿಂದ ಕಾಲಕ್ಕೆ ಬದಲಾಗಿರುವುದನ್ನು ತಿಳಿಕೊಳ್ಳಬಹುದು. ಚಿತ್ರಗಳ ಶೈಲಿ, ತಂತ್ರ, ವಿನ್ಯಾಸ, ವರ್ಣಗಳ ಸಂಯೋಜನೆ ಇಂತಹ ತಾಂತ್ರಿಕ ವಿಚಾರಗಳನ್ನು ತಿಳಿದುಕೊಳ್ಳುವಂತಹ ಪ್ರಯತ್ನ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಹಾಗಾಗಿ ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದಂತೆ ಚಿತ್ರಕಲೆಯ ಇತಿಹಾಸವನ್ನು ಮತ್ತು ಚಿತ್ರಕಲೆಯು ಬೆಳೆದುಬಂದ ನೆಲೆಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಅಧ್ಯಯನ ಮಾಡುವ ಉದ್ದೇಶವಿದೆ.

ಕಲೆಯ ಪರಂಪರೆಯನ್ನು ಹೊಂದಿರುವ ಬೆಳಗಾವಿ ಪ್ರದೇಶವನ್ನು ಆಳ್ವಕೆ ಮಾಡಿದ ಪ್ರಮುಖ ಅರಸು ಮನೆತನಗಳೆಂದರೆ ಶಾತವಾಹನರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ರಟ್ಟರಾಜರು, ದೇವಗಿರಿ ಯಾದವರು, ವಿಜಯನಗರ ಅರಸರು ಸಾಮಂತರು ಇನ್ನೂ ಮೊದಲಾದವುಗಳು. ಈ ಎಲ್ಲ ಅರಸು ಮನೆತನಗಳು ಬೆಳಾಗವಿ ಪ್ರದೇಶದ ಕಲೆ, ಸಾಹಿತ್ಯ, ಸಂಸ್ಕೃತಿಗೆ ನೀಡಿದ ಕೊಡುಗೆ ಅನನ್ಯವಾದದು. ಇವುಗಳಲ್ಲಿ ಚಿತ್ರಕಲೆಗೆ ಇವರು ನೀಡಿದ ಪ್ರೋತ್ಸಾಹ ಅಪಾರವಾದದು. ಅಲ್ಲದೆ ಈ ಅರಸರ ಅಳ್ವಿಕೆ ಕಾಲಾವಧಿಯಲ್ಲಿ ಬೆಳಗಾವಿ ಪ್ರದೇಶದಲ್ಲಿ ೩೮೦೩ ದೇವಸ್ಥಾನಗಳಿರುವುದು ವಿಶೇಷವಾಗಿದೆ. ಕರ್ನಾಟಕದಲ್ಲಿ ಅತ್ಯಂತ ಹೆಚ್ಚು ದೇವಸ್ಥಾನಗಳನ್ನು ಹೊಂದಿರುವ ಜಿಲ್ಲೆಗಳಲ್ಲಿ ಬೆಳಗಾವಿಯು ಒಂದು. ಬೆಳಗಾವಿಯು ಅತ್ಯಂತ ಸುಂದರವಾದ ಪ್ರೇಕ್ಷಣೆಯ ಸ್ಥಳವಾಗಿದೆ.[೩] ಆದರೆ ಇಷ್ಟೊಂದು ಪ್ರಾಚೀನ ವೈಭವವನ್ನು ಹೊಂದಿರುವ ಬೆಳಗಾವಿ ಜಿಲ್ಲೆಯಲ್ಲಿ ಚಿತ್ರಕಲೆಯ ಕುರಿತು ಸಮಗ್ರ ಅಧ್ಯಯನಗಳು ನಡೆದಿಲ್ಲದಿರುವುದನ್ನು ಗಮನಿಸಿದರೆ ಬೆಳಗಾವಿ ಪ್ರದೇಶದ ಚಿತ್ರಕಲೆಯು ನಿರ್ಲಕ್ಷಕ್ಕೆ ಒಳಗಾಗಿದೆ ಎಂದೇ ಹೇಳಬೇಕಾಗುತ್ತದೆ.

ಪ್ರಾಗೈತಿಹಾಸಿಕ ಚಿತ್ರಗಳು, ಜನಪದ ಚಿತ್ರಗಳು, ಭಿತ್ತಿಚಿತ್ರಗಳು ಮತ್ತು ಹಸ್ತಪ್ರತಿ ಚಿತ್ರಗಳಿಂದಲೂ ಸಾವಿರಾರು ವರ್ಷಗಳ ಸುದೀರ್ಘವಾದ ಇತಿಹಾಸ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ತಿಳಿಯಬಹುದು. ಜನಪದರ ಜೀವನದಲ್ಲಿ ಹಾಸುಹೊಕ್ಕಿರುವ ಚಿತ್ರಕಲೆಯ ಎಲ್ಲ ಅಂಶಗಳನ್ನು ಚರ್ಚಿಸುವಂತಹ ಉದ್ದೇಶ ಈ ಅಧ್ಯಾಯನದ್ದಾಗಿದೆ.

೩. ಎಸ್.ಎ. ಭೋಜ, ರಾಘವೇಂದ್ರ ಜೋಶಿ, (ಸಂ), ಚೈತನ್ಯ, ಡಾ. ಸೂರ್ಯನಾಥ ಕಾಮತ್, (ಲೇ), ಬೆಳಗಾವಿ ಇತಿಹಾಸ–ಒಂದು ಪಕ್ಷಿ ನೋಟ, ಪುಟ, ೧೦೯, ೧೧೦



ಬೆಳಗಾವಿ ಜಿಲ್ಲೆಯ ಜನಪದ ಚಿತ್ರಕಲೆಯ ಹಿನ್ನೆಲೆಯಲ್ಲಿ ರಚನೆಯಾದ ಧಾರ್ಮಿಕ, ಮನರಂಜನೆ, ಸೌಂದರ್ಯ ಪ್ರತೀಕವಾಗಿ ರಚನೆಯಾದಂತಹ ಚಿತ್ರಕಲೆಯನ್ನು ಹೇಳುತ್ತಾ, ಇಂತಹ ಚಿತ್ರಕಲಾ ಪರಂಪರೆಯನ್ನು ಹೊಂದಿರುವಂತ ಕುಟುಂಬಗಳು ರಚಿಸುವಂತ ಚಿತ್ರಕಲೆ, ಆಧುನಿಕ ಪ್ರಭಾವದಿಂದ ಚಿತ್ರಕಲೆಯಲ್ಲಿ ಆದಂತಹ ಬದಲಾವಣೆಗಳ ಕುರಿತು ಹೇಳುವ ಉದ್ದೇಶವಿದೆ.

ಜನಪದ ಚಿತ್ರಕಲೆಯ ಮುಂದಿನ ಬೆಳವಣಿಗೆಯ ಹಂತವಾಗಿ ಗೋಕಾಕ, ಬೈಲಹೊಂಗಲ, ಪಾಶ್ಚಾಪುರ, ಇನ್ನೂ ಮೊದಲಾದ ಸ್ಥಳಗಳಲ್ಲಿ ಜಿನಗಾರ, ಚಿತ್ರಗಾರ ಹೀಗೆ ಹಲವಾರು ವೃತ್ತಿಚಿತ್ರಕಾರರ ಮನೆತನಗಳು ಹುಟ್ಟಿಕೊಂಡವು. ಈ ಜಿಲ್ಲೆಯ ಗೋಕಾಕ್ ಅಂಟಿನ ಕರದಂಟಿಗೆ ಪ್ರಸಿದ್ಧವಾದಂತೆ ಅಲ್ಲಿಯ ಕಟ್ಟಿಗೆಯ ವರ್ಣರಂಜಿತ ತರಕಾರಿ, ಹಣ್ಣುಗಳನ್ನು, ಆಟಿಕೆಯ ಗೊಂಬೆ ವಸ್ತುಗಳನ್ನು ತಯಾರಿಸುವಲ್ಲಿಯೂ ಅಷ್ಟೇ ಕೀರ್ತಿಯನ್ನು ಪಡೆದಿದೆ.[೪] ಬೈಲಹೊಂಗಲದಲ್ಲಿ ರಂಗಪರದೆಯ ಚಿತ್ರಕಲೆಯ, ಜನಪದ ಶಿಲ್ಪಗಳಲ್ಲಿ ಚಿತ್ರಕಲೆ ಮತ್ತು ಪಾಶ್ಚಾಪುರದ ದುರುಗಮುರಗಿ ಪೆಟ್ಟಿಗೆಯ ಮೇಲಿನ ಚಿತ್ರಗಳನ್ನು ಕುರಿತು ವಿವರಿಸುವ ಅಗತ್ಯವಿದೆ. ಇಂತಹ ಜನಪದ ಚಿತ್ರಕಲೆಗಳ ಪರಂಪರೆಯನ್ನು ಹೊಂದಿರುವ ಬೆಳಗಾವಿ ಜಿಲ್ಲೆಯ ಸಾಂಸ್ಕೃತಿಕ ಪರಿಸರವನ್ನು ಪರಿಚಯಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಗಮನಹರಿಸಿದೆ.

ಬೆಳಗಾವಿ ಪ್ರದೇಶದಲ್ಲಿ ಭಿತ್ತಿಚಿತ್ರ ನೆಲೆಗಳು ಮತ್ತು ಚಿತ್ರಕಲೆಯ ಕುರುಹುಗಳು ಕಂಡುಬರುತ್ತವೆ. ಉದಾಹರಣೆಗೆ ಬೆಳಗಾವಿ ಸೇಂಟ್‌ಮೇರಿ ಚರ್ಚ್, ಸೇಂಟ್ ಕ್ಸೇವಿಯರ್ ಚರ್ಚ್‌ಗಳು, ಅಥಣಿಯ ಗಚ್ಚಿನ ಮಠ, ನಿಪ್ಪಾಣಿಕರ ವಾಡೆ, ರಾಜವಾಡೆ ನಿಪ್ಪಾಣಿ, ಸಂಕೇಶ್ವರದ ಮಮದಾಪುರ ಅವರ ಮನೆ ಹಾಗೂ ಗೋಕಾಕ್ ತಾಲೂಕಿನ ಅರಬಾವಿಯಲ್ಲಿರುವ ಬಂಡಿವಡ್ಡರ ಅವರ ಮನೆಗಳಲ್ಲಿ ಭಿತ್ತಿಚಿತ್ರಗಳು ಕಂಡುಬರುತ್ತವೆ. ಈ ನೆಲೆಗಳಲ್ಲಿರುವ ಭಿತ್ತಿಚಿತ್ರಗಳ ಇತಿಹಾಸ ಮತ್ತು ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವಿದೆ.

ಕಲಾಕ್ಷೇತ್ರದ ಸಮೃದ್ಧಿಯನ್ನು ಹೊಂದಿದಂತಹ ಬೆಳಗಾವಿ ಜಿಲ್ಲೆಯಲ್ಲಿ ಕಲಾವಿದರ ಸಂಖ್ಯೆ ಅತ್ಯಧಿಕ ಪ್ರಮಾಣದಲ್ಲಿ ಕಂಡುಬರುತ್ತಾರೆ. ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಪ್ರಮುಖ ಹಿರಿಯ ಕಲಾವಿದರ ಜೀವನ, ಕಲಾ ಸಾಧನೆ ಮತ್ತು ಅವರ ಕಲಾಕೃತಿಗಳ ಕುರಿತು ಚರ್ಚಿಸುವಂತಹ ಒಂದು ಪ್ರಾಮಾಣಿಕ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಚಿತ್ರಕಲೆಯ ಪರಂಪರೆಯನ್ನು ಹೊಂದಿರುವ ಬೆಳಗಾವಿ ಜಿಲ್ಲೆಯಲ್ಲಿ ಕಲಾಸಕ್ತರು ಹೆಚ್ಚಿನ ಸಂಖ್ಯೆಯಲ್ಲಿರುವರು. ಈ ದಿಸೆಯಲ್ಲಿ ಕಲೆಯ ಸಂಪ್ರದಾಯವನ್ನು ಉಳಿಸಿ, ಬೆಳಸುವುದಕ್ಕಾಗಿ ಸರ್ಕಾರಿ ಮತ್ತು ಖಾಸಗಿವತಿಯಿಂದ ಅನೇಕ ಕಲಾಶಾಲೆಗಳು ಈ

೪. ಪಿ.ಆರ್. ತಿಪ್ಪೇಸ್ವಾಮಿ, ಸಂ, ಕಲಾಕೋಶ, ಡಾ.ಎಸ್.ಸಿ. ಪಾಟೀಲ, ಲೇ, ಗೋಕಾಕ್ ಕಲೆ, ಪುಟ, ೧೪೬



ಜಿಲ್ಲೆಯಲ್ಲಿ ಹುಟ್ಟಿಕೊಂಡಿವೆ. ಹಾಗಾಗಿ ಈ ಜಿಲ್ಲೆಯಲ್ಲಿ ಚಿತ್ರಕಲಾ ಶಾಲೆಗಳು ಉಳಿದ ಜಿಲ್ಲೆಗಳಿಗಿಂತ ಹೆಚ್ಚಾಗಿ ಕಂಡುಬರುತ್ತವೆ. ಆ ಕಲಾ ಶಾಲೆಗಳು ಜಿಲ್ಲೆಗೆ ಯಾವ ಬಗೆಯ ಕೊಡುಗೆಗಳನ್ನು ನೀಡಿವೆ ಎಂಬುದರನ್ನು ಕುರಿತು ತಿಳಿದುಕೊಳ್ಳುವ ಜಿಲ್ಲೆಯ ಕಲಾಶಾಲೆಗಳ, ಕಲಾ ಚಟುವಟಿಕೆಗಳ ಕುರಿತು ಅಧ್ಯಯನ ಮಾಡುವ ಜರೂರು ಇದೆ. ಅಲ್ಲದೇ ಇಲ್ಲಿನ ಕಲಾಶಾಲೆಗಳ ಸ್ಥಿತಿಗತಿಯ ಕುರಿತು ಅಧ್ಯಯನದ ಅತ್ಯವಶ್ಯಕತೆ ಮಹತ್ವದ್ದಾಗಿದೆ.

ಬೆಳಗಾವಿ ಜಿಲ್ಲೆಯ ಈ ಅಮೂಲ್ಯ ಸಾಂಸ್ಕೃತಿಕ ಸಂಪತ್ತು ದಿನದಿಂದ ದಿನಕ್ಕೆ ನಾಶವಾಗುತ್ತಿರುವ ಈ ಸಂದರ್ಭದಲ್ಲಿ ಇವುಗಳ ವ್ಯಾಪಕ ಅಧ್ಯಯನದ ಅವಶ್ಯಕತೆಯಿದೆ. ಈ ಉದ್ದೇಶ ಈಡೇರಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು :**

ಕರ್ನಾಟಕದ ಸಂದರ್ಭದ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚಿಗಷ್ಟೆ. ನಂತರದಲ್ಲಿ ಅಧ್ಯಯನಗಳು ೯೦ರ ದಶಕದಲ್ಲಿ ತೀವ್ರಗೊಂಡಿವೆ. ೧೯೭೦ರ ದಶಕದಿಂದ ಪ್ರಾರಂಭವಾಗಿ ೧೯೯೦ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗ ಪ್ರೌಢಾವಸ್ಥೆಗೆ ಬಂದು ತಲುಪಿವೆ. ಇಲ್ಲಿಯವರೆಗೆ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಸಂಶೋಧನ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗಿನಂತೆ ಸಮೀಕ್ಷಿಸಲಾಗಿದೆ.

೧೯೮೦ರ ದಶಕದಿಂದ ಕರ್ನಾಟಕದ ದೃಶಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯ ಕುರಿತು ಸಂಶೋಧನಾತ್ಮಕ ಅಧ್ಯಾಯನಗಳು ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ. ಎಸ್.ಸಿ. ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ಅಧ್ಯಯನ, ಎಂಬ ಸಂಶೋಧನ ಕಿರು ಪ್ರಬಂಧ ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ. ಬಿ.ಕೆ. ಹಿರೇಮಠರವರು ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಎಂಬ ಪಿಹೆಚ್.ಡಿ ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳು ಮೀಸಲಾಗಿವೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಚಿತ್ರಕಲೆಯನ್ನೇ ಮುಖ್ಯ ವಿಷಯವನ್ನು ಇಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ ಮಹಾಪ್ರಬಂಧ ಕರ್ನಾಟಕದ ಜನಪದ ಚಿತ್ರಕಲೆ ಈ ಮಹಾಪ್ರಬಂಧವನ್ನು ಡಾ. ಎಸ್.ಸಿ. ಪಾಟೀಲರು ಸಿದ್ಧಪಡಿಸಿದ್ದು, ನಮ್ಮ ದೃಶ್ಯಕಲಾ ಕ್ಷೇತ್ರದ ಮೊದಲ ಸಂಶೋಧನ ಅಧ್ಯಯನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.



ಜಿಲ್ಲೆಯಲ್ಲಿ ಹುಟ್ಟಿಕೊಂಡಿವೆ. ಹಾಗಾಗಿ ಈ ಜಿಲ್ಲೆಯಲ್ಲಿ ಚಿತ್ರಕಲಾ ಶಾಲೆಗಳು ಉಳಿದ ಜಿಲ್ಲೆಗಳಿಗಿಂತ ಹೆಚ್ಚಾಗಿ ಕಂಡುಬರುತ್ತವೆ. ಆ ಕಲಾ ಶಾಲೆಗಳು ಜಿಲ್ಲೆಗೆ ಯಾವ ಬಗೆಯ ಕೊಡುಗೆಗಳನ್ನು ನೀಡಿವೆ ಎಂಬುದರನ್ನು ಕುರಿತು ತಿಳಿದುಕೊಳ್ಳುವ ಜಿಲ್ಲೆಯ ಕಲಾಶಾಲೆಗಳ, ಕಲಾ ಚಟುವಟಿಕೆಗಳ ಕುರಿತು ಅಧ್ಯಯನ ಮಾಡುವ ಜರೂರು ಇದೆ. ಅಲ್ಲದೇ ಇಲ್ಲಿನ ಕಲಾಶಾಲೆಗಳ ಸ್ಥಿತಿಗತಿಯ ಕುರಿತು ಅಧ್ಯಯನದ ಅತ್ಯವಶ್ಯಕತೆ ಮಹತ್ವದ್ದಾಗಿದೆ.

ಬೆಳಗಾವಿ ಜಿಲ್ಲೆಯ ಈ ಅಮೂಲ್ಯ ಸಾಂಸ್ಕೃತಿಕ ಸಂಪತ್ತು ದಿನದಿಂದ ದಿನಕ್ಕೆ ನಾಶವಾಗುತ್ತಿರುವ ಈ ಸಂದರ್ಭದಲ್ಲಿ ಇವುಗಳ ವ್ಯಾಪಕ ಅಧ್ಯಯನದ ಅವಶ್ಯಕತೆಯಿದೆ. ಈ ಉದ್ದೇಶ ಈಡೇರಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ಒಂದು ಪ್ರಾಮಾಣಿಕ ಪ್ರಯತ್ನವಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು :**

ಕರ್ನಾಟಕದ ಸಂದರ್ಭದ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚಿಗಷ್ಟೆ. ನಂತರದಲ್ಲಿ ಅಧ್ಯಯನಗಳು ೯೦ರ ದಶಕದಲ್ಲಿ ತೀವ್ರಗೊಂಡಿವೆ. ೧೯೭೦ರ ದಶಕದಿಂದ ಪ್ರಾರಂಭವಾಗಿ ೧೯೯೦ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗ ಪ್ರೌಢಾವಸ್ಥೆಗೆ ಬಂದು ತಲುಪಿವೆ. ಇಲ್ಲಿಯವರೆಗೆ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಸಂಶೋಧನ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗಿನಂತೆ ಸಮೀಕ್ಷಿಸಲಾಗಿದೆ.

೧೯೮೦ರ ದಶಕದಿಂದ ಕರ್ನಾಟಕದ ದೃಶಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಯ ಕುರಿತು ಸಂಶೋಧನಾತ್ಮಕ ಅಧ್ಯಾಯನಗಳು ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ. ಎಸ್.ಸಿ. ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ ಒಂದು ಅಧ್ಯಯನ, ಎಂಬ ಸಂಶೋಧನ ಕಿರು ಪ್ರಬಂಧ ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ. ಬಿ.ಕೆ. ಹಿರೇಮಠರವರು ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ, ಎಂಬ ಪಿಹೆಚ್.ಡಿ ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳು ಮೀಸಲಾಗಿವೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಚಿತ್ರಕಲೆಯನ್ನೇ ಮುಖ್ಯ ವಿಷಯವನ್ನು ಇಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ ಮಹಾಪ್ರಬಂಧ ಕರ್ನಾಟಕದ ಜನಪದ ಚಿತ್ರಕಲೆ ಈ ಮಹಾಪ್ರಬಂಧವನ್ನು ಡಾ. ಎಸ್.ಸಿ. ಪಾಟೀಲರು ಸಿದ್ಧಪಡಿಸಿದ್ದು, ನಮ್ಮ ದೃಶ್ಯಕಲಾ ಕ್ಷೇತ್ರದ ಮೊದಲ ಸಂಶೋಧನ ಅಧ್ಯಯನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.



೧೯೯೫ರಲ್ಲಿ ಡಾ.ಅ.ಲ. ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ೧೯೯೭ರಲ್ಲಿ ಡಾ. ಸಂಪದಾ ಭಟ್ ಅವರ ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೭ರಲ್ಲಿ ಡಾ. ಪುಷ್ಪಾ ದ್ರಾವಿಡ ಇವರು ಮಂಡಿಸಿದ ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು, ೨೦೦೧ರಲ್ಲಿ ಡಾ. ಯಾದಪ್ಪ ಪರದೇಶಿಯವರ ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಒಂದು ಅಧ್ಯಯನ, ೨೦೦೨ರಲ್ಲಿ ಡಾ. ಶಿವಾನಂದ ಬಂಟನೂರ ಇವರ ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ, ೨೦೦೨ರಲ್ಲಿ ಡಾ. ಗಿರೀಶ ಅವರ ಬುಡಕಟ್ಟು ಚಿತ್ರಕಲೆ, ೨೦೦೨ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿಯವರ ಕಲಾವಿದ ಎಮ್.ಎ. ಚೆಟ್ಟಿಯವರ ಜೀವನ, ಕಲಾಕೃತಿಗಳು – ಒಂದು ಅಧ್ಯಯನ, ೨೦೦೨ರಲ್ಲಿ ಶರಣಪ್ಪ ಕೋಲ್ಕಾರ ಅವರ ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ೨೦೦೨ರಲ್ಲಿ ಡಾ. ಸೌಮ್ಯ ಅವರ ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರೆನ್ಸ್ ಟು ಕಾಂಟೆಪ್ರರಿ ತಾಂತ್ರಿಕಾ ಆರ್ಟಿಸ್ಟ್, ೨೦೦೨ರಲ್ಲಿ ಡಾ. ಪ್ರಮೀಳಾ ಲೋಚನ ಅವರ ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪ್ರರಿ ಪೇಂಟಿಂಗ್, ೨೦೦೩ರಲ್ಲಿ ಡಾ. ವೀಣಾ ಶೇಖರ್ ಮಂಡಿಸಿದ ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦-೧೮೨೦), ೨೦೦೩ರಲ್ಲಿ ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ ಅವರ ಕಲಾವಿದ ಆರ್.ಎಂ. ಹಡಪದ, ಒಂದು ಅಧ್ಯಯನ,

೨೦೦೩ರಲ್ಲಿ ಡಾ. ಎಸ್.ಸಿ. ಪಾಟೀಲರು ಕರ್ನಾಟಕ ವಿ.ವಿಗೆ ಮಂಡಿಸಿದ ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಸ್ಕೂಲ್ ಲೆವೆಲ್ ಇನ್ ಕರ್ನಾಟಕಾ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ ಟು ಡ್ರಾಯಿಂಗ್ ಎಂಡ ಪೇಂಟಿಂಗ್, ೨೦೦೪ರಲ್ಲಿ ಡಾ. ವಿ.ಎಂ. ಬಾಗಾಯತ್ ಅವರ ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦-೧೮೦೦), ೨೦೦೪ರಲ್ಲಿ ಡಾ. ಶಿವಕುಮಾರ ಜಿ.ಓ. ಅವರ ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ೨೦೦೫ರಲ್ಲಿ ಡಾ. ಶಶಿಕಲಾ ಹೂಗಾರ ಅವರ ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ೨೦೦೫ರಲ್ಲಿ ಶಿವಪ್ರಕಾಶ ತುಕ್ಕಣ್ಣವರ ಅವರ ಕರ್ನಾಟಕ ರಥಶಿಲ್ಪಕಲೆ, ೨೦೦೫ರಲ್ಲಿ ಎಚ್.ಎನ್. ಚಿತ್ರಗಾರ, ಅವರ ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಕನ್ನಡ ವಿ.ವಿ. ಹಂಪಿಗೆ ೨೦೦೬ ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ ರಂಗೋಲಿ ಚಿತ್ರಕಲೆ ಸಾಂಸ್ಕೃತಿಕ ಅಧ್ಯಯನ ಹಾಗೂ ೨೦೦೭ರಲ್ಲಿ ಡಾ. ಮಲ್ಲಿಕಾರ್ಜುನ ಬಾಗೋಡಿ ಅವರ ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ ಗುಲ್ಬರ್ಗಾ ವಿ.ವಿ.ಗೆ ಸಲ್ಲಿಸಲಾಗಿದೆ. ಇವೆಲ್ಲವು ಚಿತ್ರಕಲೆಯ ಕುರಿತು ಬಂದ ಪಿಹೆಚ್.ಡಿ.



ಮಹಾಪ್ರಬಂಧಗಳು.

೨೦೦೦ರಲ್ಲಿ ಡಾ. ದೇವದಾಸ್ ಪ. ಕಳಸದ ಅವರ ಕನ್ನಡ ವೃತ್ತಿ ರಂಗಭೂಮಿ ಹಾಗೂ ರಂಗ ವಿನ್ಯಾಸ ಒಂದು ಶಾಸ್ತ್ರೀಯ ಅಧ್ಯಯನ ಹಾಗೂ ೨೦೦೫ರಲ್ಲಿ ಡಿ.ಎ. ಉಪಾಧ್ಯ ಅವರ ದೃಶ್ಯಕಲೆಗಳ ತೌಲನಿಕ ಅಧ್ಯಯನ, ಹಾಗೂ ೨೦೦೫ ರಲ್ಲಿ ಡಾ. ಆನಂದ ಪೂಜಾರ ಅವರ ಕರಾವಳಿ ಕರ್ನಾಟಕದ ಕಾವಿಚಿತ್ರಕಲೆ ಇವು ಕನ್ನಡ ವಿ.ವಿಗೆ ಸಲ್ಲಿಸಿದ ಡಿ.ಲಿಟ್. ಮಹಾಪ್ರಬಂಧಗಳಾಗಿವೆ.

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್ ಪದವಿಗಾಗಿ ಮಂಡಿಸಿದ ಚಿತ್ರಕಲಾವಿದ ಜೆ.ಎಸ್. ಖಂಡೇರಾವ್–ಒಂದು ಅಧ್ಯಯನ, ೨೦೦೩ರಲ್ಲಿ ಎ.ಎಸ್. ವಿಶ್ವನಾಥ ಅವರ ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣ, ೨೦೦೫ರಲ್ಲಿ ಶಂಕರ ಕುಂದಗೋಳ ಅವರ ಚಿತ್ರಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು ೨೦೦೫ರಲ್ಲಿ ಸಿ.ಡಿ. ಜಟ್ಟಣ್ಣವರ ಅವರ ಚಿತ್ರಕಲಾವಿದ ಎಂ.ವಿ. ಮಿಣಜಿಗಿಯವರ ಬದುಕು ಮತ್ತು ಕಲಾಕೃತಿಗಳು, ೨೦೦೬ರಲ್ಲಿ ಸುಚಿತ್ರಾ ಲಿಂಗದಳ್ಳಿ ಅವರ ವಿಜಯನಗರ ಭಿತ್ತಿ ಚಿತ್ರಕಲೆ, ರವಿ ನಾಯ್ಕ್ ಅವರ ಕಿನ್ನಾಳದ ಕಲೆ, ೨೦೦೭ರಲ್ಲಿ ಶಶಿಕಾಂತ ಬಸರಿಕಟ್ಟಿ ಅವರ ಕಲಘಟಗಿ ಕಲೆ, ೨೦೦೭ರಲ್ಲಿ ಉಮೇಶ್ ಅವರ ಜೈನ ಚಿತ್ರಕಲೆ, ೨೦೦೭ ರಲ್ಲಿ ಬಿ.ಎಂ. ಪಾಟೀಲ ಅವರ ನಿಪ್ಪಾಣಿವಾಡೆ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ ಹಾಗೂ ಶೈಲಾ. ಬರಡೋಲ ಅವರ ಸಂತ ಶುಭರಾಯರ ಜೀವನ ಮತ್ತು ಕಲಾಕೃತಿಗಳು ಇವೂ ಕೂಡ ಕನ್ನಡ ವಿ.ವಿ.ಗೆ ಸಲ್ಲಿಸಿದ ಎಂ.ಫಿಲ್ ಪ್ರಬಂಧಗಳಾಗಿವೆ.

ಇವೆಲ್ಲವೂ ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನ ಅಧ್ಯಯನಗಳಾಗಿದ್ದು, ಈಗ ಗುಲ್ಬರ್ಗಾ, ಬೆಂಗಳೂರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಮತ್ತು ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ಪಿಹೆಚ್.ಡಿ. ಮತ್ತು ಎಂ.ಫಿಲ್ ಸಂಶೋಧನ ಅಧ್ಯಯನಕ್ಕೆ ಹಲವಾರು ವಿದ್ಯಾರ್ಥಿಗಳು ಸೇರ್ಪಡೆಯಾಗಿ ಅಧ್ಯಯನದಲ್ಲಿ ನಿರತರಾಗಿದ್ದಾರೆ. ಇದಲ್ಲದೇ ಎಮ್.ವಿ.ಎ., ಎಂ.ಎಫ್.ಎ. ಸ್ನಾತಕೋತ್ತರ ಹಾಗೂ ಬಿ.ವಿ.ಎ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನ ಪ್ರಬಂಧಗಳು ರಚನೆಯಾಗಿದ್ದು ಅವುಗಳ ಸಂಖ್ಯೆ ನೂರೈವತ್ತಕ್ಕೂ ಮಿಕ್ಕಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆ ತೀವ್ರವಾಗಿ ಮುನ್ನೆಡೆಯುತ್ತಲಿದೆ. ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಬಲಗೊಳ್ಳುವ ಆಶಯವನ್ನು ನಿರೀಕ್ಷಿಸಬಹುದಾಗಿದೆ.



**ಬೆಳಗಾವಿ ಜಿಲ್ಲೆಯ ಚಿತ್ರಕಲೆ ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನಗಳು :**

* ಡಾ. ಶಿವರಾಮ ಕಾರಂತರು[೫] **ಕರ್ನಾಟಕದ ಚಿತ್ರಕಲೆ** ಎಂಬ ಪುಸ್ತಕವನ್ನು ಕನ್ನಡ ಹಾಗೂ ಇಂಗ್ಲೀಷ ಈ ಎರಡೂ ಭಾಷೆಯಲ್ಲಿ ಪ್ರಕಟಗೊಳಿಸಿದ್ದು, ಇದರಲ್ಲಿ ಉತ್ತರ ಕರ್ನಾಟಕದ ೧೮-೧೯ನೇ ಶತಮಾನದ ಭಿತ್ತಿಚಿತ್ರಗಳು ಶೀರ್ಷಿಕೆಯ ಅಡಿಯಲ್ಲಿ ಅಥಣಿ, ನಿಪ್ಪಾಣಿ ಹಾಗೂ ನರಗುಂದದ ಭಿತ್ತಿಚಿತ್ರಗಳ ಬಗ್ಗೆ ಹೇಳಿದ್ದು, ಚಿತ್ರಗಳ ಕುರಿತು ಚರ್ಚೆಯನ್ನು ಮಾಡಿರುವರು.

* ೧೯೯೩ರಲ್ಲಿ ಪ್ರಕಟಗೊಂಡ **ಕರ್ನಾಟಕದ ಜನಪದ ಚಿತ್ರಕಲೆ** ಎಂಬ ಸಂಶೋಧನ ಗ್ರಂಥದಲ್ಲಿ ಡಾ. ಎಸ್.ಸಿ. ಪಾಟೀಲರು[೬] ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನಲ್ಲಿರುವ ಪ್ರಾಗೈತಿಹಾಸಿಕ ಕಾಲದ ಚಿತ್ರಗಳನ್ನು ಕುರಿತು ಮಾಹಿತಿಗಳನ್ನು ನೀಡುವುದರ ಜೊತೆಗೆ ಅವುಗಳಲ್ಲಿಯ ಬಣ್ಣಗಳು, ರಚನಾ ವಿಧಾನದ ಬಗ್ಗೆ ವಿವರಗಳನ್ನು ಚರ್ಚಿಸಿದ್ದಾರೆ. ಹಾಗೂ ನಿಪ್ಪಾಣಿವಾಡೆಯ ಭಿತ್ತಿಯಲ್ಲಿರುವ ವರ್ಣಚಿತ್ರಗಳನ್ನು ಹೆಸರಿಸುತ್ತ, ಈ ಭಿತ್ತಿಚಿತ್ರಗಳನ್ನು ಪ್ರೌಢ ಕಲಾವಿದರು ಜನಪದ ಶೈಲಿಯಲ್ಲಿ ರಚಿಸಿದಂತವುಗಳಾಗಿವೆ ಎಂದಿರುವರು.

* ಡಾ. ಯಾದಪ್ಪ ಪರದೇಶಿಯವರು[೭] ೨೦೦೧ರಲ್ಲಿ ತಮ್ಮ ಪಿಎಚ್.ಡಿ. ಮಹಾಪ್ರಬಂಧವಾದ **ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ** ಎಂಬ ಪ್ರಬಂಧದಲ್ಲಿ ರಾಮದುರ್ಗದ ಬಳಿ ಇರುವ ಪ್ರಾಗೈತಿಹಾಸಿಕ ಚಿತ್ರಗಳು, ನಿಪ್ಪಾಣಿವಾಡೆಯ ಚಿತ್ರಗಳು, ಅಥಣಿಯ ಮಠದಲ್ಲಿಯ ಚಿತ್ರಗಳು ಮತ್ತು ಬೆಳಗಾವಿಯ ಚರ್ಚ್‌ಗಳ ಮೇಲೆ ಇರುವ ಗಾಜಿನ ಮೇಲಿನ ಚಿತ್ರಗಳ ಕುರಿತು ಅಧ್ಯಯನ ಮಾಡಿದ್ದಾರೆ.

* ಬಿ.ಎಂ. ಪಾಟೀಲರು[೮] ೨೦೦೭ರಲ್ಲಿ **ನಿಪ್ಪಾಣಿವಾಡೆಯ ಭಿತ್ತಿಚಿತ್ರಕಲೆ ಒಂದು ಅಧ್ಯಯನ** ಎಂಬ ಎಂ.ಫಿಲ್, ಪ್ರಬಂಧದಲ್ಲಿ ನಿಪ್ಪಾಣಿವಾಡೆಯಲ್ಲಿರುವ ಭಿತ್ತಿಚಿತ್ರಗಳನ್ನು ವರ್ಗೀಕರಿಸಿಕೊಂಡು ಅಧ್ಯಯನ ಮಾಡಿದ್ದಾರೆ.

---

೫. ಡಾ.ಶಿವರಾಮ ಕಾರಂತ : ಕರ್ನಾಟಕದ ಚಿತ್ರಕಲೆ

೬. ಡಾ.ಎಸ್.ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ, ೫೨

೭. ಡಾ. ಯಾದಪ್ಪ ಪರದೇಶಿಯವರು : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪಿಎಚ್.ಡಿ, ಮ.ಪ್ರ ಪುಟ, ೧೬೫

೮. ಬಿ.ಎಂ. ಪಾಟೀಲರು : ನಿಪ್ಪಾಣಿವಾಡೆಯ ಭಿತ್ತಿಚಿತ್ರಕಲೆ : ಒಂದು ಅಧ್ಯಯನ, ಎಂ.ಫಿಲ್, ಪ್ರಬಂಧ, ಪುಟ, ೫೬



* ಡಾ. ಅ.ಸುಂದರ ಅವರು[೯] **ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ** ಪುಸ್ತಕದಲ್ಲಿ ಬೆಳಗಾವಿ ಜಿಲ್ಲೆಯ ರಾಮದುರ್ಗ ಮತ್ತು ನವಿಲು ತೀರ್ಥ ಪ್ರದೇಶದಲ್ಲಿರುವ ಪ್ರಾಗೈತಿಹಾಸಿಕ ಚಿತ್ರಗಳು ಹಾಗೂ ಅವುಗಳ ರಚನಾ ಕಾಲದ ಬಗ್ಗೆ ಮಾಹಿತಿಗಳನ್ನು ಕುರಿತು ಹೇಳಿದ್ದಾರೆ.

* ಪಿ.ಆರ್. ತಿಪ್ಪೇಸ್ವಾಮಿ ಅವರು[೧೦] **ಕಲಾವಿದನ ನೆನಪುಗಳು** ಎಂಬ ಪುಸ್ತಕದಲ್ಲಿ ನಿಪ್ಪಾಣಿವಾಡೆಯ ರಚನೆಯ ಕುರಿತು ವರ್ಣಿಸುತ್ತಾ ವಾಡೆಯ ವಂಶಸ್ಥರ ಕುರಿತು ಹೇಳಿದ್ದಾರೆ.

* ಪ್ರೊ.ಬಿ.ಶೇಕ್ ಅಲಿ ಅವರು[೧೧] **ಕರ್ನಾಟಕ ಚರಿತ್ರೆ** ಗ್ರಂಥದ ೧೩ನೇ ಅಧ್ಯಾಯದಲ್ಲಿ ಸಾಂಸ್ಕೃತಿಕ ದೃಶ್ಯದ ಕುರಿತು ಹೇಳಿದ್ದು, ೧೮-೧೯ನೆಯ ಶತಮಾನದಲ್ಲಿ ಉತ್ತರ ಕರ್ನಾಟಕದ ಭಿತ್ತಿಚಿತ್ರಗಳ ಬಗ್ಗೆ ಮತ್ತು ನಿಪ್ಪಾಣಿ ವಾಡೆಯ ಭಿತ್ತಿಚಿತ್ರಗಳು ಇರುವುದಾಗಿ ಹೇಳಿದ್ದಾರೆ. ಅರಮನೆಯ ಶ್ಯಯಾಗಾರದಲ್ಲಿ ಕೃಷ್ಣ ಮತ್ತು ಅವನ ಪತ್ನಿಯ ಚಿತ್ರಗಳು ಸುಂದರವಾಗಿವೆ ಎಂದು ತಿಳಿಸಿದ್ದಾರೆ. ಜೊತೆಗೆ ಕರ್ಮವೀರ, ಸುಧಾ ಹಾಗೂ ವಾರಪತ್ರಿಕೆಗಳಲ್ಲಿ ಪರಿಚಯಾತ್ಮಕ ಲೇಖನಗಳು ಬಂದಿವೆ.

ಈ ಎಲ್ಲ ಪ್ರಯತ್ನಗಳನ್ನು ಗಮನಿಸಿ ಹೊಸ ವಿಷಯವನ್ನು ಸಂಗ್ರಹಿಸಿ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

---

೯. ಡಾ. ಅ.ಸುಂದರ, ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ, ಪುಟ. ೫೧

೧೦. ಪಿ.ಆರ್.ತಿಪ್ಪೇಸ್ವಾಮಿ : ಕಲಾವಿದನ ನೆನಪುಗಳು

೧೧. ಪ್ರೊ.ಬಿ.ಶೇಕ್ ಅಲಿ : ಕರ್ನಾಟಕ ಚರಿತ್ರೆ, ಪು. ೨೭೧



**ಅಧ್ಯಯನದ ಸ್ವರೂಪ :**

ಪ್ರಸ್ತುತ ಪ್ರಬಂಧವನ್ನು ಏಳು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಮೊದಲನೆಯ ಅಧ್ಯಾಯವು** ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ ಒಳಗೊಂಡಿರುತ್ತದೆ.

**ಎರಡನೆಯ ಅಧ್ಯಾಯದಲ್ಲಿ** ಬೆಳಗಾವಿ ಜಿಲ್ಲೆಯ ಭೌಗೋಳಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರದ ಕುರಿತಾಗಿದ್ದು, ಈ ಅಧ್ಯಾಯದಲ್ಲಿ ಜಿಲ್ಲೆಯ ಭೌಗೋಳಿಕ ಮತ್ತು ಸಾಂಸ್ಕೃತಿಕ ಪರಿಸರ, ಪೌರಾಣಿಕ, ಐತಿಹಾಸಿಕ ಹಿನ್ನೆಲೆ, ಚಿತ್ರಕಲೆ ಇವುಗಳ ಕುರಿತು ~~ಈ ಅಧ್ಯಯನದಲ್ಲಿ~~ ಚರ್ಚಿಸಲಾಗಿದೆ.

**ಮೂರನೆಯ ಅಧ್ಯಾಯವು** ಬೆಳಗಾವಿ ಜಿಲ್ಲೆಯ ಪ್ರಾಗೈತಿಹಾಸಿಕ ಹಾಗೂ ಜನಪದ ಚಿತ್ರಕಲೆಗೆ ಸಂಬಂಧಿಸಿದೆ. ಈ ಅಧ್ಯಾಯದಲ್ಲಿ ರಾಮದುರ್ಗದ ವಾಡೆ, ಖಾಜಿಗುಡ್ಡದಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ಚಿತ್ರಗಳನ್ನು ಕುರಿತು ಹೇಳಲಾಗಿದ್ದು, ಚಿತ್ರಗಳಿಗೆ ಬಳಸಿಕೊಂಡಿರುವ ತಂತ್ರ, ಶೈಲಿ, ವರ್ಣ ಸಂಯೋಜನೆ, ವಸ್ತುವಿಷಯಗಳ ಸ್ಥಿತಿಗತಿ ಕುರಿತು ವಿವರಿಸಲಾಗಿದೆ. ಹಾಗೂ ಜನಪದ ಕಲೆಗಳಲ್ಲಿ ಕಂಡುಬರುವ ಹಚ್ಚೆ, ಕಸೂತಿ, ಮದರಂಗಿ, ಕೌದಿ, ಅಷ್ಟೆ ಅಲ್ಲದೇ ವೃತ್ತಿಮೂಲ ಜನಪದ ಚಿತ್ರಕಲೆಯ ಕುರಿತು ಚರ್ಚಿಸಲಾಗಿದೆ. ಪ್ರಮುಖವಾಗಿ ಗೋಕಾಕಿನ ಪ್ರಸಿದ್ಧವಾದ ಆಟಿಕೆಯ ವಸ್ತುಗಳು, ಬೈಲಹೊಂಗಲದ ರಂಗಪರದೆಯ ಕಲಾವಿದರು ರಚಿಸುವಂತ ರಂಗಪರದೆಯ ಚಿತ್ರಗಳು. ಹಾಗೂ ಜನಪದ ಶಿಲ್ಪಗಳಲ್ಲಿ ವರ್ಣರಂಜಿತ ಚಿತ್ರಗಳು, ಹಾಗೂ ಪಾಶ್ಚಾಪುರದಲ್ಲಿ ದುರುಗಮುರಗಿ ಪೆಟ್ಟಿಗೆಯ ಮೇಲೆ ರಚಿಸುವಂತಹ ಚಿತ್ರಗಳ ರಚನಾ ವಿಧಾನ, ತಂತ್ರ, ಶೈಲಿ ಮತ್ತು ವರ್ಣಸಂಯೋಜನೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ. ಅಲ್ಲದೇ ಈ ವೃತ್ತಿಮೂಲ ಜನಪದ ಚಿತ್ರಗಾರರ ಮನೆತನದ ಇತಿಹಾಸ ಮತ್ತು ಸ್ಥಿತಿಗತಿಗಳ ಕುರಿತು ವಿವರಿಸಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ** ಬೆಳಗಾವಿ ಜಿಲ್ಲೆಯ ಭಿತ್ತಿಚಿತ್ರಕಲೆಯ ಕುರಿತದ್ದಾಗಿದೆ. ಈ ಅಧ್ಯಾಯದಲ್ಲಿ ನಿಪ್ಪಾಣಿಕರ ವಾಡೆ, ನಿಪ್ಪಾಣಿಯ ರಾಜವಾಡೆ, ಅಥಣಿಯ ಗಚ್ಚಿನ ಮಠ, ಬೆಳಗಾವಿಯ ಚರ್ಚ್‌ಗಳು ಮತ್ತು ಮನೆಗಳಲ್ಲಿ ಸಂಕೇಶ್ವರದ ಮಮದಾಪುರ ಅವರ ಮನೆ ಹಾಗೂ ಗೋಕಾಕ್ ತಾಲೂಕಿನ ಅರಬಾವಿಯ ಬಂಡಿವಡ್ಡರ ಅವರ ಮನೆಯಲ್ಲಿರುವ ಭಿತ್ತಿಚಿತ್ರಕಲೆಯ ಕುರಿತು ಚರ್ಚಿಸಲಾಗಿದೆ. ಒಟ್ಟಾರೆಯಾಗಿ ಈ ಚಿತ್ರಕಲೆಯ ಹಿನ್ನೆಲೆ, ಬೆಳವಣಿಗೆ, ಚಿತ್ರಗಳಿಗೆ ಬಳಸಿಕೊಂಡಿರುವ ತಂತ್ರ, ಶೈಲಿ, ವರ್ಣ ಸಂಯೋಜನೆ, ವಸ್ತುವಿಷಯಗಳು ಹಾಗೂ ಸ್ಥಿತಿಗತಿಗಳ ಕುರಿತು ಪರಿಶೀಲಿಸಲಾಗಿದೆ.



**ಐದನೆಯ ಅಧ್ಯಾಯವು** ಬೆಳಗಾವಿ ಜಿಲ್ಲೆಯ ಹಿರಿಯ ಕಲಾವಿದರ ಕುರಿತಾಗಿದೆ. ಈ ಅಧ್ಯಾಯದಲ್ಲಿ ಪ್ರಮುಖವಾಗಿ ಹಿರಿಯ ಕಲಾವಿದರ ಜೀವನ, ಕಲಾಶಿಕ್ಷಣ ಮತ್ತು ಕಲಾಕೃತಿಗಳು ಹಾಗೂ ಅವರ ಕಲಾ ಪ್ರತಿಭೆಗೆ ಸರ್ಕಾರ, ಸಂಘ, ಸಂಸ್ಥೆಗಳು ನೀಡಿದ ಪ್ರಶಸ್ತಿ, ಪುರಸ್ಕಾರ ಮತ್ತು ಸನ್ಮಾನಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

**ಆರನೆಯ ಅಧ್ಯಾಯವು** ಬೆಳಗಾವಿ ಜಿಲ್ಲೆಯ ಕಲಾಶಿಕ್ಷಣ ಸಂಸ್ಥೆಗಳು ಎಂಬುದಾಗಿದೆ. ಈ ಅಧ್ಯಾಯದಲ್ಲಿ ಮುಖ್ಯವಾಗಿ ಕಲಾಸಂಸ್ಥೆಗಳ ಹುಟ್ಟು ಬೆಳವಣಿಗೆ, ಕಲಾಶಿಕ್ಷಣ, ಕಲಾ ಚಟುವಟಿಕೆಗಳು, ಕಲಾಕೃತಿಗಳು, ಕಲಾಶಾಲೆಯ ಸ್ಥಿತಿಗತಿ ಈ ಎಲ್ಲ ವಿಷಯವನ್ನು ಒಟ್ಟುಗೂಡಿಸಿಕೊಂಡು ಸ್ಥೂಲವಾಗಿ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

**ಏಳನೆಯ ಅಧ್ಯಾಯವು** ಸಮಾರೋಪವಾಗಿದ್ದು ಪ್ರಸ್ತುತ ಅಧ್ಯಯನದಿಂದ ತಳೆದ ನಿಲುವುಗಳನ್ನು ಅಭಿವ್ಯಕ್ತಿಸಲಾಗಿದೆ.

**ಅಧ್ಯಯನದ ವ್ಯಾಪ್ತಿ :**

ಅಧ್ಯಯನದ ಹರುವು ಬಹಳಷ್ಟು ವಿಸ್ತಾರವಾಗಿದೆ. ಅದರಲ್ಲಿ ಸೇರಿದಂತೆಲ್ಲ ಹೊಸ ಹೊಸ ವಿಚಾರಗಳು ಹಾಗೂ ಕಳೆದುಹೋದ ಸಂಸ್ಕೃತಿಯ ಪಳಿವಳಿಕೆಗಳು ಅಧ್ಯಯನಕ್ಕೆ ಸ್ಪೂರ್ತಿ ನೀಡುತ್ತವೆ. ಈ ಅಧ್ಯಯನದ ವ್ಯಾಪ್ತಿಯು ಬೆಳಗಾವಿ ಜಿಲ್ಲೆಯ ಭೌಗೋಳಿಕ ಹಿನ್ನೆಲೆ, ಸಾಂಸ್ಕೃತಿಕ ಪರಿಸರ, ಚಿತ್ರಕಲೆ, ಹಿರಿಯ ಕಲಾವಿದರು, ಪ್ರಸ್ತುತದಲ್ಲಿರುವ ಕಲಾಶಾಲೆಗಳು, ಕಲಾಚಟುವಟಿಕೆಗಳನ್ನು ಕೇಂದ್ರವನ್ನಾಗಿಟ್ಟುಕೊಂಡಿರುವ ಪ್ರಸ್ತುತ ಅಧ್ಯಯನವು ತನ್ನದೇ ಆದ ವ್ಯಾಪ್ತಿ ಹಾಗೂ ಮಿತಿಗಳಿಗೆ ಒಳಪಟ್ಟಿದೆ.

ಈ ಅಧ್ಯಯನವು ಬೆಳಗಾವಿ ಜಿಲ್ಲೆಯ ಪ್ರಾಗೈತಿಹಾಸಿಕ ಕಾಲದ ಚಿತ್ರಗಳು, ಜನಪದ ಚಿತ್ರಕಲೆ, ಹಾಗೂ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದಂತಹ ಅರಸು ಮನೆತನಗಳ ಕಾಲಾವಧಿಯಲ್ಲಿ ಕಂಡುಬರುವ ಭಿತ್ತಿಚಿತ್ರಕಲೆ, ಶ್ರೀಮಂತ ಮನೆಯಲ್ಲಿರುವ ಭಿತ್ತಿಚಿತ್ರಕಲೆ ಹಾಗೂ ಚಿತ್ರಕಲೆಯ ಸ್ಥಿತಿಗತಿ, ಹಿರಿಯ ಕಲಾವಿದರು, ಕಲಾವಿದರ ಕಲಾಕೃತಿಗಳು, ಕಲಾಶಿಕ್ಷಣ ಸಂಸ್ಥೆಗಳು, ಕಲಾಚಟುವಟಿಕೆಗಳು ಮತ್ತು ಕಲಾಶಿಕ್ಷಣ ಸಂಸ್ಥೆಗಳ ಸ್ಥಿತಿಗತಿಗಳನ್ನು ಅಧ್ಯಯನದ ಕೇಂದ್ರವನ್ನಾಗಿ ಪರಿಗಣಿಸಲಾಗಿದೆ.

**ಅಧ್ಯಯನದ ವೈಧಾನಿಕತೆ :**

ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗಿ ದೊರಕುವ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ ಸಾಮಗ್ರಿ



೨. ಆನುಷಂಗಿಕ ಆಕರ ಸಾಮಗ್ರಿಗಳು

**೧. ಮೂಲ ಆಕರ ಸಾಮಗ್ರಿ :**

ಮೂಲ ಆಕರ ಸಾಮಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತಿ ಮುಖ್ಯವಾದ ಅಂಶವಾಗಿದೆ. ಅಧ್ಯಯನ ಕ್ರಮಕ್ಕೆ ಅಗತ್ಯವಾಗಿ ಬೇಕಾಗುವಂತಹ ವಿಧಾನ ಇದಾಗಿದ್ದು, ಯಾವುದೇ ಒಂದು ಕಲಾ ಸಂಸ್ಕೃತಿಯಂತಹ ವಿಷಯಗಳ ಸಂಶೋಧನೆಗೆ ಈ ಕ್ಷೇತ್ರಕಾರ್ಯ ಮುಖ್ಯವಾಗುತ್ತದೆ. ಇದು ಮೂಲ ಆಕರ ಸಾಮಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭವಾದ ಮಾರ್ಗ ಕೂಡ ಆಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮಗ್ರಿಯಾಗಿ ಭಿತ್ತಿಚಿತ್ರಕಲೆಗಳನ್ನು, ಕರಕುಶಲ ಕಲೆಗಳನ್ನು ಬಳಸಿಕೊಳ್ಳಲಾಗುವುದು.

ಕ್ಷೇತ್ರಕಾರ್ಯದಲ್ಲಿ ಅವಲೋಕನ ಪ್ರಮುಖವಾಗಿದ್ದು, ಮೂಲ ಚಿತ್ರಗಳಿರುವ ಸ್ಥಳಕ್ಕೆ ಅನೇಕ ಭಾರಿ ಭೇಟಿಕೊಟ್ಟು, ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿ ಛಾಯಾಚಿತ್ರಣ ಮಾಡಿಕೊಂಡು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಿಕೊಂಡು, ಸ್ಥಳೀಯ ಹಿರಿಯರ, ಕಲೆಯ ನೆಲೆಗಳ ಸಂಬಂಧಪಟ್ಟವರಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಮೂಲ ಚಿತ್ರಗಳು ಲಭ್ಯವಿಲ್ಲದ ಸಮಯದಲ್ಲಿ ಅವುಗಳನ್ನು ಪ್ರತಿಮಾಡಿಕೊಂಡು ಅಥವಾ ಛಾಯಚಿತ್ರ ಮಾಡಿಕೊಳ್ಳಲಾದೆ. ಈ ಕ್ಷೇತ್ರಕಾರ್ಯದಲ್ಲಿ ಹಲವಾರು ವಿದ್ವಾಂಸರ ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹೀಗೆ ಕ್ಷೇತ್ರಕಾರ್ಯದಿಂದ ದೊರೆತ ವಿವರಗಳನ್ನು ಅಧ್ಯಯನಕ್ಕೆ ಅನುಕೂಲವಾಗುವಂತೆ ಪಟ್ಟಿಕೆಗಳ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ರಚಿಸಲಾಗಿದೆ.

**೨. ಆನುಷಂಗಿಕ ಆಕರ ಸಾಮಗ್ರಿಗಳು :**

ಪ್ರಬಂಧ ರಚನೆಯಲ್ಲಿ ಎರಡನೆಯ ವಿಧಾನ ಆನುಷಂಗಿಕ ಆಕರ ಸಾಮಗ್ರಿಯಾಗಿದೆ. ಇದಕ್ಕೆ ಪ್ರಕಟಿತ ಮತ್ತು ಅಪ್ರಕಟಿತ ಗ್ರಂಥಗಳು, ನಿಘಂಟುಗಳು, ಗೆಜಿಟೆರಿಯರ್‌ಗಳು, ಸಂಪುಟಗಳು, ಅಭಿನಂದನಾಗ್ರಂಥಗಳು, ವಿಶ್ವಕೋಶಗಳು, ಸಂಶೋಧನ ಪ್ರಬಂಧಗಳು, ಸಂಶೋಧನ ಲೇಖನಗಳು, ಪತ್ರಿಕೆಗಳು, ನಿಯತಕಾಲಿಕೆಗಳು, ಛಾಯಾಚಿತ್ರಗಳನ್ನು ಹಾಗೂ ನಕಾಶಗಳನ್ನು ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗಿದೆ. ಹೀಗೆ ಆನುಷಂಗಿಕ ಆಕರ ಸಾಮಗ್ರಿಗಳನ್ನು ವಿವಿಧ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

* * * * *



ಕರ್ನಾಟಕ ಮತ್ತು ಮಹಾರಾಷ್ಟ್ರಕ್ಕೆ ಹೊಂದಿಕೊಂಡ ಆಕರ್ಷಣೀಯ ಭೌಗೋಳಿಕ ಪ್ರದೇಶದಲ್ಲಿ ನೆಲೆಗೊಂಡಿರುವ ವಿಶಿಷ್ಟ ಸಂಸ್ಕೃತಿಯ ತವರೂರು ಬೆಳಗಾವಿ ಜಿಲ್ಲೆಯಾಗಿದೆ. ಪಶ್ಚಿಮ ಘಟ್ಟಗಳ ಮಡಿಲಲ್ಲಿ ಧುಮ್ಮಿಕ್ಕುವ ಜಲಧಾರೆಗಳು, ಉಕ್ಕಿ ಹರಿಯುವ ಹೊಳೆಗಳು, ನಿತ್ಯ ಹರಿದ್ವರ್ಣ ಕಾಡಿನ ಛಾಯೆಯ ಹಿನ್ನೆಲೆಯಲ್ಲಿನ ಬೆಳಗಾವಿ ನಿತ್ಯ ನೂತನ. ಗೋವಾದ ಸಂಪರ್ಕ ಬೆಳಗಾವಿ ನಗರವನ್ನು ಮೆಟ್ರೋ ಸಂಸ್ಕೃತಿಗೆ ಒಗ್ಗಿಸಿಬಿಟ್ಟಿದ್ದರೆ, ಇಲ್ಲಿರುವ ಪುರಾತನ ಕೋಟೆ, ಕಮಲಬಸದಿ ಐತಿಹಾಸಿಕ ಮಹತ್ವ ಹೇಳುತ್ತದೆ. ಇದು ಹಿಂದೂ–ಮುಸ್ಲಿಂ ಹಾಗೂ ಕನ್ನಡ–ಮರಾಠಿ ಸಂಸ್ಕೃತಿಗಳ ಸಮ್ಮಿಲನ ತಾಣವಾಗಿದೆ. ಮೂಲತಃ ವೇಲು ಗ್ರಾಮ ಅಥವಾ ವೇಣು ಗ್ರಾಮ ಎಂಬ ಪದದಿಂದ ಬೆಳಗಾವಿ ಎಂಬ ಹೆಸರು ಬಂದಿದೆ. ವೇಣು ಅಥವಾ ವೇಲು ಎಂದರೆ ಬಿದಿರು ಎಂದರ್ಥ. ಬೆಳಗಾವಿ ಪ್ರದೇಶದ ಸುತ್ತಮುತ್ತ ವಿಪುಲವಾಗಿ ಬಿದಿರು ಬೆಳೆಯುವ ಈ ಸುಂದರ ತಾಣಕ್ಕೆ ಬೆಳಗಾವಿ ಎಂಬ ಹೆಸರು ಬರಲು ಕಾರಣವಾಗಿದೆ.[೧]

**ಬೆಳಗಾವಿ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ :**

ಇತಿಹಾಸ ಪ್ರಾರಂಭ ಕಾಲದಲ್ಲಿ ಕರ್ನಾಟಕವು ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತು. ಬೆಳಗಾವಿ ಜಿಲ್ಲೆಯ ದಕ್ಷಿಣ ಪಶ್ಚಿಮ ಭಾಗವು ಮೌರ್ಯ ಸಾಮ್ರಾಜ್ಯಕ್ಕೆ ಸೇರಿತ್ತೆಂದು

೧. ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ : ಬೆಳಗಾವಿ ಮೋಹಕ ನಿಸರ್ಗ, ವೈಭವಪೂರ್ಣ ಪರಂಪರೆ, ಮಾಹಿತಿ ಪತ್ರಿಕೆ, ಪುಟ ೧



ಅಶೋಕನ ಶಾಸನಗಳಿಂದ ತಿಳಿದುಬರುತ್ತದೆ. ಮೌರ್ಯ ಸಾಮ್ರಾಜ್ಯದ ಪತನಾನಂತರ ಬೆಳಗಾವಿ ಜಿಲ್ಲೆಯು ದಕ್ಷಿಣ ಒಡೆಯರಾದ ಶಾತವಾಹನರ ವಶವಾಯಿತೆಂದು ಶಾತವಾಹನರ ಶಾಸನಗಳಿಂದ ತಿಳಿಯಬಹುದು. ಕ್ರಿ.ಪೂ. ೩೨೭ ರಿಂದ ಕ್ರಿ.ಶ. ೨೨೯ರ ವರೆಗೆ ಈ ನಾಡು ಶಾತವಾಹನರ ಆಳ್ವಿಕೆಗೆ ಸೇರಿತ್ತೆಂದು ಇತಿಹಾಸದಿಂದ ತಿಳಿಯುತ್ತದೆ. ೧೯೬೫ ರಲ್ಲಿ ಬೆಳಗಾವಿ ಜಿಲ್ಲೆಯ ವಡಂಗಾವ, ಮಾದವಪೂರದ ಉತ್ಖನನದಲ್ಲಿ ಶಾತವಾಹನರಿಗೆ ಸಂಬಂಧಿಸಿದ್ದ ಬಹು ಸಂಖ್ಯೆಯಲ್ಲಿ ತಾಮ್ರ ಮತ್ತು ಬೆಳ್ಳಿ ನಾಣ್ಯಗಳು ದೊರೆತಿವೆ.[೨]

ಈ ನಾಣ್ಯಗಳು ಶಾತಕರಣಿ, ವಶಿಷ್ಟಪುತ್ರ ಪುಲುಮಾವಿ, ಯಜ್ಞಶ್ರಿ ಶಾತಕರಣಿ ಇವರ ಆಳ್ವಿಕೆಗೆ ಸಂಬಂಧಪಟ್ಟಿವೆ. ಬೆಳಗಾವಿಯು ಕಾಕತಿ ಎಂಬ ಪ್ರದೇಶ ವಾರಂಗಲ್ಲಿನ ಕಾಕತೀಯರ ಮೂಲ ಸ್ಥಾನವಾಗಿತ್ತು. ಶಾತವಾಹನರ ನಂತರ ಮುಂದೆ ಬಾದಾಮಿ ಚಾಲುಕ್ಯರದಾಯಿತು. ಕ್ರಿ.ಶ. ೭೬೦ ರಲ್ಲಿ ರಾಷ್ಟ್ರಕೂಟರು ಈ ನಾಡನ್ನು ತಮ್ಮ ಆಳ್ವಿಕೆಗೆ ಸೇರಿಸಿಕೊಂಡರು. ಖಾನಪುರದಲ್ಲಿರು ಹಲಸಿ ಗ್ರಾಮವು ಕ್ರಿ.ಶ. ೩೪೦ ರಿಂದ ಕದಂಬರ ರಾಜಧಾನಿಯಾಗಿತ್ತು. ನಂತರ ರಟ್ಟರ ರಾಜಧಾನಿಯಾಯಿತು. ಕ್ರಿ.ಶ. ೮೫೦ ರಿಂದ ಈ ಜಿಲ್ಲೆಯು ಬಹು ಭಾಗ ರಟ್ಟರಾಜರ ಹಿಡಿತದಲ್ಲಿದ್ದದ್ದು ಕಂಡುಬರುತ್ತದೆ. ಕ್ರಿ.ಶ. ೧೨೫೦ ರಿಂದ ೧೩೨೦ ರ ವರೆಗೆ ದೇವಗಿರಿ ಯಾದವರು ಈ ಜಿಲ್ಲೆಸಹಿತ ಸುತ್ತಮೂತ್ತಲಿನ ಬಹು ಭಾಗವನ್ನು ತಮ್ಮ ಅಧಿಕಾರಕ್ಕೆ ಸೇರಿಸಿಕೊಂಡರು.

ರಟ್ಟರ ಅಧಿಕಾರಿಯಾದ ಬೀಚಿರಾಜನು ಕ್ರಿ.ಶ. ೧೨೦೪ ರಲ್ಲಿ ನಿರ್ಮಿಸಿರುವ ಕಮಲ ಬಸದಿಯಿದೆ. ಇದು ವಿಶಾಲವಾಗಿ ಅರಳಿದ ಕಮಲದಿಂದ ಕೂಡಿರುವ ಅಷ್ಟಭುಜಾಕಾರದ ಮೇಲ್ಛಾವಣಿಯನ್ನು ಹೊಂದಿದೆ. ನೇಮಿನಾಥ ತೀರ್ಥಂಕರ ಪ್ರತಿಮೆ ಈ ಬಸದಿಯಲ್ಲಿದೆ. ಚಾಲುಕ್ಯರ ಶೈಲಿಯ ಸುಂದರವಾದ ಕಟ್ಟಡ ಇದಾಗಿದೆ. ಅತ್ಯುತ್ತಮ ನಿರ್ಮಾಣವೆನಿಸಿದ ಸಾಫ್ ಮಸಿದಿ ಇಲ್ಲಿದೆ. ಶಹಾಪೂರ ಪ್ರದೇಶದಲ್ಲಿಯ ಕಪಿಲೇಶ್ವರ ದೇವಾಲಯವು ಚಾಲುಕ್ಯರ ಕಾಲದ್ದಾಗಿದ್ದು ಈಗ ನವಿಕರಿಸಲಾಗಿದೆ. ಹಲಸಿಯು ಬೆಳಗಾವಿ ಜಿಲ್ಲೆಯ ಖಾನಾಪುರ ತಾಲೂಕಿನಲ್ಲಿದ್ದು ಖಾನಾಪುರ ತಾಲೂಕಿನಿಂದ ೧೪ ಕಿ.ಮೀ. ದೂರದಲ್ಲಿದೆ. ಇದು ಬನವಾಸಿಯ ಕದಂಬರ ೨ನೆಯ ರಾಜಧಾನಿಯಾಗಿತ್ತು. ಇಲ್ಲಿರುವ ಬೃಹತ್ ಭೂವರಾಹ ನರಸಿಂಹ ದೇವಾಲಯವನ್ನು ೧೨ನೇ ಶತಮಾನದಲ್ಲಿ ಕದಂಬರು ಪುನರ್ ನಿರ್ಮಿಸಿದರು.

ಈ ದೇವಾಲಯದಲ್ಲಿ ಸುಂದರವಾದ ವರಾಹ, ನರಸಿಂಹ, ನಾರಾಯಣ ಮತ್ತು ಸೂರ್ಯ ವಿಗ್ರಹಗಳಿವೆ. ಹಲಸಿಯಲ್ಲಿ ಒಂದು ಕೋಟೆ ಹಾಗೂ ಗೋಕರ್ಣೇಶ್ವರ, ಕಪಿಲೇಶ್ವರ, ಸ್ವರ್ಣೇಶ್ವರ ಮತ್ತು ಹಸ್ತಕೇಶ್ವರ ದೇವಾಲಯಗಳಿವೆ. ಸವದತ್ತಿಯಿಂದ ಐದು ಕಿ.ಮೀ.

---

೨. ಎಸ್.ಎ. ಭೋಜ, ರಾಘವೇಂದ್ರ ಜೋಶಿ, (ಸಂ), ಚೈತನ್ಯ, ಡಾ. ಸೂರ್ಯನಾಥ ಕಾಮತ್, (ಲೇ) ಬೆಳಗಾವಿ ಇತಿಹಾಸ-ಒಂದು ಪಕ್ಷಿ ನೋಟ, ಪುಟ, ೧೦೭, ೧೦೮



ದೂರದಲ್ಲಿ ಎಲ್ಲಮ್ಮನ ಗುಡ್ಡವಿದೆ. ಇದು ಬೆಟ್ಟದ ಮೇಲಿದ್ದು ಇದ ರಾಷ್ಟ್ರಕೂಟರ ಕಾಲದ ಬಸದಿಯಾಗಿದ್ದು, ಈಗ ಎಲ್ಲಮ್ಮನನ್ನು (ರೇಣುಕೆ) ಆರಾಧಿಸಲು ಬಳಸಿಕೊಳ್ಳಲಾಗುತ್ತಿದೆ. ಇಂದಿಗೂ ಈ ಕ್ಷೇತ್ರಕ್ಕೆ ಸಾವಿರಾರು ಭಕ್ತರು ಪ್ರತಿದಿನ ಆಗಮಿಸುತ್ತಾರೆ. ಈ ದೇವಸ್ಥಾನದ ಸಮೀಪ ಜೋಗುಳ ಭಾವಿಯಿದೆ. ಚರ್ಮ ರೋಗ ಪರಿಹಾರಕ್ಕಾಗಿ ಬಹಳ ಜನ ಈ ಭಾವಿಯ ಪ್ರಯೋಜನವನ್ನು ಪಡೆಯುತ್ತಿದ್ದಾರೆ. ಸವದತ್ತಿ ಪಟ್ಟಣದಲ್ಲಿ ೧೮ ನೆಯ ಶತಮಾನದಲ್ಲಿ ಕಟ್ಟಿಸಲಾದ ಕೋಟೆ ಇದೆ. ಇದನ್ನು ದೇಸಾಯಿಗಳು ಬೆಟ್ಟದ ಮೇಲೆ ಕಟ್ಟಿಸಿದ್ದಾರೆ.[೩]

ಕ್ರಿ.ಶ. ೧೨೫೦ ರಿಂದ ೧೩೩೦ರ ವರೆಗು ದೇವಗಿರಿ ಯಾದವರು ಈ ಜಿಲ್ಲೆಯ ಸುತ್ತ ಮುತ್ತಲಿನ ಬಹು ಭಾಗವನ್ನು ತಮ್ಮ ಆಳ್ವಿಕೆಗೆ ಒಳಪಟ್ಟಿರುವುದು ಚರಿತ್ರೆಯಿಂದ ತಿಳಿದುಬರುತ್ತದೆ. ಕ್ರಿ.ಶ ೧೬೮೬ ರಲ್ಲಿ ಈ ಜಿಲ್ಲೆ ಔರಂಗಜೇಬನ ಮೊಗಲ ಸಾಮ್ರಾಜ್ಯಕ್ಕೆ ಸೇರಿತ್ತು. ಕ್ರಿ.ಶ ೧೬೭೩ ರಲ್ಲಿ ಶಿವಾಜಿ, ಭೋಸಲೆ, ಹುಕ್ಕೇರಿ, ರಾಯಭಾಗಗಳನ್ನು ಸ್ವಲ್ಪ ಕಾಲ ಆಕ್ರಮಿಸಿದನು. ಕ್ರಿ.ಶ ೧೭೭೩ ರಲ್ಲಿ ಸವಣೂರಿನ ನವಾಬರು ಜಿಲ್ಲೆಯ ಒಡೆಯರಾದರು. ನಂತರ ಕ್ರಿ.ಶ. ೧೭೫೬ ರಲ್ಲಿ ಪೇಶ್ವೆ ಮಾಧವ ರಾಯನು ವಶಪಡಿಸಿಕೊಂಡನು. ಕ್ರಿ.ಶ.೧೮೧೮ ರಲ್ಲಿ ಬ್ರಿಟಿಷ್ ಒಡೆತನಕ್ಕೆ ಸೇರಲ್ಪಟ್ಟಿತು. ಕ್ರಿ.ಶ.೧೮೨೪ ರಲ್ಲಿ ಬ್ರಿಟಿಷರ ವಿರುದ್ಧ ಕಿತ್ತೂರು ರಾಣಿ ಚೆನ್ನಮ್ಮ ಹೂಡಿದ ಸ್ವತಂತ್ರ ಹೋರಾಟದಿಂದಾಗಿ ಕಿತ್ತೂರು ಪ್ರಸಿದ್ಧಿಯನ್ನು ಪಡೆದಿದೆ. ಈ ಸ್ಥಳದಲ್ಲಿ ಹಾಳುಬಿದ್ದ ಕೋಟೆಯ ಅವಶೇಷಗಳಿವೆ. ಕೋಟೆಯ ಒಳಗೆ ಕಲ್ಲೇಶ್ವರ ದೇವಾಲಯ, ಚೌಕಿಮಠ, ಹಿರೇಮಠಗಳೆಂಬ ವೀರಶೈವ ಮಠಗಳಿವೆ.[೪]

ತಾಲೂಕು ಕೇಂದ್ರವಾದ ಬೈಲಹೊಂಗಲದಲ್ಲಿ ಚನ್ನಮ್ಮಾಜಿಯ ಸಮಾಧಿ ಇದೆ. ಸಮಾಧಿಯ ಮೇಲೆ ಆಕೆಯ ಕಂಚಿನ ವಿಗ್ರಹವನ್ನು ಸ್ಥಾಪಿಸಲಾಗಿದೆ. ಕಿತ್ತೂರಿನಿಂದ ಐದು ಕಿ.ಮೀ. ದೂರದಲ್ಲಿರುವ ದೇವಗಾಂವನಲ್ಲಿ ಚಾಲುಕ್ಯ ಶೈಲಿಯ ಕಮಲನಾರಾಯಣ ದೇವಸ್ಥಾನವಿದೆ. ೧೨ನೇಯ ಶತಮಾನದಲ್ಲಿ ಗೋವೆಯ ಕದಂಬರು ಇದನ್ನು ಸ್ಥಾಪಿಸಿದರು ಎಂಬುದಾಗಿ ಚರಿತ್ರೆಯಿಂದ ತಿಳಿದುಬರುತ್ತದೆ. ಕ್ರಿ.ಶ. ೧೮೫೭ರ ಬಂಡಾಯದಲ್ಲಿ ಸೇರೆಯಾದ ನರಗುಂದದ ಬಾಬಾ ಸಾಹೇಬನ್ನು ಬ್ರಿಟಿಷರು ಬೆಳಗಾವಿಯಲ್ಲಿ ಗಲ್ಲಿಗೇರಿಸಿದ್ದು ಚರಿತ್ರಾರ್ಹ ಘಟನೆಯಾಗಿದೆ. ರಾಜ ರಾಜರೊಳಗಿರುವ ದ್ವೇಷ, ಅಸೂಯೆ, ಒಳಸಂಚಿನ ಬುದ್ಧಿಯೇ ಬ್ರಿಟಿಷರ ಆಕ್ರಮಣಕ್ಕೆ ಕಾರಣವಾಯಿತು ಎಂಬ ಮಾತಿನ ಸತ್ಯಾಂಶ ಹಿಂದಿನ ರಾಜರ ಯುದ್ಧಗಳಿಂದ ವೇದ್ಯವಾಗುತ್ತದೆ. ಆದರೂ ಈ ಅರಸರೆಲ್ಲರೂ ಕಲೆ, ಸಾಹಿತ್ಯ, ಸಂಸ್ಕೃತಿಗೆ ನೀಡಿದ ಕೊಡುಗೆ ಅನನ್ಯವಾದುದು.[೫]

೩. ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ : ಬೆಳಗಾವಿ ಮೋಹಕ ನಿಸರ್ಗ, ವೈಭವಪೂರ್ಣ ಪರಂಪರೆ, ಮಾಹಿತಿ ಪತ್ರಿಕೆ, ಪುಟ ೩, ೪

೪. ಕರ್ನಾಟಕ ಸರ್ಕಾರ, ಬೆಳಗಾವಿ ಜಿಲ್ಲೆಯ ಗೆಜಿಟೆರಿಯರ್ : ಪುಟ. ಸಂ. ೩, ೭೬

೫. ಕೆ. ಅನಂತರಾಮ ರಾವ್ : (ಸಂ), ಸುವರ್ಣ ಕರ್ನಾಟಕ ದರ್ಶನ ೫೦ ಸಂವತ್ಸರಗಳು, ಪುಟ, ೨೧



ಬೆಳಗಾವಿಯಲ್ಲಿ ೧೯೨೪ ಡಿಸೆಂಬರ್ ೨೬ ರಿಂದ ೨೮ರ ವರೆಗೆ ನಡೆದ ಕಾಂಗ್ರೆಸನ ೩೯ನೆಯ ಅಧಿವೇಶನದ ಅಧ್ಯಕ್ಷತೆಯನ್ನು ಮಹಾತ್ಮಾ ಗಾಂಧೀಜಿಯವರು ವಹಿಸಿದ್ದರು. ಸ್ವತಂತ್ರ ಹೋರಾಟದ ಮುಂಚೂಣಿಯಲ್ಲಿದ್ದ ಕರ್ನಾಟಕ ಗಾಂಧೀ ಎಂದೇ ಖ್ಯಾತರಾದ ಪಟ್ಟಿಯಲ್ಲಿ ಹುದಲಿಯ ಗಂಗಾಧರರಾವ್ ದೇಶಪಾಂಡೆ, ಸಂಪಂಗಿಯ ಚಣ್ಣಪ್ಪ ವಾಲಿ, ಚನ್ನಯ್ಯ ಸ್ವಾಮಿ, ಓಂಕಾರಮಠ, ಗುರ್ಲಹೊಸುರಿನ ಶ್ರೀರಂಗ ಕಾಮತ್, ಅಕ್ಕತಂಗೇರಹಾಳದ ಎಸ್.ಎ. ಕರಲಿಂಗನವರ, ಸವದತ್ತಿಯ ಶಂಕರಾವ್ ಪದಕಿ, ಕಡಬಿ ಶಿವಾಪೂರದ ಸಾತಪ್ಪ ಟೊಪ್ಪನ್ನವರ ಮುಂತಾದವರು ಪ್ರಮುಖರಾಗಿದ್ದಾರೆ. ಸ್ವತಂತ್ರ ಹೋರಾಟದ ಸಂದರ್ಭದಲ್ಲಿ ಬೆಳಗಾವಿ ಅತ್ಯಂತ ಕೆಚ್ಚೆದೆಯ ಹೋರಾಟದ ಬೀಡು ಎಂಬ ಖ್ಯಾತಿ ಪಡೆದಿದೆ.

ಬ್ರಿಟಿಷರೇ ಭಾರತ ಬಿಟ್ಟು ತೊಲಗಿ ಎಂದು ಸ್ವಾತಂತ್ರದ ಕಹಳೆ ಮೊಳಗಿದ ವೀರ ರಾಣಿ ಕಿತ್ತೂರಿನ ಚನ್ನಮ್ಮನ ಹೋರಾಟ ಚರಿತ್ರೆಯ ಮಹಿಳಾ ಸ್ವಾತಂತ್ರ ಹೋರಾಟಗಾರ್ತಿಯರ ಸಾಲಿನಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ವೀರರಾಣಿ ಕಿತ್ತೂರು ರಾಣಿ ಚನ್ನಮ್ಮನ ಸಮಕಾಲೀನರಾಗಿ ಸಂಗೋಳ್ಳಿ ರಾಯಣ್ಣ, ಅಮಟೂರು ಬಾಳಪ್ಪ, ಬಿಚ್ಚುಗತ್ತಿ ಚೆನ್ನಬಸಪ್ಪ, ಗಜವೀರ ಇವರು ಪ್ರಮುಖರಾಗಿದ್ದಾರೆ. ಬೈಲಹೊಂಗಲ ತಾಲೂಕು ಸ್ತ್ರೀ ಶಕ್ತಿ ಮತ್ತು ಸ್ವಾಭಿಮಾನಿ ಹೃದಯಿಗಳ ನೆಲೆಬೀಡಿಗೆ ಹೆಸರಾಗಿದೆ. ಇತಿಹಾಸದ ಪುಟಗಳಲ್ಲಿ ರಾರಾಜಿಸುವ ಬೆಳವಡಿ ಮಲ್ಲಮ್ಮ, ಕಿತ್ತೂರು ಚನ್ನಮ್ಮ ಈ ಮಣ್ಣಿನ ಕುಡಿಗಳು ಎಂಬುದು ವಿಶೇಷವಾಗಿದೆ.[೬]

ಬೆಳಗಾವಿ ಜಿಲ್ಲೆಯಲ್ಲಿ ನದಿಗಳು ಬಹು ಮುಖ್ಯವಾಗಿ ಪಾತ್ರವನ್ನು ವಹಿಸಿವೆ. ಬೆಳಗಾವಿ ಜಿಲ್ಲೆಯ ಜನರ ಜೀವಾಳವಾದ ಈ ನದಿಗಳು ಕೃಷಿ ಅಭಿವೃದ್ಧಿಗೆ ಸಹಾಯಕವಾಗಿವೆ. ಇಲ್ಲಿ ಹರಿಯುವ ಪ್ರಮುಖ ನದಿಗಳೆಂದರೆ ಪಶ್ಚಿಮ ಘಟ್ಟಗಳಲ್ಲಿ ಹರಿಯುವ ಈ ಕೃಷ್ಣಾ ನದಿಯು ೧೪೦೦ ಕಿ.ಮೀ. ವಿಸ್ತಾರವನ್ನು ಹೊಂದಿದೆ. ಮಹಾರಾಷ್ಟ್ರಾ, ಕರ್ನಾಟಕ, ಆಂಧ್ರ ಈ ಮೂರು ಜಿಲ್ಲೆಗಳಿಗೆ ಕೃಷ್ಣಾ ನದಿಯು ನೀರನ್ನು ಒದಗಿಸುತ್ತದೆ.

ಬ್ರಿಟಿಷರ ಆಡಳಿತದ ಅವಧಿಯಲ್ಲಿ ಬೆಳಗಾವಿ ಪ್ರತ್ಯೇಕ ಸ್ಥಾನಮಾನ ಪಡೆಯಿತು. ೧೮೩೬ ರಲ್ಲಿ ಜಿಲ್ಲಾ ಸ್ಥಾನವಾದ ಬೆಳಗಾವಿ ವಿಭಾಗ ಮಟ್ಟದಲ್ಲಿ ಕೇಂದ್ರ ಸ್ಥಾನವಾಯಿತು. ಪ್ರಸ್ತುತ ಕಂದಾಯ ವಿಭಾಗದಲ್ಲಿ ಧಾರವಾಡ, ವಿಜಾಪುರ, ಉತ್ತರಕನ್ನಡ, ಬಾಗಲಕೋಟೆ, ಹಾವೇರಿ ಹಾಗೂ ಗದಗ ಹೀಗೆ ಏಳು ಜಿಲ್ಲೆಗಳನ್ನು ಈ ಜಿಲ್ಲೆಯು ಒಳಗೊಂಡಿದೆ. ಬೆಳಗಾವಿ ಜಿಲ್ಲೆ ಬ್ರಿಟಿಷರ ಆಳ್ವಿಕೆಯಲ್ಲಿ ೧೮೩೬ಕ್ಕೂ ಮುನ್ನ ಧಾರವಾಡ ಪ್ರಿನ್ಸಿಪಲ್ ಕಲೆಕ್ಟರ್‌ರವರ ಅಧೀನಕ್ಕೆ ಒಳಪಟ್ಟಿತು. ನಂತರ ೨೮-೪-೧೮೩೬ ರಲ್ಲಿ ಇದನ್ನು ಪ್ರತ್ಯೇಕ ಕಂದಾಯ ವಿಭಾಗವನ್ನಾಗಿ ಪರಿವರ್ತಿಸಲಾಯಿತು. ಆ ಸಮಯದಲ್ಲಿ ಬೆಳಗಾವಿ ಜಿಲ್ಲೆ

೬. ಎಸ್.ಎ. ಭೋಜ, ರಾಘವೇಂದ್ರ ಜೋಶಿ, (ಸಂ), ಚೈತನ್ಯ, ಡಾ. ಸೂರ್ಯನಾಥ ಕಾಮತ್, (ಲೇ) ಬೆಳಗಾವಿ ಇತಿಹಾಸ-ಒಂದು ಪಕ್ಷಿ ನೋಟ, ಪುಟ, ೧೧೩



ಪರಸಗಢ, ಸಂಪಗಾಂವ, ಹುನಗುಂದ, ಬಾದಾಮಿ, ಪಾಶ್ಚಾಪುರ, ಚಿಕ್ಕೋಡಿ, ಬಾಗಲಕೋಟೆ, ಇಂಡಿ, ಮುದ್ದೇಬಿಹಾಳ ಮತ್ತು ಬೀಡಿ ತಾಲೂಕುಗಳನ್ನು ಒಳಗೊಂಡಿತ್ತು. ದಿನಾಂಕ ೯-೫-೧೮೩೮ ರಲ್ಲಿ ಧಾರವಾಡದಿಂದ ಪ್ರತ್ಯೇಕಗೊಂಡು ಸ್ವತಂತ್ರ ಜಿಲ್ಲೆಯಾಯಿತು.

ತದನಂತರ ಮೂರು ಉಪವಿಭಾಗಗಳಲ್ಲಿ ಈಗಿನ ಹತ್ತು ತಾಲೂಕುಗಳನ್ನು ಒಳಗೊಂಡಿತು ಅವುಗಳೆಂದರೆ ಬೆಳಗಾವಿ, ಅಥಣಿ, ರಾಯಬಾಗ, ಸೌವದತ್ತಿ, ಬೈಲಹೊಂಗಲ, ಖಾನಾಪುರ, ರಾಮದುರ್ಗ, ಗೋಕಾಕ, ಹುಕ್ಕೇರಿ, ಚಿಕ್ಕೋಡಿ. ಈ ತಾಲೂಕುಗಳ ಹೊಂದುವುದರ ಜೊತೆಗೆ ಮೂವತ್ತೈದು ಹೋಬಳಿಗಳು ಹೊಂದಿದೆ. ಬೆಳಗಾವಿ ಜಿಲ್ಲೆಯ ವಿಸ್ತೀರ್ಣ ೧,೩೪೧೫ ಕಿಲೋ ಮೀಟರ್‌ಗಳಷ್ಟು, ೪೨.೧೫ ಲಕ್ಷದಷ್ಟು ಜನಸಂಖ್ಯೆಯಷ್ಟು ಇದ್ದು, ಇದರಲ್ಲಿ ೨೧.೫೦ ಲಕ್ಷ ಪುರುಷರು ಹಾಗೂ ೨೦.೬೫ ಸ್ತ್ರೀಯರಾಗಿರುತ್ತಾರೆ. ರಾಜ್ಯಗಳ ಪುನರ್‌ವಿಂಗಡನೆ ಆಗುವವರೆಗೂ ಮುಂಬೈ ರಾಜ್ಯಕ್ಕೆ ಸೇರಿದ ಜಿಲ್ಲೆ ಇದು. ರಾಜ್ಯದ ಅತಿ ದೊಡ್ಡ ಜಿಲ್ಲೆಯನಿಸಿಕೊಂಡ ಬೆಳಗಾವಿಯು ಪ್ರಾಚೀನ ಜನವಸತಿ ನೆಲೆಯು ಕೂಡ ಆಗಿದೆ. ಬೆಂಗಳೂರಿನಿಂದ ೫೦೨ ಕಿಲೋಮಿಟರ್ ದೂರದಲಿದೆ.[೭]

ಬೆಳಗಾವಿ ಜಿಲ್ಲೆಯು ಮಂದಿರ ಮಸೀದಿಗಳ ಸಾಮರಸ್ಯಕ್ಕೆ ಉತ್ತಮ ಉದಾಹರಣೆಯಾಗಿದೆ. ಇಲ್ಲಿನ ಸ್ಮಾರಕಗಳು ಬಹುತೇಕ ೧೩ನೇ ಶತಮಾನದ ಆದಿಭಾಗದಲ್ಲಿ ನಿರ್ಮಿತವಾದವುಗಳಾಗಿವೆ. ಕೋಟೆಯಲ್ಲಿರುವ ಎರಡು ಮಸೀದಿಗಳು ಅತ್ಯಂತ ಕಲಾ ಕೌಶಲ್ಯ ಹೊಂದಿವೆ. ಸಾಫ್ ಮಸೀದಿ ಬೆಳಗಾವಿ ನಗರದಲ್ಲಿರುವ ಸುಮಾರು ೨೦ ರಿಂದ ೩೦ ಮಸೀದಿಗಳ ಪೈಕಿ ಅತ್ಯಂತ ಮನಮೋಹಕವಾಗಿದೆ. ಮಿನಾರ್‌ಗಳು, ಗುಂಬಜಗಳು, ಕಮಾನುಗಳು, ಮೊಘಲ್ ಮತ್ತು ಡೆಕ್ಕನ್ ಶೈಲಿಯ ಸಮ್ಮಿಲನಕ್ಕೆ ಇವು ಪ್ರಸಿದ್ಧವಾಗಿವೆ. ಜಾಮಿಯಾ ಭವನದಲ್ಲಿ ಹಾದು ಹೋಗುವ ವೃತ್ತಾಕಾರದ ಸ್ತಂಭಗಳ ಪೈಕಿ ಎರಡು ಸ್ತಂಭಗಳು ಹಿಂದೂ ಮುಸ್ಲಿಂ ಭಾವಕ್ಯತೆಯ ನಿದರ್ಶನದಂತಿವೆ. ಕೆಲವು ಸ್ತಂಭಗಳ ಮೇಲೆ ಕನ್ನಡ ಶಾಸನಗಳಿವೆ. ಇನ್ನು ಕೆಲವು ಪರ್ಶಿಯನ್ ಲಿಪಿಯನ್ನೊಳಗೊಂಡಿವೆ. ಈ ಪರ್ಶಿಯನ್ ಮಾಹಿತಿಯಲ್ಲಿ ಸಹಜವಾಗಿಯೇ ಕುರಾನಿನ ವಾಕ್ಯಗಳನ್ನು ಕೆತ್ತಲಾಗಿದೆ. ಕೋಟೆಯ ಪ್ರಾಕಾರದ ಎರಡು ಜೈನ ಬಸ್ತಿಗಳು ಚಾಲುಕ್ಯ ಶೈಲಿಯ ನಿರ್ಮಾಣಗಳಾಗಿವೆ. ಅವುಗಳ ಪೈಕಿ ಕಮಲ ಬಸ್ತಿಯಲ್ಲಿ ಕಪ್ಪು ಶಿಲೆಯ ನೇಮಿನಾಥನ ಮೂರ್ತಿಯುಂಟು. ಇಲ್ಲಿರು ಶ್ರೇಷ್ಟ ಕಲಾಕೃತಿಯೆಂದರೆ ಮುಖ ಮಂಟಪ, ಅಚ್ಚುಕಟ್ಟಾದ ಪುಷ್ಪ ವಿನ್ಯಾಸದ ಕಲಾ ನೈಪುಣ್ಯತೆಯನ್ನು ಹೊಂದಿದೆ.[೮]

---

೭. ಕೆ. ಅನಂತರಾಮ ರಾವ್, (ಸಂ) : ಸುವರ್ಣ ಕರ್ನಾಟಕ ದರ್ಶನ ೫೦ ಸಂವತ್ಸರಗಳು, ಪುಟ, ೨೧, ೨೨

೮. ಕರ್ನಾಟಕ ರಾಜ್ಯ ಪ್ರವಾಸೋಧ್ಯಮ ಅಭಿವೃದ್ಧಿ ನಿಗಮ ನಿಯಮಿತ : ಬೆಳಗಾವಿ ಮೋಹಕ ನಿಸರ್ಗ, ವೈಭವಪೂರ್ಣ ಪರಂಪರೆ, ಮಾಹಿತಿ ಪತ್ರಿಕೆ, ಪುಟ ೧



ನಗರದ ಹಲವು ವಿಶೇಷಗಳಲ್ಲಿ ಪುರಾತನ ಕಪಿಲೇಶ್ವರ ದೇವಾಸ್ಥಾನ, ಶಿವ ಮಂದಿರ, ಮಾರುತಿ ಮಂದಿರ, ವಿಠೋಬ ದೇವಸ್ಥಾನ ಪ್ರಮುಖವಾದವು. ಚರ್ಚ್‌ಗಳ ಪೈಕಿ ೧೮೬೯ ರಲ್ಲಿ ನಿರ್ಮಿಸಲಾದ ಅತ್ಯಂತ ರಮ್ಯವಾದ ಗೋಥಿಕ್ ಶೈಲಿಯ ಸೇಂಟ್ ಮೇರಿಸ್ ಚರ್ಚ್ ಆಕರ್ಷಕವಾಗಿದೆ. ವರ್ಣಮಯ ಗಾಜಿನ ಕಿಟಕಿಗಳಿಂದ ಕೂಡಿರುವ ಚರ್ಚ್‌ನ ಎಲ್ಲ ಗೋಡೆಗಳ ಮೇಲೆ ಬೈಬಲ್‌ನ ಪ್ರಸಂಗಗಳನ್ನು ಕೆತ್ತಲಾಗಿದೆ. ಸೇಂಟ್ ಝೇವಿಯರ್ಸ್ ಚರ್ಚ್ ಕೂಡ ಅತ್ಯಂತ ಪುರಾತನವಾಗಿದೆ. ಸೇಂಟ್ ಅಂಥೋಣಿ ಮತ್ತು ಕೆಥೆಡ್ರಲ್ ಆಫ್ ಅವರ್ ಲೇಡಿ ಮತ್ತು ಮೆಥಾಡಿಸ್ಟ್ ಚರ್ಚ್‌ಗಳೂ ಕೂಡಾ ಮುಖ್ಯವಾದುಗಳಗಿವೆ.

ವೇಣುಗ್ರಾಮವೆಂಬ ಹೆಸರನ್ನು ಹೊಂದಿದ ಬೆಳಗಾವಿ ಬಹಳ ಹಿಂದಿನಿಂದಲೂ ಸರ್ವಧರ್ಮಗಳ ತಾಣವಾಗಿದೆ. ಇಲ್ಲಿ ಜೈನರು ವಾಸಿಸುವ ಬಸದಿಗಳ ಪರಿಸರದ ಶೇರಿಗಲ್ಲಿ, ಮಠಗಲ್ಲಿ, ಬ್ರಾಹ್ಮಣರು ವಾಸಿಸುವ ಅನಂತಶಯನಗಲ್ಲಿ, ವೀರಶೈವರು ವಾಸಿಸುವ ಬಸವಣ್ಣಗಲ್ಲಿ– ಹೀಗೆ ಈ ಮೂರು ಬೀದಿಗಳು ಒಂದು ಇನ್ನೊಂದಕ್ಕೆ ಹತ್ತಿಕೊಂಡೇ ಇವೆ. ಈ ಮೂರು ಧರ್ಮಿಯರು ಸೌಹಾರ್ದದ ಸಹಬಾಳ್ವೆಗೆ ಹೆಸರಾದವರು.[೯]

**ಪೌರಾಣಿಕ ಹಿನ್ನೆಲೆ :**

ಭಾರತೀಯ ಪೌರಾಣಿಕ ಅಧ್ಯಯನದ ಹಿನ್ನೆಲೆಯಲ್ಲಿ ಬೆಳಗಾವಿಯನ್ನು ಗಮನಿಸಿದಾಗ ಇಲ್ಲಿ ಹಲವು ಪೌರಾಣಿಕ ಮಹತ್ವದ ಕ್ಷೇತ್ರಗಳು ಹಾಗೂ ಐತಿಹಾಸಿಕ ಚರಿತ್ರೆ ಹೊಂದಿದ ಸ್ಥಳಗಳು ಕಾಣಸಿಗುತ್ತವೆ. ಇವುಗಳಲ್ಲಿ ಐದು ರಾಮತೀರ್ಥಗಳು ಪ್ರಮುಖವಾಗಿವೆ.

೧. ಪರಗಿಢ ಕಿಲ್ಲಾ ೨. ರಾಮದುರ್ಗ ತಾಲೂಕಿನ ಮುಳ್ಳೂರು ೩. ಬೆಳಗಾವಿ ಸಮೀಪದ ಕಣಬುರ್ಗಿ ೪. ಅಥಣಿ ತಾಲೂಕಿನ ರಾಮತೀರ್ಥ ಹಾಗೂ ೫. ಖಾನಾಪುರ ತಾಲೂಕಿನ ಹಲಸಿ

ರಾಮನು ಈ ಐದು ಸ್ಥಳಗಳಲ್ಲಿ ರಾಮಲಿಂಗ ಪ್ರತಿಷ್ಠಾಪನೆ ಮಾಡಿದ ಎಂಬ ಐತಿಹ್ಯ ಈ ಸ್ಥಳಗಳಿಗೆ ಇದೆ. ಪರಸಗಢ ತಾಲೂಕಿನ ಶಿರಸಂಗಿಯಲ್ಲಿ ಋಷ್ಯಶೃಂಗ ಮುನಿಗಳು ಇದ್ದರು ಎಂಬ ಪ್ರತೀತಿ ಇದೆ. ಸವದತ್ತಿಯ ರೇಣುಕಾ ಯಲ್ಲಮ್ಮ ದೇವಿಯ ಸ್ಥಳ ಇದು ರಟ್ಟರ ಮೂಲ ರಾಜಧಾನಿ. ಜೈನರ ಪ್ರಖ್ಯಾತ ತೀರ್ಥ ಕ್ಷೇತ್ರ, ಇಲ್ಲಿನ ಕೋಟೆಯನ್ನು ಜಯಗೊಂಡ ದೇಸಾಯಿ ೧೭೩೪ ರಲ್ಲಿ ಕಟ್ಟಿಸಿದ್ದರು. ಪಸರಗಢ ದಾರಿಯಲ್ಲಿ ಮುಂದೆ ಸಾಗಿದರೆ ನಿಮಗೆ ಕಾಣಸಿಗುವುದೇ ಸವದತ್ತಿ ನಾಡಿನೆಲ್ಲಡೆ ಜನಜನಿತಗೊಳಿಸಿದ ಸುಪ್ರಸಿದ್ಧ ಯಲ್ಲಮ್ಮನ ದೇವಾಲಯ. ಜಮದಗ್ನಿ ಋಷಿಯ ಪತ್ನಿಯೇ ರೇಣುಕಾಂಬೆ. ಇವರ ಮಗ ಪರುಶುರಾಮ ನೆಲಸಿದ್ದ ಪವಿತ್ರ ಕ್ಷೇತ್ರ ಅಲ್ಲದೇ ಏಳು ಕೊಳ್ಳಗಳನ್ನು ಒಳಗೊಂಡಿದೆ. ಸೊಗಲದ ಸೋಮೇಶ್ವರ ದೇವಾಲಯ ಇದು ಮುರಗೋಡದ ಪಕ್ಕದ ಸ್ಥಳ. ಇದು

೯. ಸೂರ್ಯನಾಥ ಕಾಮತ : ಬೆಳಗಾವಿ ಜಿಲ್ಲೆಯ ಗೆಜಿಟೆರಿಯರ್, ಪುಟ, ಸಂ. ೭೨, ೭೩



ಅತ್ಯಂತ ಪುರಾತನವೂ ಆದ ಕ್ಷೇತ್ರ. ಕಮಲಾದಿತ್ಯ ಎಂಬ ಕವಿ ಕ್ರಿ.ಶ. ೯೮೦ ರ ಸುಮಾರಿಗೆ ಇದನ್ನು ಸೋಮೇಶ್ವರ ವರ್ಣಮಹಾಕ್ಷಿದೇವ ಎಂದು ಕರೆದಿರುವ ಹೇಳಿಕೆ ಕೂಡ ಕೇಳಿಬರುತ್ತದೆ.[೧೦]

ಗೊಡಚಿ ಕ್ಷೇತ್ರ ಇದು ರಾಮದುರ್ಗ ತಾಲೂಕಿನ ಗೊಡಚಿಯು ವೀರಭದ್ರನು ನೆಲೆಸಿದ ಪುರಾತನ ಕ್ಷೇತ್ರವಾಗಿದೆ. ಪ್ರತಿವರ್ಷ ಹೊಸ್ತಿಲು ಹುಣ್ಣಿಮೆಯ ದಿನ ಇಲ್ಲಿ ಜಾತ್ರೆ ನಡೆಯುತ್ತದೆ. ಎಡೂರು ಕ್ಷೇತ್ರ ಇದು ಕೃಷ್ಣಾ ನದಿ ತೀರದಲ್ಲಿ ಎಡೂರ ವಿರೂಪಾಕ್ಷಲಿಂಗ ದೇವಾಲಯವಿದ್ದು ಇದು ದಕ್ಷ ಬ್ರಹ್ಮನು ಯಜ್ಞಗೈದ ಸ್ಥಳವೆಂದು ಹೇಳಲಾಗುತ್ತದೆ. ಇದೇ ಬೆಳಗಾವಿ ಜಿಲ್ಲೆಯ ಕೊಣ್ಣೂರಿನಲ್ಲಿ ಪಾಂಡವರು ವಾಸವಾಗಿದ್ದರು ಎಂಬ ಐತಿಹ್ಯವು ಕೂಡ ತಿಳಿದು ಬರುತ್ತದೆ. ಕಪಿಲೇಶ್ವರ ಇದು ಬೆಳಗಾವಿ ನಗರದಲ್ಲಿದೆ. ಇದನ್ನು ದಕ್ಷಿಣ ಕಾಶಿ ಎಂದೇ ಕರೆಯಲ್ಪಡುತ್ತದೆ. ಭಾರತದಲ್ಲಿರುವ ೧೨ ಪ್ರಸಿದ್ಧ ಜ್ಯೋತಿರ್ಲಿಂಗಗಳ ಯಾತ್ರೆ ಮಾಡಿದ ನಂತರ ಕಪಿಲೇಶ್ವರನಿಗೆ ಪೂಜೆ ಸಲ್ಲಿಸಿದಾಗಲೇ ಕ್ಷೇತ್ರ ಯಾತ್ರೆಯ ಪವಿತ್ರ ಕಾರ್ಯ ಮುಕ್ತಾಯವಾಯಿತು ಎಂದು ಹೇಳಿಕೆ ಬಹಳ ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಮುಗಟಾಖಾನ್ ಹುಬ್ಬಳ್ಳಿ ಅಥವಾ ಎಂ.ಕೆ. ಹುಬ್ಬಳ್ಳಿ ಎಂದೇ ಕರೆಯಲ್ಪಡುವ ಸ್ಥಳ ನರಸಿಂಹ ದೇವಸ್ಥಾನ ಚವನ ಮಹರ್ಷಿಗಳ ತಾಣವಾಗಿತ್ತು ಎಂಬ ಐತಿಹ್ಯ ಹೊಂದಿದೆ. ಇಷ್ಟೇ ಅಲ್ಲದೆ ಇನ್ನೂ ಮುಂತಾದ ಪುರಾತನ ಸ್ಥಳಗಳನ್ನು ಕಾಣಬಹುದು, ಇಂದಿಗೂ ಬೆಳಗಾವಿ ಜಿಲ್ಲೆಯ ಪ್ರಸಿದ್ಧ ಯಾತ್ರಾ ಸ್ಥಳಗಳಾಗಿದೆ ಎಂದರೆ ತಪ್ಪಾಗಲಾರದು.[೧೧]

**ಸಾಂಸ್ಕೃತಿಕ ಪರಿಸರ :**

ಪ್ರಾಚೀನ ಕಾಲದಿಂದಲೂ ಮಾನವನ ಚಟುವಟಿಕೆಗಳ ನೆಲೆಬೀಡಾಗಿದ್ದ, ಬೆಳಗಾವಿ ಜಿಲ್ಲಾ ಪ್ರದೇಶ ಕರ್ನಾಟಕದ ವಿವಿಧ ಅರಸು ಮನೆತನದ ಆಳ್ವಿಕೆಯ ಅಡಿಯಲ್ಲಿ ಅಭಿವೃದ್ಧಿ ಹೊಂದಿ, ಕರ್ನಾಟಕ ಸಂಸ್ಕೃತಿಯನ್ನು ಸಮೃದ್ಧಗೊಳಿಸುವಲ್ಲಿ ಪ್ರಮುಖ ಪಾತ್ರವಹಿಸಿದೆ. ಬೆಳಗಾವಿ, ಹಲಸಿ, ಸವದತ್ತಿ, ಕಾದರವಳ್ಳಿ ಮುಂತಾದವು ಕಾಲದಿಂದ ಕಾಲಕ್ಕೆ ಮಹತ್ವದ ಆಡಳಿತ ಕೇಂದ್ರಗಳಾಗಿ ವರ್ತಿಸಿದ್ದವು. ಶಾತವಾಹನ, ಬನವಾಸಿ ಕದಂಬರು, ಬಾದಾಮಿ ಚಾಲುಕ್ಯರು, ಮಾಳಖೇಡದ ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಗೋವೆಯ ಕದಂಬರು, ಸವದತ್ತಿಯ ರಟ್ಟರು, ದೇವಗಿರಿಯ ಸೇವುಣರು ಮುಂತಾದ ರಾಜ ಮನೆತನಗಳ ಶಾಸನಗಳು ಈ ಪ್ರದೇಶದಲ್ಲಿ ಲಭ್ಯವಾಗಿವೆ.

---

೧೦. ವ್ಹಿ.ಸಿ.ಮಾಲಗತ್ತಿ : ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ, ೧೩, ೧೪

೧೧. ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತ : ಬೆಳಗಾವಿ ಮೋಹಕ ನಿಸರ್ಗ, ವೈಭವಪೂರ್ಣ ಪರಂಪರೆ, ಮಾಹಿತಿ ಪತ್ರಿಕೆ, ಪುಟ ೪, ೮, ೯, ೧೧



ವಿವಿಧ ಅರಸು ಮನೆತನಗಳು ಜಿಲ್ಲೆಯ ನೂರಾರು ಸ್ಥಳಗಳಲ್ಲಿ ಶೈವ, ವೈಷ್ಣವ, ಜೈನ ಮುಂತಾದ ಮತಗಳಿಗೆ ಪ್ರೋತ್ಸಾಹ ನೀಡಿ ಸ್ವತಃ ಇಲ್ಲವೇ ತಮ್ಮ ಅಧಿಕಾರಿಗಳ ಮೂಲಕ ದೇಗುಲಗಳ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಸುರೇಬಾನ, ದೇವಗಾಂವ, ದೇಗುಲವಲ್ಲಿ, ಕಿತ್ತೂರು, ನೇಸರಗಿ, ಮುನವಳ್ಳಿ ಮುಂತಾದ ಕಡೆ ಇರುವ ದೇಗುಲಗಳು ತಲವಿನ್ಯಾಸ, ಬಾಹ್ಯರೂಪು, ಆಂತರಿಕ ಅಲಂಕಾರ ವಿನ್ಯಾಸ ಇತ್ಯಾದಿ ದೃಷ್ಟಿಕೋನದಿಂದ ಗಮನಾರ್ಹವಾಗಿದ್ದು ವಾಸ್ತುಶಿಲ್ಪ ವೈವಿಧ್ಯತೆಯನ್ನು ಪರಿಚಯಿಸುತ್ತವೆ.

ಬೆಳಗಾವಿ ಜಿಲ್ಲೆಯ ಪ್ರದೇಶದಲ್ಲಿ ಅತಿ ಹೆಚ್ಚು ಸಂಖ್ಯೆಯಲ್ಲಿ ಕಾಣುವ ದೇವಾಲಯಗಳೆಂದರೆ 'ಫಂಸನಾ' ರೀತಿಯವು. ದ್ರಾವಿಡ ರೀತಿಯ ವಿಮಾನಗಳಿಗೆ ಹೋಲಿಸಿದರೆ ಇವು ತೀರ ಸರಳವಾಗಿ ಕಾಣುತ್ತವೆ. ಮಡಿಕೆಗಳುಳ್ಳ ಅಧಿಷ್ಟಾನ, ಅಲಂಕಾರ ರಹಿತ ಸರಳ ಭಿತ್ತಿ, ಒಂದೊರ ಮೇಲೊಂದರಂತೆ ಇರಿಸುವ, ಮೇಲಕ್ಕೆ ಹೋದಂತೆ ಪಿರಾಮಿಡ್ ಆಕಾರದಲ್ಲಿ ಕಿರಿದಾಗುತ್ತಾ ಸಾಗುವ ಕಪೋತ – ಗ್ರೀವ್‌ಗಳ ಅಡ್ಡ ಪಟ್ಟಿಗಳು, ಆ ಪಟ್ಟಿಗಳ್ಳ ಅಂಚಿನಗುಂಟ ಹಲ್ಲಿನಂತೆ ಕಾಣುವ ಅಲಂಕರಣಗಳು, ಮೇಲ್ಗಡೆ ಘಂಟೆಯಾಕಾರದ ಶಿಖರ ಹಾಗೂ ಕಲಶ ಇವು ಫಂಸನಾ ದೇವಾಲಯದ ಲಕ್ಷಣಗಳು. ಬೆಳಗಾವಿ ಜಿಲ್ಲೆಯಲ್ಲಿ ಏಕಕೂಟ, ದ್ವಿಕೂಟ, ತ್ರಿಕೂಟ ಮಾದರಿಯ ತಲವಿನ್ಯಾಸವಿರುವ ದೇಗುಲ ರೀತಿಗಳು ಅಸಂಖ್ಯವಾಗಿವೆ.[೧೨]

ಬೆಳಗಾವಿ ಜಿಲ್ಲೆಯು ವೈವಿಧ್ಯತೆಯ ಸಂಕೇತವಾಗಿದೆ. ಏಕೆಂದರೆ ಇಲ್ಲಿ ಎಲ್ಲಾ ಭಾಷೆಯನ್ನಾಡುವ ಜನರಿದ್ದಾರೆ. ಉದಾಹರಣೆಗೆ ಕನ್ನಡ, ಮರಾಠಿ, ಹಿಂದಿ, ಕೊಂಕಣಿ ಇನ್ನೂ ಮುಂತಾದವು. ಇಲ್ಲಿಯ ಭಾಷೆಗಳಲ್ಲಿ ಮರಾಠಿಯು ಹೆಚ್ಚು ಪ್ರಚಲಿತದಲ್ಲಿದೆ. ಏಕೆಂದರೆ ಕರ್ನಾಟಕದ ಬೆಳಗಾವಿ ಜಿಲ್ಲೆಯು ಮಹಾರಾಷ್ಟ್ರದ ಮೇರೆಗೆ ಹತ್ತಿರವಿರುದರಿಂದ ಮರಾಠಿ ಭಾಷೆಯ ಪ್ರಭಾವ ಹೆಚ್ಚು ಕಂಡುಬರುತ್ತದೆ. ಇಲ್ಲಿನ ಜನರ ಆಚಾರ ವಿಚಾರಗಳ ಕುರಿತು ಹೇಳುವುದಾದರೆ ಗಂಡಸರು ಹೆಚ್ಚಾಗಿ ಧೋತ್ರ, ಬಿಳಿ ಅಂಗಿ ಮತ್ತು ತಲೆಗೆ ಗಾಂಧಿ ಟೋಪಿ ಧರಿಸುವುದು ಸಾಮಾನ್ಯ, ಹೆಂಗಸರು ಕಚ್ಚೆ, ಕೈತುಂಬ ಬಳೆಗಳು, ಹಣೆಗೆ ದೊಡ್ಡದಾದ ಕುಂಕುಮ, ಕಾಲ್ಗಡಗಗಳು, ಅಲ್ಲದೇ ತಲೆಯ ಮೇಲೆ ಯಾವಾಗಲೂ ಸೀರೆಯ ಸೆರಗನ್ನು ಹಾಕಿಕೊಂಡಿರುತ್ತಾರೆ.

ಸಿಹಿ ತಿನಿಸುಗಳ ತಯಾರಿಕೆಯಲ್ಲಿ ಬೆಳಗಾವಿ ಜಿಲ್ಲೆಯು ಹೆಚ್ಚು ಪ್ರಸಿದ್ಧವಾಗಿದೆ. ಅದರಲ್ಲಿ ಬೆಳಗಾವಿಯ ಎ ವನ್ 'ಕುಂದಾ' ಎಂದೇ ಖ್ಯಾತಿ ಪಡೆದಂತಹ ಸಿಹಿ ತಿನಿಸಿಗೆ ಹೆಸರುವಾಸಿಯಾಗಿದೆ. ಅಲ್ಲದೇ ಗೋಕಾಕ ತಾಲೂಕು ಕರದಂಟು ಎಂಬ ಸಿಹಿ ತಿನಿಸುಗೆ ಪ್ರಸಿಧ್ಧಿಯನ್ನು ಪಡೆದಿದೆ. ಆಹಾರ ಪದಾರ್ಥಗಳಲ್ಲಿ ಜೋಳ, ಮೆಕ್ಕೆಜೋಳ, ಸಜ್ಜೆ ಇವುಗಳಿಂದ ತಯಾರಿಸಿದಂತ ರೊಟ್ಟಿ, ಚಪಾತಿ ಹಲವು ರೀತಿಯ ಕಾಳು, ಸೊಪ್ಪು ಪಲ್ಲೆಗಳು, ಸೇಂಗಾ,

---

೧೨. ವ್ಹಿ.ಸಿ.ಮಾಲಗತ್ತಿ, (ಸಂ), ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ, ೧೧೪

ಗುರೆಳ್ಳು, ಕೆಂಪುಕಾರ ಇನ್ನು ಮುಂತಾದ ಚಟ್ನಿಗಳನ್ನು ದಿನನಿತ್ಯ ಬಳಸಲಾಗುತ್ತದೆ. ಬೆಳಗಾವಿಯ ಚೂರುಮುರಿ, ಮಿರ್ಚಿ, ಸೇವುಕಾರಾ ಸಾಮಾನ್ಯವಾಗಿ ಉಪಯೋಗಿಸಲಾಗುವುದು.

ಹಬ್ಬಗಳಲ್ಲಿ ಪ್ರಮುಖವಾಗಿ ಯುಗಾದಿ, ಸಂಕ್ರಾಂತಿ, ದೀಪಾವಳಿ, ದಸರಾ, ಶಿವರಾತ್ರಿ, ಗಣೇಶ ಚತುರ್ಥಿ, ನಾಗರ ಪಂಚಮಿ, ಸುಗ್ಗಿ ಹಬ್ಬ, ಬಸವ ಜಯಂತಿ, ಕಾರಹುಣ್ಣಿಮೆ, ರಂಜಾನ್, ಇದ್ಮಿಲಾದ್, ಕ್ರಿಸ್ ಮಸ್, ಹಿಂದೂ ಮುಸ್ಲಿಂರ ಭಾವೈಕ್ಯತೆಯ ಸಂಕೇತವಾದ ಮೋಹರಂ ಹಬ್ಬವನ್ನು ಆಚರಣೆ ಮಾಡಲಾಗುತ್ತದೆ. ಅಲ್ಲದೇ ಇಲ್ಲಿ ಎಲ್ಲ ಧರ್ಮಗಳ ಹಬ್ಬಗಳನ್ನು ಆಚರಣೆ ಮಾಡಲಾಗುವುದು. ಈ ಪ್ರದೇಶದಲ್ಲಿ ಜರಗುವ ಪ್ರಮುಖ ಜಾತ್ರೆಗಳೆಂದರೆ ಸವದತ್ತಿಯ ಯಲ್ಲಮ್ಮ ದೇವಿಯ ಜಾತ್ರೆ, ಗೋಡಚಿಯ ಶ್ರೀ ವೀರಭದ್ರೇಶ್ವರ ಜಾತ್ರೆ, ಚಿಂಚಲಿಯ ಮಾಯಮ್ಮನ ಜಾತ್ರೆ, ಗೋಕಾಕನ ಲಕ್ಷ್ಮಿದೇವಿ ಜಾತ್ರೆ, ಮುರಗೋಡದ ಚಿದಂಬರೇಶ್ವರ ಜಾತ್ರೆ, ಇಸ್ಲಾಂಪೂರದ ದುರ್ಗಾದೇವಿ ಜಾತ್ರೆ, ಇನ್ನೂ ಹಲವು ಜಾತ್ರೆಗಳನ್ನು ಈ ಜಿಲ್ಲೆಯ ಗ್ರಾಮಗಳಲ್ಲಿ ಕಾಣಬಹುದು.[೧೩]

ವಸ್ತ್ರಗಳನ್ನು ನೆಯುವ ಕೆಲಸವನ್ನು ಬೆಳಗಾವಿ ಜಿಲ್ಲೆಯಲ್ಲಿ ಗೋಕಾಕ, ಚಿಕ್ಕೋಡಿ, ಸಂಕೇಶ್ವರ, ಬೈಲಹೊಂಗಲ, ಬೆಳಗಾವಿ, ಮುರಗೋಡ, ಅಥಣಿ, ದೇಶನೂರು, ಮುನ್ನೋಳ್ಳಿ, ಸವದತ್ತಿ, ಕಿತ್ತೂರು ಮುಂತಾದ ಗ್ರಾಮಗಳಲ್ಲಿ ವರ್ಷಕ್ಕೆ ಸುಮಾರು ಎರಡು ಲಕ್ಷ ರೂಪಾಯಿ ಬೆಲೆ ಬಾಳುವಷ್ಟು ವಸ್ತ್ರಗಳನ್ನು ತಯಾರಿಸಲಾಗುತ್ತದೆ. ಖಾದಿ ಅಥವಾ ಹಚ್ಚಡ, ಧಡೋತಿಯ ಸೀರೆಗಳು, ಖಣಗಳು, ಧಡೋತಿಯ ದೋತ್ರಗಳು, ಪಂಚೆಗಳು, ವೊಲ್ಲಿಗಳು, ಒರಟು ರುಮಾಲುಗಳು ಮುಂತಾದ ವಸ್ತ್ರಗಳನ್ನು ಈ ಎಲ್ಲ ಕಡೆಗಳಲ್ಲಿ ತಯಾರಿಸುತ್ತಾರೆ. ಬೆಲೆಯುಳ್ಳ ರುಮಾಲುಗಳು ಚಿಕ್ಕೋಡಿ, ದೇಶನೂರು, ಶಾಪೂರ, ಬೈಲಹೊಂಗಲ ಮುಂತಾದ ಸ್ಥಳಗಳಲ್ಲಿ ಸಾದಾ ರುಮಾಲುಗಳು ಒಕ್ಕಲಿಗರು ತಯಾರಿಸುತ್ತಾರೆ. ಚಿಕ್ಕೋಡಿಯಲ್ಲಿ ಮುಂಡಾಸುಗಳನ್ನು ತಯಾರಿಸುತ್ತಾರೆ. ಗೋಕಾಕ, ಅಥಣಿ, ಬೈಲಹೊಂಗಲ, ಶಾಪೂರಗಳಲ್ಲಿ ಬೆಲೆಬಾಳುವ ದೋತ್ರಗಳನ್ನು ತಯಾರಿಸಲಾಗುತ್ತದೆ. ಬೆಳಗಾವಿ, ಬೈಲಹೊಂಗಲ, ಮುಗುಟಾಖಾನಗಳಲ್ಲಿ ಜಮ್ಮಖಾನೆಗಳು ಹುಟ್ಟುತ್ತವೆ. ಇಂತಹ ಜಮ್ಮಖಾನೆಗಳನ್ನು ರತ್ನಗಂಬಳಿಗಳಂತೆ ಚಿತ್ರಗಳ ಚಿತ್ತಾರವಾಗಿ ರಚಿಸುತ್ತಾರೆ. ಮುಸ್ಲಿಂರೇ ಎಲ್ಲ ಕಡೆಯಲ್ಲಿ ಜಮ್ಮಖಾನೆಗಳನ್ನು ನೆಯುವರು.[೧೪]

ಬಣ್ಣ ಬಣ್ಣದ ಆಟಿಕೆವಸ್ತುಗಳಲ್ಲಿ ಚಿತ್ರಗಳ ತಯಾರಿಕೆಗೆ ಬೆಳಗಾವಿ ಜಿಲ್ಲೆಯ ಗೋಕಾಕ ಪ್ರಸಿದ್ಧಿಯಾಗಿದೆ. ಹನ್ನೆರಡು ಜೀನಗಾರರ ಮನೆಗಳಲ್ಲಿ ಈ ಆಟಿಗೆಯ ವಸ್ತುಗಳು ಹುಟ್ಟುತ್ತವೆ. ಈ ಆಟಗೆಯ ವಸ್ತುಗಳನ್ನು ಯುರೋಪಿಯನ್ನರು ತಮ್ಮ ದೇಶಕ್ಕೆ ಕೊಂಡೊಯುತ್ತಾರೆ.[೧೫]

---

೧೩. ವ್ಹಿ.ಸಿ.ಮಾಲಗತ್ತಿ, (ಸಂ), ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ, ಪುಟ, ೧೦೩, ೧೦೪

೧೪. ಕರ್ನಾಟಕ ಸರ್ಕಾರ, ಬೆಳಗಾವಿ ಜಿಲ್ಲೆಯ ಗೆಜಿಟೆರಿಯರ್ : ಪುಟ. ಸಂ. ૩૫૬, ૩૫૭

೧೫. ಪಿ.ಆರ್. ತಿಪ್ಪೇಸ್ವಾಮಿ, (ಸಂ), ಕಲಾಕೋಶ, ಡಾ. ಎಸ್.ಸಿ. ಪಾಟೀಲ, (ಲೇ), ಗೋಕಾಕ್ ಕಲೆ, ಪುಟ, ೧೪೬



ಬೈಲಹೊಂಗಲದ ಮರದ ಶಿಲ್ಪಗಳ ಮೇಲೆ ಚಿತ್ರಗಳನ್ನು, ಪಾಶ್ಚಾಪುರದಲ್ಲಿ ದುರುಗಮುರಗಿಯ ಪೆಟ್ಟಿಗೆಯ ಮೇಲಿನ ಚಿತ್ರಗಳನ್ನು ಬಿಡಿಸುತ್ತಾರೆ. ಆದರೆ ಅವುಗಳನ್ನು ಮಾಡುವ ಜೀನಗಾರರ ಮನೆಗಳು ಬೆರಳೆಣಿಕೆಯಷ್ಟಿವೆ.

ಬೆಳಗಾವಿ ಜಿಲ್ಲೆಯು ಎಲ್ಲ ಕ್ಷೇತ್ರಗಳಲ್ಲೂ ಸಮೃದ್ಧಿಯನ್ನು ಹೊಂದುವುದರ ಜೊತೆಗೆ ಚಿತ್ರಕಲೆಯಲ್ಲೂ ಸಮೃದ್ಧಿಯನ್ನು ಪಡೆದುಕೊಂಡಿದೆ. ಇತಿಹಾಸ ಪೂರ್ವದಿಂದ ಇಂದಿನ ವರೆಗೂ ಚಿತ್ರಕಲೆಯು ಮುಂದುವರೆದುಕೊಂಡು ಬಂದಿರುವುದನ್ನು ಈ ಜಿಲ್ಲೆಯಲ್ಲಿ ಗುರುತಿಸಬಹುದಾಗಿದೆ. ಆದಿಮಾನವನ ನೆಲೆಯಾಗಿದ್ದ ರಾಮದುರ್ಗದ ಬಳಿ ಇರುವ ಖಾಜಿಗುಡ್ಡದಲ್ಲಿರುವ ಇತಿಹಾಸ ಪೂರ್ವ ಚಿತ್ರಗಳನ್ನು ಗಮನಿಸಬಹುದಾಗಿದೆ. ಮುಂದೆ ರಾಷ್ಟ್ರಕೂಟರ ಶೈಲಿ, ಚಾಲುಕ್ಯರ ಶೈಲಿ, ಮೊಘಲ್ ಶೈಲಿ, ವಿಜಯನಗರ ಶೈಲಿ, ದಖ್ಖನ್. ಶೈಲಿಯ ವಾಸ್ತು ಕಟ್ಟಡಗಳ ರಚನೆ ಇಲ್ಲಿ ಕಂಡುಬರುತ್ತವೆ. ಜಿಲ್ಲೆಗೆ ಸಂಬಂಧಿಸಿದಂತೆ ಚಿತ್ರಕಲೆಯ ಕುರಿತು ಹೇಳುವುದಾದರೆ ರಾಜ ಮಹಾರಾಜರ ಕಾಲದಿಂದ್ಲೂ ಚಿತ್ರಕಲೆಗೆ ಸಾಕಷ್ಟು ಪ್ರೋತ್ಸಾಹವನ್ನು ನೀಡಿರುವುದು ಇತಿಹಾಸದಿಂದ ತಿಳಿದುಬರುತ್ತದೆ. ಆ ಚಿತ್ರಕಲೆಯಿಂದ ಪ್ರಭಾವಿತಗೊಂಡ ಕಲಾವಿದರು ಇಂದಿಗೂ ಕೂಡ ಚಿತ್ರಕಲೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಬೆಳಗಾವಿ ಜಿಲ್ಲೆಯ ಪ್ರಮುಖ ಹಿರಿಯ ಚಿತ್ರಕಲಾವಿದರೆಂದರೆ ಜಿ.ಎಸ್. ದಂಡಾವತಿಮಠ, ಎ.ಎಂ. ಚೆಟ್ಟಿ, ವ್ಹಿ.ಸಿ. ಮಾಲಗತ್ತಿ, ಕೆ.ಪಿ. ಕುಲಕರ್ಣಿ, ಚಂದ್ರಕಾಂತ ಕುಸನೂರ, ಭೀಮರಾವ ಮುರಗೋಡ, ಅಪ್ಪಾಸಾಹೇಬ, ಜಾನ್ ಫರ್ನಾಂಡಿಸ್, ಶ್ರೀ ಎನ್.ಎಂ. ಖರ್ಡೆ. ಇವರಲ್ಲದೆ ಇನ್ನೂ ಹಲವಾರು ಕಲಾವಿದರು ಈ ಜಿಲ್ಲೆಯ ಕಲಾ ಬೆಳವಣಿಗೆಗೆ ಸಲ್ಲಿಸಿದ ಸೇವೆ ಅಪಾರ.

ಇಂತಹ ಭವ್ಯ ಪರಂಪರೆಯನ್ನು ಹೊಂದಿರುವಂತ ಬೆಳಗಾವಿ ಜಿಲ್ಲೆಯು ಪ್ರತಿಯೊಂದು ಕ್ಷೇತ್ರದಲ್ಲಿ ತನ್ನ ಛಾಪನ್ನು ಮೂಡಿಸಿದೆ. ಸಾಂಸ್ಕೃತಿಕ ಕರ್ನಾಟಕ ಈಗಿನ ರಾಜಕೀಯ ಕರ್ನಾಟಕ ಪ್ರದೇಶಕ್ಕಿಂತ ಹಿರಿದಾದುದು. ಸಾಂಸ್ಕೃತಿಕ ಕರ್ನಾಟಕ ಆಗುವಲ್ಲಿ ಬೆಳಗಾವಿ ಜಿಲ್ಲೆಯ ಪಾತ್ರ ಮಹತ್ವವಾದದ್ದು ಹಾಗೂ ಸಂಸ್ಕೃತಿಗೆ ನೀಡಿದ ಕೊಡುಗೆ ಅನನ್ಯವಾದುದು.

* * * * *



**ಪ್ರಾಗೈತಿಹಾಸಿಕ ಹಿನ್ನೆಲೆ :**

**ಪ್ರಾಚೀನ ಶಿಲಾಯುಗ :**

ನದಿಗಳು ಬೆಟ್ಟಗಳ ಶ್ರೇಣಿಗಳನ್ನು ಹೊಂದಿರುವ ಬೆಳಗಾವಿ ಜಿಲ್ಲೆಯಲ್ಲಿ ಇತಿಹಾಸ ಪೂರ್ವಕಾಲದ ಅನೇಕ ನೆಲೆಗಳು ಕಂಡುಬರುತ್ತವೆ. ಈ ಜಿಲ್ಲೆಯಲ್ಲಿ ವಾಸಿಸಲು ಯೋಗ್ಯವಾದ ಪರಿಸರ ಇದ್ದುದ್ದರಿಂದ ಇತಿಹಾಸ ಪೂರ್ವಕಾಲದ ಮಾನವರು ಇಲ್ಲಿ ನೆಲೆಸಿದ್ದರೆಂದು ಹೇಳಬಹುದಾಗಿದೆ. ಬೆಳಗಾವಿ ಜಿಲ್ಲೆಯಲ್ಲಿ ಅಲ್ಪ ಪ್ರಮಾಣದಲ್ಲಿ ಪ್ರಾಚೀನ ಶಿಲಾಯುಗದ ನೆಲೆಗಳು ಸಿಕ್ಕಿವೆ, ಹಾಗೂ ಆರಂಭಿಕ ಶಿಲಾಯುಗ ಸಂಸ್ಕೃತಿಯ ಯುಗದ ಮಾನವರ ಅವಶೇಷಗಳು ಮಲಪ್ರಭ ಮತ್ತು ಘಟಪ್ರಭ ನದಿ ಕಣಿವೆಯಲ್ಲಿ ಸಿಕ್ಕಿವೆ. ಪರಸಗಡ ತಾಲೂಕಿನಲ್ಲಿ ಆರಂಭಿಕ ಶಿಲಾಯುಗ ಸಂಸ್ಕೃತಿಯ ಶಿಲಾ ಆಯುಧಗಳು ದೊರಕಿವೆ. ಮತ್ತು ಗೋಕಾಕ್‌ನಲ್ಲಿ ಅಲ್ಪ ಪ್ರಮಾಣದ ಪ್ರಾಣಿಗಳ ಅವಶೇಷಗಳು ಕಂಡುಬಂದಿವೆ.

ಈ ಜಿಲ್ಲೆಯಲ್ಲಿ ಇತಿಹಾಸ ಪೂರ್ವಕಾಲದ ಶಿಲಾ ಆಯುಧಗಳನ್ನು ತಯಾರಿಸಲು Quartzitic Sand Stone (ಕ್ವಾರ್ಟ್ಜಿಟಿಕ್ ಮರಳುಗಲ್ಲು) ನ್ನು ಬಳಸುತ್ತಿದ್ದರು. ಸಾಮಾನ್ಯವಾಗಿ ಎಲ್ಲ ಶಿಲಾಯುಧಗಳನ್ನು ತಯಾರಿಸಲು ಇಂತಹ ಕಲ್ಲನ್ನು ಉಪಯೋಗಿಸುತ್ತಿತ್ತು. ಇಲ್ಲಿ ಸಿಕ್ಕಿರುವಂತಹ ಶಿಲಾಯುಧಗಳೆಂದರೆ ಕೈ ಕೊಡಲಿಗಳು ಇದರ ಆಕಾರ ಇಂಗ್ಲೀಷ ಅಕ್ಷರವಾದ 'U' ಆಕಾರದಲ್ಲಿದೆ. ತಾಂತ್ರಿಕವಾಗಿ ಇದು ಮಧ್ಯ ಅಶೂಲಿಯನ್ ಮಾದರಿಯಲ್ಲಿದೆ.



ಡಾ. ಆರ್.ಎಸ್. ಪಾಪು ಅವರು ದಖ್ಖನ್ ಕಾಲೇಜಿನಲ್ಲಿ ಸ್ನಾತಕೋತ್ತರ ಮತ್ತು ಸಂಶೋಧನೆಯ ಸಂಸ್ಥೆಯಲ್ಲಿ ಇದ್ದರು. ಇವರು ಆರಂಭಿಕ ಅಶೂಲಿಯನ್ ಮಾದರಿಯ ವಸ್ತುಗಳನ್ನು ಬೆಳಗಾವಿ ಜಿಲ್ಲೆಯ ಹಲಗತ್ತಿ, ಸುನ್ನಾಳ ಮತ್ತು ಚಿಲಮೂರು ಶಿಲಾಯುಧಗಳನ್ನು ಸಂಶೋಧಿಸಿದರು, ಐನಾಪುರ ಘಟಪ್ರಭಾ ನದಿ ಕೊಳ್ಳದ ನೆಲೆಯಾಗಿದೆ. ಹಾಗೂ ಇಂತಹ ಮಾದರಿಯ ಶಿಲಾಯುಧಗಳನ್ನು ಮಲಪ್ರಭ ನದಿ ಕಣಿವೆಯಲ್ಲಿ ಇದ್ದುದ್ದನ್ನು ಗುರುತಿಸಿದರು. ಡಾ. ಅ.ಸುಂದರ ಅವರು ಮಧ್ಯ ಪ್ರಾಚೀನ ಶಿಲಾಯುಗದ ನೆಲೆಗಳಾದ ಮಮದಾಪೂರ, ಪಾಶ್ಚಾಪುರ, ಅಥಣಿ ತಾಲೂಕಿನ ರೋಲಿ, ಜೈನಾಪುರ್, ಶಿಲಾಯುಧಗಳನ್ನು ಗುರುತಿಸಿದ್ದಾರೆ. ಹಾಗೆಯೇ ನಂತರದ ಪ್ರಾಚೀನ ಶಿಲಾಯುಗದ ನೆಲೆಯಾದ ಯಾದವಾಡದಲ್ಲಿ ಅನೇಕ ದಿನನಿತ್ಯದ ಚಟುವಟಿಕೆಯ ಅವಶೇಷಗಳು ದೊರೆತಿವೆ.[೧]

**ನೂತನ ಶಿಲಾಯುಗ :**

ಡಾ. ಅ.ಸುಂದರ ಅವರು ಅನೇಕ ನೂತನ ಶಿಲಾಯುಗದ ನೆಲೆಗಳನ್ನು ಗುರುತಿಸಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಕಿತ್ತೂರು, ಹಲಗಾ, ಕುಡಚಿ, ಅಥಣಿ ತಾಲೂಕಿನ ಸಪ್ತಸಾಗರ, ಗೋಕಾಕ ತಾಲೂಕಿನ ಕೊಣ್ಣೂರು ಮತ್ತು ಎಕ್ಸಂಬಾ ಮಾರಡಗಿ ಇನ್ನೂ ಮುಂತಾದವುಗಳು. ಈ ನೆಲೆಗಳಲ್ಲಿ ಕಂದು ವರ್ಣದ ಮಸ್ಕಿ ಮಾದರಿಯ ಮಡಿಕೆ ಭಾಗ ದೊರೆತಿದ್ದು, ಇಬ್ಬದಿ ನೀಳ ಚಕ್ಕೆಗಳನ್ನು ಚರ್ಟ್‌ಶಿಲೆಯಲ್ಲಿ ರೂಪಿಸಲಾಗಿದೆ. ಮತ್ತು ಅತ್ಯಂತ ಶ್ರೀಮಂತವಾದ ಕೆಂಪು ಮತ್ತು ಕಪ್ಪು ಬಣ್ಣದ ಮಡಿಕೆಗಳು ವಿವಿಧ ಆಕಾರಗಳಲ್ಲಿ ದೊರೆತಿವೆ. ಈ ಮಡಿಕೆಯ ಮಾದರಿಯು ಮಾಳ್ವ ಮತ್ತು ಜೋರ್ವೆ ಸಂಸ್ಕೃತಿಯ ಮಡಿಕೆಗಳನ್ನು ಹೋಲುತ್ತವೆ. ಅಲ್ಲದೇ ಈ ಮಡಿಕೆಯ ಮೇಲೆ ಸುಂದರವಾದ ರೇಖಾಚಿತ್ರಗಳ ವಿನ್ಯಾಸವು ಸಹ ಕಂಡುಬಂದಿವೆ ಎಂದು ತಿಳಿಯಲಾಗಿದೆ. ಈ ಮಡಿಕೆಗಳಿಗೆ ಕಡು ಕಪ್ಪು ಮತ್ತು ಕೆಮ್ಮಣ್ಣಿನ ಬಣ್ಣ ಹಾಗೂ ಅಪರೂಪವಾಗಿ ಕೆಂಪು ಬಣ್ಣವನ್ನು ಬಳಸುತ್ತಿದ್ದರು. ಮಡಿಕೆಯ ಮೇಲಿನ ಚಿತ್ರಗಳು ನವ ಶಿಲಾಯುಗದ ಮಾನವನ ಕಲಾಪ್ರಿಯತೆಯ ದ್ಯೂತಕ. ಇವುಗಳಲ್ಲಿ ಕೆಲವು ಆ ಕಾಲದ ಧಾರ್ಮಿಕ ಜೀವನ ಇಲ್ಲವೆ ಹಬ್ಬದ ಆಚರಣೆಗೆ ಸಂಬಧಿಸಿದವುಗಳಾಗಿವೆ.[೨]

**ಶಿಲಾ–ತಾಮ್ರ ಯುಗ :**

ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ನೆಸೂರ್, ಶೇಗುಣಿಸಿ, ಸತ್ತಿ, ಸಪ್ತಸಾಗರ, ಗೋಕಾಕ್ ತಾಲೂಕಿನ ಕಲ್ಲೋಳಿ, ಕೊಣ್ಣೂರು, ದ್ಯಾಗನಹಳ್ಳಿ, ಚಿಕ್ಕೋಡಿ ತಾಲೂಕಿನ ಎಕ್ಸಂಬಾ, ಕಲೋಳ, ಸದಲಗಾ, ಬೆಳಗಾವಿ ತಾಲೂಕಿನ ಕಿತ್ತೂರು, ರಾಮದುರ್ಗ ತಾಲೂಕಿನ

---

೧. ಸೂರ್ಯನಾಥ ಕಾಮತ : ಬೆಳಗಾವಿ ಜಿಲ್ಲೆಯ ಗೆಜಿಟೆರಿಯರ್, ಪುಟ. ೭೩

೨. ಡಾ.ಕೆ.ಬಿ. ಶಿವತಾರಕ್ : ಕರ್ನಾಟಕದ ಪುರಾತತ್ವ ನೆಲೆಗಳು, ಪುಟ, ೫೧೨,



ಕಲ್ಲೂರು, ರಾಮದುರ್ಗ, ರಾಯಬಾಗ ತಾಲೂಕಿನ ಕುಡಚಿ, ಕುಡೆನಿ, ಮುಗಳಖೋಡ, ಯರಗಟ್ಟ, ಸಾಸಲಹಳ್ಳಿ, ಹಾರೂಗೇರಿ ಈ ನೆಲೆಗಳಲ್ಲಿ ಕಂಡುಬಂದತಹ ತಾಮ್ರ-ಶಿಲಾ ಯುಗದ ಅವಶೇಷಗಳೆಂದರೆ, ಇಬ್ಬದಿ ನೀಳಚಕ್ಕೆ, ಕಪ್ಪು ವರ್ಣದಲ್ಲಿ ಚಿತ್ರಿಸಿದ ಕೆಂಪು ಮಡಿಕೆ ಉಜ್ಜಿ ನಯಗೊಳಿಸಿದ ಉಪಕರಣಗಳು, ಬೂದಿ ದಿಬ್ಬ ದೊರೆತಿವೆ. ಈ ಸಂಸ್ಕೃತಿಯ ಕಂದು, ಕಪ್ಪು-ಕಂದು ಮತ್ತು ತಿಳಿ ಕೆಂಪು ವರ್ಣದ ಮಡಿಕೆ, ಕೆಲವು ಕಾಗೆಬಂಗಾರ ಮಿಶ್ರಿತ, ಮತ್ತೆ ಕೆಲವು ಕೊರೆದ ಚಿತ್ರಗಳುಳ್ಳ ಮಡಿಕೆ ಭಾಗ, ಅರೆಯುವ ಕಲ್ಲು, ಮೂಳೆ ಹಾಗೂ ಈ ಕಾಲದ ವರ್ಣ ಚಿತ್ರಗಳು ಗವಿಯಲ್ಲಿ ಕಾಣಿಸುವುದರ ಜೊತೆಗೆ ಇನ್ನೂ ಮುಂತಾದ ಅವಶೇಷಗಳು ದೊರೆತಿವೆ.[೩]

**ಬೃಹತ್ ಶಿಲಾಯುಗ :**

ಕರ್ನಾಟಕದಲ್ಲಿ ಬೃಹತ್ ಶಿಲಾಯುಗವು ಆರಂಭವಾದಾಗ ಅಂದಿನ ಮಾನವರು ದಿನನಿತ್ಯದ ಬಳಕೆಯಲ್ಲಿ ಕಲ್ಲಿನ ಬದಲಿಗೆ ಕಬ್ಬಿಣವನ್ನು ಆಯುಧಗಳನ್ನು, ವಸ್ತುಗಳನ್ನು ತಯಾರಿಸಲು ಪ್ರಾರಂಭಿಸಿದರು. ಬೃಹತ್ ಶಿಲಾಯುಗದ ಸಂಸ್ಕೃತಿಯ ಜನರು ಬೃಹದಾಕಾರದ ಬಂಡೆಗಳನ್ನು ಕೊರೆದು ಅದನ್ನು ನಿರ್ದಿಷ್ಟ ಸ್ಥಳಕ್ಕೆ ಸಾಗಿಸುವಲ್ಲಿ ವಿವಿಧ ಪ್ರಕಾರದ ಕಲ್ಗೋರಿಗಳನ್ನು ನಿರ್ಮಿಸುವಲ್ಲಿ ಕುಶಲತೆಯನ್ನು ತೋರಿದ್ದಾರೆ. ಈ ಸಂಸ್ಕೃತಿಯ ಜನರು ತೋರಿದ ವಾಸ್ತು ವೈವಿಧ್ಯತೆಯನ್ನು ಹೀಗೆ ಗುರುತಿಸಬಹುದು. ೧) ಹಾದಿಕೋಣೆ ಗೋರಿಗಳು. ೨) ಕಿಂಡಿಕೋಣೆ ಗೋರಿಗಳು. ೩) ವರ್ತುಲ ಕಲ್ಗುಪ್ಪೆಗಳು ಮತ್ತು ೪) ಗುಂಡಿ ವೃತ್ತಗಳು ಇಂತಹ ಆಕಾರದ ಗೋರಿಗಳನ್ನು ಬೆಳಗಾವಿ ಜಿಲ್ಲೆಯಲ್ಲಿ ಹಿಡಕಲ್ ಡ್ಯಾಮ್, ಗೋಡಗೇರಿ, ಗೊಡಚಿನಮಲಕಿ, ಸುನದಟ್ಟಿ, ಕೊಣ್ಣೂರು, ಐನಾಪೂರ, ಸಾವಳಗಿ, ತಲ್ಲೂರು, ಸವದತ್ತಿ ಮುಂತಾದ ಪ್ರದೇಶಗಳಲ್ಲಿ ಕಂಡುಬರುತ್ತವೆ. ಈ ಜಿಲ್ಲೆಯ ಎಲ್ಲ ಬೃಹತ್ ಶಿಲಾಯುಗದ ನೆಲೆಗಳನ್ನು ಡಾ. ಅ.ಸುಂದರ ಅವರು ಸಂಶೋಧಿಸಿದ್ದಾರೆ. ಅ. ಸುಂದರ ಅವರು ಈ ಶಿಲಾಗೋರಿಗಳು ಕ್ರಿ.ಪೂ. ೧೨೦೦ ರಿಂದ ಕ್ರಿ.ಪೂ ೭೦೦ ಕಾಲಾವಧಿಗೆ ಸಂಬಂಧಿಸಿದವುಗಳಾಗಿವೆ ಎಂದು ಗುರುತಿಸಿದ್ದಾರೆ.[೪] ಅಲ್ಲದೆ ಸುರೇಬಾನದಲ್ಲಿ ಇದೇ ಕಾಲದ ವರ್ಣಚಿತ್ರಗಳು ಗವಿಯಲ್ಲಿ ದೊರೆತಿವೆ.[೫]

---

೩. ಡಾ.ಕೆ.ಬಿ. ಶಿವತಾರಕ್ : ಕರ್ನಾಟಕದ ಪುರಾತತ್ವ ನೆಲೆಗಳು, ಪುಟ, ೫೨೬, ೫೩೧,

೪. ಅ. ಸುಂದರ : ದಿ ಅರ್ಲಿ ಚೇಂಬರ್ ಟೂಂಬ್ಸ್ ಆಫ್ ಸೌತ್ ಇಂಡಿಯಾ, ಪಟ, ೧೫,

೫. ಸೂರ್ಯನಾಥ ಕಾಮತ : ಬೆಳಗಾವಿ ಜಿಲ್ಲೆಯ ಗೆಜಿಟೆರಿಯರ್, ಪುಟ. ೭೪, ೭೫.



ಪ್ರಾಗೈತಿಹಾಸಿಕ ಚಿತ್ರಕಲೆಯ ಪ್ರಾಚೀನತೆ ಬಗ್ಗೆ ನಿಖರವಾದ ಕಾಲಸೂಚಿ ಹೇಳುವುದು ಅಸಾದ್ಯವಾದುದಾರೂ ಮನುಷ್ಯ ಪ್ರಪಂಚಕ್ಕೆ ಕಾಲಿಟ್ಟು, ಅವನು ಕಲೆಯ ಹೊಳವುಗಳನ್ನು ಹಾಕಿಕೊಂಡು, ಅವನು ನಿತ್ಯದ ಬದುಕಿನಲ್ಲಿ ತಂದುಕೊಳ್ಳುವವರೆಗಿನ ಕಾಲವನ್ನು ಈ ಕಲೆಯ ಕಾಲವೆಂದು ಗುರುತಿಸಬೇಕಾಗುತ್ತದೆ. ಹಾಗಾಗಿ ಕಲೆ ಧಿಡೀರನೆ ಹುಟ್ಟಿಬರಲಿಲ್ಲ, ಅಥವಾ ಇಂಥ ಕಾಲದಲ್ಲಿಯೇ ಹುಟ್ಟಿದೆ ಎಂದು ಹೇಳುವುದಕ್ಕೂ ಸಾಧ್ಯವಿಲ್ಲ. ಪ್ರಾಚೀನ ವರ್ಣಚಿತ್ರಗಳಿಗೆ ಅಂಟಿದ ಬಣ್ಣವನ್ನು, ಕಲ್ಲನ್ನು ಅಥವಾ ಮಣ್ಣನ್ನು ಪರೀಕ್ಷೆಗೆ ಒಳಪಡಿಸಿ ಕಾಲಗಣನೆ ಮಾಡಬೇಕಾಗುತ್ತದೆ.[೬] ಎಂಬ ವಿಚಾರಗಳು ಹೆಚ್ಚು ಅರ್ಥಪೂರ್ಣವಾದವುಗಳಾಗಿವೆ.

ಕಾಲಮಾನದಿಂದ ಅತ್ಯಂತ ಪುರಾತನ ವರ್ಣಚಿತ್ರಗಳು ಇದುವರೆಗೆ ತಿಳಿದುಬಂದಂತೆ ನೈರುತ್ಯಯುರೋಪಿನಲ್ಲಿ ಕಂಡುಬಂದಿವೆ. ಇವು ಹಿಮಯುಗಕಾಲಕ್ಕೆ ಸೇರಿದ್ದು, ಹಿಮಯುಗ ಕಾಲದ ಚಿತ್ರಗಳಿರುವ ಸುಮಾರು ಒಂದುನೂರು ಸ್ಥಳಗಳನ್ನು ಈ ವರೆಗೆ ದಕ್ಷಿಣಯುರೋಪಿನಲ್ಲಿ ಗುರುತಿಸಲಾಗಿದೆ.[೭] ಆದಿಮಾನವರ ಕಾಲದಲ್ಲಿಯೂ ಚಿತ್ರಕಲೆಯ ನಿದರ್ಶನಗಳು ಕಂಡುಬರುತ್ತವೆ. ಈ ಕಾಲದ ಮಾನವರು ವರ್ಣಗಳ ಬಗ್ಗೆ, ವರ್ಣಗಳ ತಯಾರಿಕೆ, ಅಂಟುಮಾಧ್ಯಮ, ಖನಿಜಮೂಲದಿಂದ ಪಡೆಯುವಂತಹ ವರ್ಣಗಳನ್ನು ಪುಡಿ ಮಾಡುವುದು ಅಥವಾ ಅರೆಯುವುದು. ಅವುಗಳನ್ನು ದ್ರಾವಣವನ್ನಾಗಿ ಮಾಡಿಕೊಂಡು ಬಳಕೆ ಮಾಡಿಕೊಳ್ಳುತ್ತಿದ್ದರು. ಅಲ್ಲದೇ ಕುಂಚಗಳ ತಯಾರಿಕೆ ಹಾಗೂ ಉಪಯೋಗ ಮುಂತಾದ ತಂತ್ರಗಳನ್ನು ತಿಳಿದವನಾಗಿದ್ದನೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಆದಿ ಮಾನವರು ಬೆಟ್ಟಗುಡ್ಡಗಳಲ್ಲಿನ ಗುಹೆಗಳು ಅಥವಾ ಶಿಲಾಶ್ರಯ ತಾಣಗಳಲ್ಲಿ ವಾಸಿಸುತ್ತಿದ್ದು ತನ್ನ ವಿಶ್ರಾಂತದ ಅವಧಿಯಲ್ಲಿ ಚಿತ್ರಗಳನ್ನು ರಚಿಸುತ್ತಿದ್ದ. ಆ ಚಿತ್ರಗಳಲ್ಲಿ ಕಂಡುಬರುವ ವಸ್ತುವಿಷಯಗಳೆನೆಂದರೆ ಕಾಡುಪ್ರಾಣಿಗಳು, ಪಕ್ಷಿಗಳು, ಮನುಷ್ಯರು, ರೇಖಾಚಿತ್ರಗಳು ಇವೆಲ್ಲವೂ ಯಾವುದೇ ನಿಯಮವನ್ನು ಅನುಸರಿಸದೆ ಬೆಟ್ಟ ಗುಡ್ಡಗಳ ಮೇಲೆ, ಕಲ್ಲು ಪೊಟರೆಯ ಮೇಲೆ, ಗವಿಯೊಳಗೆ ಅಲ್ಲದೇ ನಿರ್ಜನ ಪ್ರದೇಶಗಳಲ್ಲಿ ಕಂಡುಬಂದಿದ್ದು ಒಟ್ಟಿನಲ್ಲಿ ದಿನನಿತ್ಯ ಜೀವನದ ಅನುಭವವನ್ನು ಹೋಲುವಂತ ಚಿತ್ರಗಳಾಗಿದ್ದವು.[೮]

ಭಾರತದಲ್ಲಿ ಪ್ರಾಗೈತಿಹಾಸಿಕ ಚಿತ್ರಕಲೆ ಅತ್ಯಂತ ಪುರಾತನ ಕಾಲದಿಂದಲೂ ಕಂಡುಬಂದಿವೆ. ಮಧ್ಯಪ್ರದೇಶದ ಭಿಂಬೆಟ್ಕಾ ಪ್ರದೇಶದಲ್ಲಿ ಕ್ರಿ.ಪೂ. ೨೫,೦೦೦ ವರ್ಷಗಳಷ್ಟು ಪುರಾತನವಾದ ಪ್ರಾಗೈತಿಹಾಸಿಕ ಚಿತ್ರಗಳಿವೆ. ಅದೇ ರೀತಿ ಮಧ್ಯಪ್ರದೇಶದ ಮೊರೇನಾ

---

೬. ಡಾ. ಎಸ್.ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ – ೨೭

೭. Yashodhar Mathpal : Prehistoric Rock Paintings of Bhimbetka, page - 10

೮. ಶ್ರೀ ಎಸ್.ಕೆ. ಪಾಂಡೆ : ಇಂಡಿಯನ್ ರಾಕ್ ಆರ್ಟ್, ಪುಟ, ೧೯೯



ಜಿಲ್ಲೆಯ ಪಹಾರ್‌ಘರ್ ಎಂಬಲ್ಲಿ ಶಿಲಾಶ್ರಯಗಳಲ್ಲಿ ಸುಮಾರು ಕ್ರಿ.ಪೂ. ೨೩,೦೦೦ ವರ್ಷಗಳಷ್ಟು ಹಿಂದಿನ ಪ್ರಾಗೈತಿಹಾಸಿಕ ಚಿತ್ರಗಳು ಕಂಡುಬಂದಿವೆ. ಮಧ್ಯಪ್ರದೇಶದಲ್ಲಿರುವ ಅದಮ್‌ಘರ್ ಬೆಟ್ಟ, ಮಹದೇವ ಬೆಟ್ಟ, ರಾಮಘಡ ಬೆಟ್ಟದ ಜೋಗಿಮಾರಾ ಗುಹೆಯಲ್ಲಿ ಕಂಡುಬಂದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕ್ರಿ.ಪೂ. ೧೦,೦೦೦ ವರ್ಷಗಳಷ್ಟು ಹಿಂದಿನದವುಗಳಾಗಿವೆ. ಸುಮಾರು ಕ್ರಿ.ಪೂ. ೫,೦೦೦ ವರ್ಷಗಳ ಹಿಂದಿನ ಸಿಂಧೂ ನಾಗರಿಕತೆಯ ಕಾಲದಲ್ಲಿ ಜನರು ತಮ್ಮ ವಾಸ್ತುಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುತ್ತಿದ್ದರು. ಟಿಬೇಟ್‌ನಲ್ಲಿ ಕ್ರಿ.ಶ. ೭ನೆಯ ಶತಮಾನದಲ್ಲಿ ಜೀವಿಸಿದ್ದ ತಾರಾನಾಥನೆಂಬ ಚಿತ್ರಕಲಾವಿದನು ಭಾರತದ ಬೌದ್ಧ ಭಿತ್ತಿಚಿತ್ರಕಲೆಯ ಬಗ್ಗೆ ಪ್ರಸ್ತಾಪಿಸುತ್ತ ಇದು ಕ್ರಿ.ಪೂ. ೪೮೦ ರಲ್ಲಿಯೇ ಉನ್ನಾತಾವಸ್ಥೆಯನ್ನು ಮುಟ್ಟಿತೆಂದು ಹೇಳಿದ್ದಾನೆ. ವೇದಗಳಲ್ಲೇ ಮೊದಲನೆಯದಾದ ಋಗ್ವೇದದಲ್ಲಿ ಚಿತ್ರಕಲೆಯ ಕುರಿತು ಪ್ರಸ್ತಾಪ ಬರುತ್ತದೆ ಎಂದು ವಿದ್ವಾಂಸರು ಗುರುತಿಸಿದ್ದಾರೆ.[೯]

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಪ್ರಾಗೈತಿಹಾಸಿಕ ಚಿತ್ರಗಳು ಕಂಡುಬರುತ್ತವೆ. ಅವುಗಳಲ್ಲಿ ಬಾಗಲಕೋಟ ಜಿಲ್ಲೆಯ ಬಾದಾಮಿ ಬಳಿ ಇರುವ ಅರೆಗುಡ್ಡ, ಹಿರೇಗುಡ್ಡ ಎಂಬಲ್ಲಿಯ ಕಲ್ಲಾಸರೆಯಲ್ಲಿ, ಸಮೀಪದ ಸೀತಿದೋಣಿ, ಸಿಡ್ಲಫಡಿಯಲ್ಲಿ, ಕುಟಕನಕೇರಿ ಹಾಗೂ ಬೆಳಗಾವಿ ಜಿಲ್ಲೆಯ ರಾಮದುರ್ಗದ ಪಶ್ಚಿಮಕ್ಕೆ ೪ ಕಿ.ಮೀ. ದೂರದಲ್ಲಿರುವ ಮೇಗುಂಡೇಶ್ವರ ದೇವಾಲಯದ ಬಳಿಯ ಖಾಜೀ ಗುಡ್ಡದಲ್ಲಿ ಕಂಡುಬರುತ್ತವೆ. ಇವು ಸೂಕ್ಷ್ಮ ಶಿಲಾಯುಗ ಕಾಲದ ಕ್ರಿ.ಪೂ. ೧೦,೦೦೦ ವರ್ಷಗಳ ಕಾಲಾವಧಿಗೆ, ಇಲ್ಲವೇ ಅದಕ್ಕೂ ಪೂರ್ವದ ಅಂತ್ಯ ಹಳೇಶಿಲಾಯುಗದ ಕ್ರಿ.ಪೂ. ೪೦,೦೦೦ ವರ್ಷಗಳ ಅವಧಿಗೆ ಸೇರುತ್ತವೆ. ಅಲ್ಲದೇ ಇದುವರೆಗೆ ತಿಳಿದುಬಂದತೆ ದಕ್ಷಿಣ ಭಾರತದ ಅತ್ಯಂತ ಪುರಾತನ ಆದಿಮಾನವನ ಕಾಲದ ಭಿತ್ತಿಚಿತ್ರಗಳು ಇವೇ ಆಗಿವೆ ಎಂದು ಡಾ. ಅ.ಸುಂದರ ಅವರು ವ್ಯಕ್ತಪಡಿಸುತ್ತಾರೆ.[೧೦]

ಹೀಗೆ ಕರ್ನಾಟಕದ ಬಿಜಾಪೂರು, ಬಳ್ಳಾರಿ, ರಾಯಚೂರು, ಚಿತ್ರದುರ್ಗ, ಶಿವಮೊಗ್ಗಾ, ಬಾಗಲಕೋಟೆ, ಇನ್ನೂ ಮುಂತಾದ ಜಿಲ್ಲೆಗಳ ಹಲವಾರು ಭಾಗಗಳಲ್ಲಿ ಇಂತಹ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಕುರುಹುಗಳು ಕಂಡುಬರುತ್ತವೆ. ಈ ಭಿತ್ತಿಚಿತ್ರಗಳಲ್ಲಿ ಮುಖ್ಯವಾದ ವಸ್ತು ವಿಷಯವೆಂದರೆ ಕಾಡು ಪ್ರಾಣಿಗಳು, ಪಕ್ಷಿಗಳು, ಮನುಷ್ಯಾಕೃತಿಗಳು, ಬೇಟೆಯ ದೃಶ್ಯಗಳು, ಸಮೂಹ ಕುಣಿತದ ದೃಶ್ಯಗಳು ಇನ್ನೂ ಮುಂತಾದ ವಸ್ತು ವಿಷಯಗಳ ಕುರಿತು ತಿಳಿಯಬಹುದಾಗಿದೆ. ಕರ್ನಾಟಕ ಮಾತ್ರವಲ್ಲದೇ ಆಂಧ್ರದ ಗಡಿ ಪ್ರದೇಶಗಳಲ್ಲಿಯೂ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕಂಡುಬರುತ್ತವೆ.

---

೯. ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪುಟ, ೩೩

೧೦ ಅ.ಸುಂದರ : ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ, ಪುಟ – ೨೨



**ಬೆಳಗಾವಿ ಜಿಲ್ಲೆಯಲ್ಲಿ ಕಂಡುಬರುವ ಪ್ರಾಗೈತಿಹಾಸಿಕ ಚಿತ್ರಗಳ ನೆಲೆಗಳು :**

೧. ಖಾಜೀ ಗುಡ್ಡ ೨. ನವಿಲು ತೀರ್ಥ ೩. ಸುರೇಬಾನ

ಮಾನವನು ತನ್ನ ಭಾವನೆಗಳನ್ನು ಅಭಿವ್ಯಕ್ತಪಡಿಸಲು ಆಶ್ರಯಿಸಿದ ಕಲಾ ಪ್ರಕಾರಗಳಲ್ಲಿ ಚಿತ್ರಕಲೆಯೂ ಒಂದು. ಶಿಲಾಯುಗದ ಮಾನವನಿಗೆ ತಾನು ಬೇಟೆಯಾಡಿದ ಪ್ರಾಣಿಗಳು, ಬಳಸಿದ ಬಾಣ, ಕಲ್ಲು, ಕೊಂಬು ಇನ್ನೂ ಮುಂತಾದ ಉಪಕರಣಗಳು ಚಿತ್ರಗಳ ವಸ್ತುಗಳಾಗಿವೆ. ಆತನ ಮನೋವಿಲಾಸವನ್ನು ಮತ್ತು ಜೀವನ ರೀತಿಯನ್ನು ಅರ್ಥೈಸುವಲ್ಲಿ ಈ ಚಿತ್ರಗಳು ನೆರವಾಗುತ್ತವೆ. ಈ ಪಾಗೈತಿಹಾಸಿಕ ಭಿತ್ತಿಚಿತ್ರಗಳು ಶಿಲಾಗುಹೆಗಳಲ್ಲಿ ಮತ್ತು ಬಯಲು ಬಂಡೆಗಳ ಮೇಲೆ ರಚನೆಯಾಗಿದ್ದು ಕಂಡುಬರುತ್ತವೆ. ಪ್ರಾಗೈತಿಹಾಸಿಕ ಮಾನವರು ಗವಿಯ ಮುಂದಿನ ಭಾಗಗಳಲ್ಲಿ ವಾಸಿಸುತ್ತಿದಂತೆ ನಿದರ್ಶನಗಳು ದೊರೆತಿವೆ. ಚಿತ್ರಗಳು ಅವರ ವಾಸದ ನೆಲೆಯಿಂದ ದೂರದಲ್ಲಿ ಇಲ್ಲವೇ ತೀರಾ ಹಿಂಭಾಗದಲ್ಲಿ ಅಥವಾ ಮೇಲ್ಭಾಗದಲ್ಲಿ ಸುಲಭವಾಗಿ ತಲುಪಲಾರದ ಸ್ಥಳದಲ್ಲಿ ರಚನೆಯಾಗಿವೆ. ಕರ್ನಾಟಕದ ಬೆಳಗಾವಿ ಜಿಲ್ಲೆಯ ರಾಮದುರ್ಗ ಮತ್ತು ಸವದತ್ತಿ ತಾಲೂಕಿನ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಈ ಇತಿಹಾಸ ಪೂರ್ವದ ಚಿತ್ರಗಳು ರಚನೆಗೊಂಡಿದ್ದು ಚರಿತ್ರಾರ್ಹ ಸಂಗತಿಯಾಗಿದೆ.[೧೧]

**ಅ. ಖಾಜೀ ಗುಡ್ಡ :**

ಬೆಳಗಾವಿ ಜಿಲ್ಲೆಯ ರಾಮದುರ್ಗದ ಪಶ್ಚಿಮಕ್ಕೆ ೪ ಕಿ.ಮೀ. ದೂರದಲ್ಲಿರುವ ಮೇಗುಂಡೇಶ್ವರ ದೇವಾಲಯದ ಬಳಿಯ ಖಾಜೀ ಗುಡ್ಡದಲ್ಲಿ ಪ್ರಾಗೈತಿಹಾಸ ಕಾಲದ ಚಿತ್ರಗಳು ಕಂಡುಬರುತ್ತವೆ. ಈ ನೆಲೆಯಲ್ಲಿ ಕಂಡುಬರುವ ಚಿತ್ರಗಳು ಶಿಲಾ-ತಾಮ್ರಯುಗ ಮತ್ತು ಬೃಹತ್ ಶಿಲಾಯುಗ ಕಾಲಕ್ಕೆ ಸೇರಿದುದು ಇತಿಹಾಸದಿಂದ ತಿಳಿದುಬರುತ್ತದೆ. ಇವು ಗುಡ್ಡದ ಕಲ್ಲಾಸರೆಯಲ್ಲಿ ಇದ್ದು ಇವುಗಳಲ್ಲಿ ಪ್ರಾಣಿಗಳ, ಮನುಷ್ಯರ ಚಿತ್ರಗಳಿವೆ. ಅದರಲ್ಲಿ ನವಿಲು, ಜಿಂಕೆ, ಗೂಳಿ ಮತ್ತು ಮೊಸಳೆಯಂತಹ ಚಿತ್ರಗಳು ಇಂದು ಗುರುತಿಸಲು ಸಾಧ್ಯವಾಗದಷ್ಟು ಅಸ್ಪಷ್ಟವಾಗಿವೆ.

ಈ ಚಿತ್ರಗಳಲ್ಲಿ ಪ್ರಮುಖವಾಗಿ ಕಂದು ಬಣ್ಣವನ್ನು ಬಳಸಲಾಗಿದೆ. ತಿದ್ದಿದಂತೆ ಇವುಗಳ ರೇಖಾ ವಿನ್ಯಾಸಗಳಿವೆ. ಬಣ್ಣದ ರೇಖಾ ವಿನ್ಯಾಸವನ್ನು ಹೊಂದಿರುವಂತಹ ಬಹುಪಾಲು ಕಾಡು ಪ್ರಾಣಿಗಳ ಚಿತ್ರಗಳು ಇಲ್ಲಿವೆ. ಇಲ್ಲಿ ಸುಮಾರು ಇಪ್ಪತ್ತೈದು ಚಿತ್ರಗಳಿದ್ದು ಅವುಗಳಲ್ಲಿ ಹೆಚ್ಚಾಗಿ ಕಂದು ವರ್ಣದ ಬಳಕೆ ಕಂಡುಬರುತ್ತದೆ. ಗೊಂಬೆಗುಡ್ಡದ ಬಯಲು ಬಂಡೆಯ ಕುಟ್ಟಿದ, ಕೊರೆದ ಚಿತ್ರಗಳನ್ನು ಇವು ಸ್ವಲ್ಪ ಮಟ್ಟಿಗೆ ಹೋಲುತ್ತವೆ. ಗವಿ ವರ್ಣ

---

೧೧. ಡಾ. ಕೆ.ಬಿ. ಶಿವತಾರಕ್ : ಕರ್ನಾಟಕದ ಪುರಾತತ್ವ ನೆಲೆಗಳು, ಪುಟ, ೫೧೩



ಚಿತ್ರಗಳ ಪರಿಶೀಲನೆಯಿಂದ ತಿಳಿದುಬರುವ ಕೆಲವು ಮುಖ್ಯ ಅಂಶಗಳನ್ನು ಹೇಳುವುದಾದರೆ,[೧೨]

* ಗವಿಯ ಒಳಗೆ ವರ್ಣಲೇಪನದಿಂದ ಚಿತ್ರಿಸಿದ ಚಿತ್ರಗಳಿವೆ.

* ಸಾಮಾನ್ಯವಾಗಿ ಕಂದುಬಣ್ಣದ ಬಳಕೆ ಹೆಚ್ಚಾಗಿದ್ದು ಹಳದಿ, ಬಿಳಿ ಬಣ್ಣದ ಬಳಕೆ ವಿರಳವಾಗಿವೆ.

* ಚಿತ್ರಗಳನ್ನು ಮಾಂತ್ರಿಕ ಕಟ್ಟಳೆ, ಸೌಂದರ್ಯ ಮತ್ತು ಮನರಂಜನೆಯ ಹಿನ್ನೆಲೆಯಲ್ಲಿ ಚಿತ್ರಿಸಲಾಗಿದೆ.

* ಬಹುಪಾಲು ಗವಿವರ್ಣ ಚಿತ್ರಗಳು ಛಾಯಾ ನಿರೂಪಣ ತಂತ್ರದಂತೆ ರಚನೆಗೊಂಡಿದೆ.

ಮೇಲೆ ಹೇಳಿದಂತಹ ಎಲ್ಲ ಚಿತ್ರಗಳಲ್ಲಿ ಇಂತಹ ಅಂಶಗಳು ಕಂಡುಬರುತ್ತಿದ್ದುದಾಗಿ ಸ್ಥಳೀಯರಿಂದ ತಿಳಿಯಲಾಗಿದೆ. ಆದರೆ ಇಲ್ಲಿನ ಭಿತ್ತಿಯಲ್ಲಿ ಕಂಡುಬರುವಂತಹ ಬಣ್ಣಗಳ ಕುರುಹುಗಳನ್ನು ನೋಡಿದರೆ ಈ ನೆಲೆಯಲ್ಲಿ ಮೊದಲು ಚಿತ್ರಗಳಿದ್ದಿರಬಹುದೆಂಬ ಉಹಿಸಬಹುದಾಗಿದೆ. ಪ್ರಸ್ತುತದಲ್ಲಿ ಈ ನೆಲೆಯ ಚಿತ್ರಗಳಗೆ ಯಾವುದೇ ಸಂರಕ್ಷಣೆ ಇಲ್ಲದಿರುವ ಕಾರಣದಿಂದ ಸಂಪೂರ್ಣವಾಗಿ ನಾಶವಾಗಿರುವುದು ಖೇದದ ಸಂಗತಿಯಾಗಿದೆ.

**ಆ. ನವಿಲು ತೀರ್ಥ :**

ರಾಮದುರ್ಗದ ಪಕ್ಕದ ತಾಲೂಕಾದ ಸವದತ್ತಿ ತಾಲೂಕಿನ ನವಿಲು ತೀರ್ಥದಲ್ಲಿಯೂ ಕೂಡ ಎರಡು ರೇಖೆಗಳ ಆರು ಗಂಟಿನ ಮಂಡಲವನ್ನು ವಿವೇಚಿಸುವ ಈ ಪ್ರಕಾರದ ಚಿತ್ರಕ್ಕೆ ಮೊಹೆಂಜೋದಾರೂವಿನ ಹರಪ್ಪಾ ನಾಗರಿಕತೆಯ (ಸು. ಕ್ರಿ.ಪೂ. ೨೫೦೦–೧೭೫೦) ಒಂದು ಬದಿಯಲ್ಲಿ ಒಂದು ಸಾಲು ಹರಪ್ಪ ಲಿಪಿಯ ಬರವಣಿಗೆಯುಳ್ಳ ನಾಣ್ಯದಂತಿರುವ ಒಂದು ತಾಮ್ರದ ತಗಡಿನ, ಮತ್ತೊಂದು ಬದಿಯಲ್ಲಿ ಇಂಥ ಒಂದೇ ರೇಖೆಯ ನಾಲ್ಕು ಗಂಟಿನ ಮಂಡಲವು ಮೂಲವಾಗಿರುವ ಸಾಧ್ಯತೆ ಇದೆ. ಎಂಬುದನ್ನು ಅ.ಸುಂದರ ಅವರು ಬೇರೆಡೆಯಲ್ಲಿ ಚರ್ಚಿಸಿದ್ದಾರೆ.

**ಇ. ಸುರೇಬಾನ :**

ರಾಮದುರ್ಗ ತಾಲೂಕಿನ ಸುರೇಬಾನ ಎಂಬಲ್ಲಿ ಬೃಹತ್ ಶಿಲಾಯುಗ ಕಾಲಕ್ಕೆ ಸೇರಿದ ವರ್ಣಚಿತ್ರಗಳು ಗವಿಯಲ್ಲಿ ದೊರೆತಿದ್ದು ತಿಳಿದುಬರುತ್ತದೆ.[೧೩] ಅಲ್ಲದೇ ಕಡಲು–ಮಲೆನಾಡು ಪ್ರದೇಶಕ್ಕೆ ಸೇರಿಕೊಂಡಂತೆ ಬಯಲು ಸೀಮೆ ಪ್ರದೇಶದಲ್ಲಿಯ ಬೆಟ್ಟಗಳ ಸಾಲುಗಳಲ್ಲಿ ಅಲ್ಲಲ್ಲಿ ಇಂಥ ಕುಟ್ಟಿ ಕೊರೆದ ಚಿತ್ರಗಳಿರುವುದನ್ನು ಈಗಾಗಲೇ ಗಮನಿಸಲಾಗಿದೆ.

---

೧೨. ಡಾ. ಎಸ್.ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ, ೪೨

೧೩. ಡಾ. ಕೆ.ಬಿ. ಶಿತಾರಕ್ : ಕರ್ನಾಟಕದ ಪುರಾತತ್ವ ನೆಲೆಗಳು, ಪುಟ, ೫೧೩



ರಾಮದುರ್ಗ, ಸವದತ್ತಿ ತಾಲೂಕಿನ ನವಿಲು ತೀರ್ಥ, ಸುರೇಬಾನ, ಬಾದಾಮಿ, ವಿಜಾಪುರ, ರಾಯಚೂರು, ಬಳ್ಳಾರಿ ಚಿತ್ರದುರ್ಗ ಇನ್ನೂ ಮುಂತಾದ ನೆಲೆಗಳು ವಿಶೇಷವಾಗಿ ಗಮನಾರ್ಹವಾಗಿವೆ.

ಈ ನೆಲೆಗಳಲ್ಲಿ ಯಥಾ ಪ್ರಕಾರ ಗೂಳಿ, ಆಕಳು, ತಕ್ಕ ಮಟ್ಟಿಗೆ ಜಿಂಕೆಗಳ ಚಿತ್ರಗಳು ಹೆಚ್ಚಿನ ಪ್ರಮಾಣದಲ್ಲಿದ್ದರೆ, ಮನುಷ್ಯಾಕೃತಿಗಳು ತೀರಾ ಕಡಿಮೆ. ಅಲ್ಲದೆ ರೇಖಾ ಮಂಡಲ ಚಿತ್ರಗಳು ಬಹಳ ಅಪರೂಪವಾಗಿವೆ.[೧೪] ಅಲ್ಲದೇ ಈ ನೆಲೆಗಳಲ್ಲಿ ಚಿತ್ರಗಳಿದ್ದವು ಎಂಬುದು ಚರಿತ್ರಾರ್ಹ ಸಂಗತಿಯಾಗಿದೆ. ಪ್ರಸ್ತುತದಲ್ಲಿ ಈ ಚಿತ್ರಗಳ ನೆಲೆಗಳು ಸಂಕೀರ್ಣ ವಾಣಿಜ್ಯ ಕಟ್ಟಡಗಳಿಂದ ಮರೆಯಾಗಿವೆ. ಹಾಗಾಗಿ ಇಲ್ಲಿ ಚಿತ್ರಗಳು ಮೊದಲು ಇದ್ದವು, ಎಂಬ ಮಾತು ದಾಖಲೆಯಲ್ಲಿ ಕಂಡುಕೊಳ್ಳಬಹುದೇ ಹೊರತು ಪ್ರಸ್ತುತದಲ್ಲಿ ಕಾಣಲು ಸಾಧ್ಯವಿಲ್ಲ. ಒಟ್ಟಾರೆಯಾಗಿ ಬೆಳಗಾವಿ ಜಿಲ್ಲೆಯ ಪ್ರಾಗೈತಿಹಾಸಿಕ ಚಿತ್ರಗಳು ಮೂರು ನೆಲೆಗಳಲ್ಲಿ ಕಂಡುಬಂದಿವೆ. ಅವು ಅತಿ ಕಡಿಮೆ ಪ್ರಮಾಣದಲ್ಲಿ ಕಂಡುಬಂದಿದ್ದು, ಅವುಗಳನ್ನು ಸರಿಯಾಗಿ ಗುರುತಿಸಲಾಗದಷ್ಟು ಅಸ್ಪಷ್ಟವಾಗಿವೆ. ಚಿತ್ರಗಳಿಗೆ ಸಂರಕ್ಷಣೆ ಇಲ್ಲದಕ್ಕೆ ಅವುಗಳು ನಶಿಸಿ ಹೋಗಲು ಕಾರಣವಾಗಿವೆ. ಇಂಥ ಪ್ರಾಗೈತಿಹಾಸಿಕ ಚಿತ್ರಗಳನ್ನು ಜನಪದ ಚಿತ್ರಗಳೆಂದು ಸಹ ಹೇಳಲಾಗುವುದು.

ಜಗತ್ತಿನ ಯಾವುದೇ ಸಂಸ್ಕೃತಿಯ ಮೂಲ ಬೇರುಗಳನ್ನು ಜನಪದ ಸಂಸ್ಕೃತಿಯಿಂದ ಗುರುತಿಸಲಾಗುತ್ತದೆ. ಈ ಅರ್ಥದಲ್ಲಿ ಜನಪದವು ಮಾನವ ಸಂಸ್ಕೃತಿಯ ಮೊದಲ ಪುಟವೆನ್ನಬಹುದು. ಈ ಸಂಸ್ಕೃತಿಯಲ್ಲಿ ಅವರ ಆಚಾರ, ವಿಚಾರ, ರೀತಿ, ನೀತಿ, ಧರ್ಮ, ಆಚರಣೆ, ವಿಧಿಕ್ರಿಯೆಗಳು ಮಾತ್ರವಲ್ಲದೇ ಅವುಗಳನ್ನು ಅನುಸರಿಸಿಕೊಂಡು ಬೆಳೆದುಬಂದ ಹಲವಾರು ಕಲೆಗಳೂ ಇವೆ. ಅಗೋಚರ ಕಾಲ ಒಂದರಲ್ಲಿ ರೂಪುಗೊಂಡಿರುವ ಈ ಜನಪದ ಕಲೆಗಳು ಆಯಾ ಸಂಸ್ಕೃತಿಯ ಜನರ ಬದುಕಿನ ಆತ್ಮವಾಗಿ, ಜೀವವಾಗಿ, ಜೀವಂತ ಅಸ್ತಿತ್ವವನ್ನು ಪಡೆಯುವುದಲ್ಲದೇ ಅವು ಜನಪದರ ಬದುಕಿನೊಡನೆ ಅರ್ಥಪೂರ್ಣ ಸಂಬಧವನ್ನು ಹೊಂದಿವೆ.

ಜನಪದ ಚಿತ್ರಕಲೆಯೆಂದರೆ ಕೇವಲ ಬಣ್ಣವಲ್ಲ, ರೇಖೆಯಲ್ಲ, ಸುಣ್ಣ–ಕಾವಿಗಳ ಬೊಟ್ಟುಗಳಲ್ಲ, ಧಾರ್ಮಿಕ ಸಂಪ್ರದಾಯಗಳು, ಪ್ರಕೃತಿಯ ಶಕ್ತಿ ಮೂಲಗಳು, ಮನುಷ್ಯನ ಸುಪ್ತ ಶಕ್ತಿಗಳು ಅಡಕಗೊಂಡಿರುವ, ಸೌಂದರ್ಯ ತುಂಬಿರುವ, ವೃತ್ತಿಮೂಲವಾಗಿರುವ ದೈನಂದಿನ ಬದುಕೇ ಆಗಿರುವ ಕಲೆಯೇ ಈ ಚಿತ್ರಕಲೆ. ಈ ಅರ್ಥದಲ್ಲಿ ಜನಪದ ಚಿತ್ರಕಲೆಯೆಂದರೆ ಜನಪದ ಅಧ್ಯಯನವೇ ಆಗಿದೆ. ಬದುಕಿನ ವಿಧಿಕ್ರಿಯೇಗಳೆಲ್ಲ ಬಣ್ಣದಲ್ಲಿ

---

೧೪. ಪಿ.ಆರ್. ತಿಪ್ಪೇಸ್ವಾಮಿ, ಸಂ, ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ, ಲೇ. ಅ.ಸುಂದರ, ಪುಟ, ३೭, ४೮



ಹುಟ್ಟಿ, ವಿವಿಧ ಚಟುವಟಿಕೆಗಳೆಲ್ಲ ಬಣ್ಣದಲ್ಲಿ ತೊಡಗಿ, ನೋಡುವ ಕಣ್ಣಿಗೆ ಹಬ್ಬವನ್ನುಂಟುಮಾಡುವ, ಭಯವನ್ನುಂಟುಮಾಡುವ ಸರ್ವ ಭಾವನೆಗಳು ಈ ಜನಪದ ಚಿತ್ರಕಲೆಯಲ್ಲಿದೆ. ವಿವಿಧ ಹಂತಗಳಲ್ಲಿ ಬಾಳುವ ಮನುಷ್ಯನ ಬದುಕು, ಅದರಲ್ಲಿಯೂ ಜನಪದರ ಬದುಕು ತಮಗೆ ಅರಿವಿಲ್ಲದೆ ಚಿತ್ರಕಲೆಯನ್ನು ಹೇಗೆ ರೂಢಿಸಿಕೊಂಡರು ಎಂಬುದನ್ನು ತಿಳಿದುಕೊಳ್ಳಲಾಗಿದೆ.[೧೫]

ಈ ಜನಪದ ಚಿತ್ರಕಲೆಯ ಕುರಿತು ಹೇಳುವುದಾದರೆ ಹಚ್ಚೆ ಚಿತ್ರಕಲೆ, ಕೌದಿ ಚಿತ್ರಕಲೆ, ಕಸೂತಿ ಚಿತ್ರಕಲೆ, ಮದರಂಗಿಯಲ್ಲಿ ಚಿತ್ರಕಲೆ, ಬೆಳದಿಂಗಳ ಪೂಜೆಯ ಚಿತ್ರಕಲೆ ಇವುಗಳಲ್ಲದೇ ಹಬ್ಬ ಹರಿದಿನಗಳಲ್ಲಿ ದೀಪಾವಳಿ, ಗಣೇಶ ಚತುರ್ಥಿ, ನಾಗರ ಪಂಚಮಿ ಇಂತಹ ಹಬ್ಬಗಳಲ್ಲಿಯೂ ಸಹ ಚಿತ್ರಕಲೆಯನ್ನು ಕಾಣಬಹುದು. ಇಂತಹ ಜನಪದ ಕಲೆಯು ಜನರ ದೈನಂದಿನ ಜೀವನದಲ್ಲಿ ಹಾಸುಹೊಕ್ಕಿರುವುದು ವಿಶೇಷವೆನ್ನಬಹುದು. ಅಷ್ಟೆ ಅಲ್ಲದೇ ಅಪಶಕುನ, ಶುಭದ ಸೂಚ್ಯಾಂಕವಾಗಿ, ಸಾಂಕೇತಿಕವಾಗಿ ಬಳಸಲ್ಪಡುವ ರೇಖೆ ಹಾಗೂ ಬಣ್ಣದಲ್ಲಿ ಸ್ವಲ್ಪ ಅಸ್ಥವೆಸ್ಥಗೊಂಡರೆ ದೊಡ್ಡ ರಾದ್ಧಾಂತವೇ ಏಳುತ್ತದೆ. ಅಂದರೆ ಜನಪದ ಚಿತ್ರಕಲೆಯು ಬರೀ ಆಚರಣೆಯಷ್ಟೇ ಅಲ್ಲ, ಜನಪದಿಯರ ಬದುಕು ಕೂಡ ಆಗಿದೆ ಎನ್ನಬಹುದು.

ಇಂತಹ ಜನಪದ ಚಿತ್ರಕಲೆಯನ್ನು ವೃತ್ತಿಯನ್ನಾಗಿಸಿಕೊಂಡು ಬೆಳೆದುಬಂದಿರುವ ಹಲವು ಕಲಾ ಮನೆತನಗಳು ಬೆಳಗಾವಿ ಜಿಲ್ಲೆಯಲ್ಲಿ ಇರುವುದು ವಿಶೇಷ. ಈ ಅಧ್ಯಯನದ ದೃಷ್ಟಿಯಿಂದ ಅದು ಜನಾಂಗಿಯ ಅಧ್ಯಯನವೂ ಆಗಿದೆ. ವಿವಿಧ ಪ್ರದೇಶಗಳಲ್ಲಿ, ವಿವಿಧ ಆಚರಣೆಗಳಲ್ಲಿ ಇರುವ ಸಂಪ್ರದಾಯಗಳು, ಸಂಪ್ರದಾಯಗಳು ಹುಟ್ಟುಹಾಕಿದ ಚಿತ್ರಗಳು ನೀಡುವ ಬದುಕಿನ ಹಿನ್ನೆಲೆಯನ್ನು ಅರಿತುಕೊಳ್ಳುವುದು ಇಲ್ಲಿ ಮಹತ್ವದ್ದಾಗಿರುತ್ತದೆ. ಒಂದೊಂದು ಚಿತ್ರವು ಒಂದೊಂದು ಸಂಪ್ರದಾಯವಾಗಿ, ಬದುಕಿನೂದ್ದದ ಇತಿಹಾಸವನ್ನು ತಿಳಿಸಿಕೊಡುವುದರಿಂದ ಇದು ಜನಪದ ಚಿತ್ರಕಲೆಯ ಇತಿಹಾಸವು ಹೌದು. ಈ ಸಂಪ್ರದಾಯಗಳ ಜನಪದ ಚಿತ್ರಗಳನ್ನು ಬೆಳಗಾವಿ ಜಿಲ್ಲೆಯ ಹಳ್ಳಿಯ ಪ್ರದೇಶಗಳಲ್ಲಿ ಇಂದಿಗೂ ಸಹ ಕಾಣಬಹುದು. ಅವುಗಳವು ಸಂಪಗಾವ ತಾಲೂಕಿನ ದೇಶನೂರ, ಬೈಲಹೊಂಗಲ, ನೇಸರಗಿ, ವಣ್ಣೂರ, ಪಾಶ್ಚಾಪುರ. ಗೋಕಾಕ್ ತಾಲೂಕಿನ ಕಡಬಿ ಶಿವಾಪೂರ, ಖಾನಾಪುರ, ಸವದತ್ತಿ ತಾಲೂಕಿನ ಹೂಲಿ, ಇನ್ನೂ ಮುಂತಾದ ಸ್ಥಳಗಳನ್ನು ಇಲ್ಲಿ ಕಾಣಬಹುದು.

ಈ ಜನಪದಿಯರ ಚಿತ್ರಕಲೆಯಲ್ಲಿ ಮುಖ್ಯವಾಗಿ ಹಚ್ಚೆ, ಮದರಂಗಿ, ಕೌದಿ, ಕಸೂತಿ, ಚಿತ್ರಕಲೆಯನ್ನು ಬಳಸುವಂತಹ ಪದ್ಧತಿಗಳು ಇನ್ನೂ ಕೂಡ ಉಳಿದುಕೊಂಡು ಬಂದಿರುವಂತ

---

೧೫. ಡಾ. ಎಸ್.ಸಿ. ಪಾಟೀಲ : ಜಾನಪದ ಕಲೆ, ಚಿತ್ರಕಲೆ, ಪುಟ, ೪೮



ಸಂಪ್ರದಾಯ ಬೆಳಗಾವಿ ಜಿಲ್ಲೆಯ ಗ್ರಾಮಗಳಲ್ಲಿ ಕಾಣಬುಹುದಾಗಿದೆ. ಅವುಗಳನ್ನು ಒಂದೊಂದಾಗಿ ಈ ಕೆಳಗಿನಂತೆ ವಿವೇಚಿಸಲಾಗಿದೆ. ಇಲ್ಲಿಯ ವರೆಗೆ ವರ್ಣರಂಜಿತ ಚಿತ್ರಗಳನ್ನು ಗೋಡೆಯ ಮೇಲೆ, ಕಿಟಕಿಯ ಮೇಲೆ, ಕಲ್ಲಾಸರೆಯ ಮೇಲೆ, ಮೇಲ್ಛಾವಣಿಯ ಮೇಲೆ ಇನ್ನೂ ಮುಂತಾದ ವಿಧಾನಗಳನ್ನು ಕಂಡುಕೊಂಡಿದ್ದೇವೆ. ಆದರೆ ಈ ಜನಪದ ಚಿತ್ರಕಲೆಯಲ್ಲಿ ಇನ್ನೊಂದು ವಿಧಾನವಿದೆ. ಅದು ಮೈಮೇಲಿನ ಚರ್ಮದ ಮೇಲೆ ರಚನೆಮಾಡುವಂತಹ ಹಚ್ಚೆ ಚಿತ್ರಕಲೆಯಾಗಿದೆ.

**ಹಚ್ಚೆ :**

ಚರ್ಮದ ಮೇಲೆ ಚಿತ್ರವಾಗಿ ಸ್ಥಾನ ಪಡೆದ ಹಚ್ಚೆ ಕಲೆಯಾಗಿ ಪ್ರಪಂಚವ್ಯಾಪಿ ದೀರ್ಘ ಇತಿಹಾಸವನ್ನು ಹೊಂದಿದೆ. ಹಲವಾರು ವಿದ್ವಾಂಸರು ಈ ಹಚ್ಚೆ ಕಲೆಯ ಪ್ರಾಚೀನತೆ ಕುರಿತು ಚರ್ಚಿಸಿದ್ದಾರೆ. ಅದರ ವಿಕಾಸ ಪ್ರಸಾರ ಕುರಿತು ಆಲೋಚನೆಗಳನ್ನೂ ಹರಿಬಿಟ್ಟಿದ್ದಾರೆ. ಕನ್ನಡದಲ್ಲಿ ಹಚ್ಚೆ ಎಂಬ ಪದವು ಪಚ್ಚೆ ಮೂಲದಿಂದ ಬಂದಿದೆ. ಪಚ್ಚೆ ಎಂದರೆ ಹಸಿರು ಮಣಿ ಅಥವಾ ರತ್ನ, ಹಸಿರು ಬಣ್ಣ, ಹಣೆಯ ಮೇಲಿನ ಸ್ಥಿರವಾದ ತಿಲಕ ಎಂಬರ್ಥಗಳಿವೆ.[೧೬] ಚರ್ಮದ ಮೇಲೆ ಶಾಶ್ವತವಾಗಿ ಇರಬಲ್ಲ ಹಸಿರು ಬಣ್ಣದ ಗುರುತೇ ಹಚ್ಚೆಯಾಗಿದೆ. ಈ ಹಚ್ಚೆಯ ಚಿತ್ರಕಲೆಯಲ್ಲಿ ಕೆಲವೊಂದು ಐತಿಹ್ಯಗಳು ಇವೆ. ಆದರೆ ಪ್ರಸ್ತುತ ಅಧ್ಯಯನದಲ್ಲಿ ಕೆಲವನ್ನೂ ಮಾತ್ರ ಹೇಳಲಾಗಿದೆ. ಹಚ್ಚೆ ಸಂಪ್ರದಾಯದ ಬಗ್ಗೆ ಜನಪದರಲ್ಲಿ ಅವರದೇ ಆದ ಐತಿಹ್ಯಗಳು ಇರುವುದು ಗಮನಾರ್ಹ. ಈ ಹಚ್ಚೆ ಹಾಕುವ ವೃತ್ತಿಯಲ್ಲಿ ಹೆಂಗಸರದೇ ಪ್ರಮುಖ ಪಾತ್ರವಿರುತ್ತದೆ. ಹಾಗಾಗಿ ಇಲ್ಲಿ ಹೆಂಗಸರು ಹೇಳುವ ಪೌರಾಣಿಕ ಕಥೆಗಳಿಗೆ ಇನ್ನಷ್ಟು ಮೆರುಗನ್ನು ಕೊಡುತ್ತಾ ಕಥೆಗಳನ್ನು ಹೇಳುತ್ತಾರೆ. ಆ ಮೂಲಕ ತಮ್ಮ ವೃತ್ತಿಯನ್ನು ಬೆಳೆಸಿಕೊಳ್ಳುವ ಸದಾಭಿರುಚಿಯು ಇಲ್ಲಿ ಪ್ರಮುಖವಾಗಿ ಕಂಡುಬರುವುದು.

ಬೆಳಗಾವಿ ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿನ ಹಚ್ಚೆ ಹಾಕುವ ಹೆಂಗಸರು ಹೇಳುವ ಪ್ರಮುಖ ಕಥೆಗಳು ಕೃಷ್ಣಾವತಾರ, ರಾಮಾಯಣ, ಮಹಾಭಾರತಕ್ಕೆ ಸೇರಿದವುಗಳಾಗಿವೆ. ಅಲ್ಲದೇ ಕರ್ನಾಟಕದ ಎಲ್ಲ ಭಾಗಗಳಲ್ಲೂ ಇವೇ ಕಥೆಗಳಿರುವುದು ಅತ್ಯಂತ ಗಮನಾರ್ಹ. ಕೆಲವನ್ನು ಉದಾಹರಣೆ ಹೇಳುವುದಾದರೆ : ೧. ದ್ರೌಪದಿಯ ಅರಣ್ಯ ವಾಸದಲ್ಲಿದ್ದಾಗ ಒಮ್ಮೆ ಸಹಜವಾಗಿಯೇ ಅವಳಿಗೆ ಹಚ್ಚೆ ಹಾಕಿಸಿಕೊಳ್ಳುವ ಆಸೆಯಾಯಿತಂತೆ. ಅದಕ್ಕಾಗಿ ಆಕೆ ಹಚ್ಚೆ ಹೊಯ್ಯುವ ಸ್ತ್ರೀಯರ ಸಲುವಾಗಿ ಸಾಕಷ್ಟು ಹುಡುಕಾಡಿದಳಂತೆ. ಆದರೆ ಹಚ್ಚೆ ಹಾಕಿಸಿಕೊಳ್ಳುವ ಭಾಗ್ಯ ಆಕೆಯ ಪಾಲಿಗೆ ಬರಲಿಲ್ಲವಂತೆ. ಹಚ್ಚೆ ಇಲ್ಲದೇ ಇರುವುದರಿಂದ

---

೧೬. ಡಾ. ಎಸ್.ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ, ೭೧



ಆಕೆಗೆ ಅನೇಕ ಕಷ್ಟಗಳು ಬಂದವಂತೆ. ಹಾಗಾಗಿ ಹಚ್ಚೆ ಹಾಕಿಸಿಕೊಳ್ಳುವುದರಿಂದ ಸೌಭಾಗ್ಯ ಗಟ್ಟಿಯಾಗುತ್ತೆ. ಯಾವುದೇ ತೊಂದರೆಗಳು ಬರುವುದಿಲ್ಲ, ಸ್ವರ್ಗದಲ್ಲಿ ಸ್ಥಾನ ಸಿಗುತ್ತದೆ, ಸತ್ತ ಮೇಲೂ ಹಚ್ಚೆಗಳು ಜೊತೆಗಿದ್ದು ಅವರನ್ನು ಕಾಪಾಡುತ್ತವೆ ಎಂದು ಕಥೆಗಳನ್ನು ಹೇಳುತ್ತಾರೆ.

ರಾಮಾಯಣದ ಶ್ರೀ ರಾಮನ ಪತ್ನಿ ಸೀತೆ ವನವಾಸದಿಂದ ಬಂದ ಮೇಲೆ ಹಚ್ಚೆ ಹಾಕುವವರನ್ನು ಕರೆಯಿಸಿ ಹಚ್ಚೆ ಹಾಕಿಸಿಕೊಂಡಳಂತೆ. ಮೊದಲೇ ಹಚ್ಚೆ ಹಾಕಿಸಿಕೊಂಡಿದ್ದರೆ, ಆಕೆಗೆ ಕಷ್ಟಗಳು ಬರುತ್ತಿರಲಿಲ್ಲವಂತೆ. ಹೀಗೆ ಕಥೆ ಹೇಳುತ್ತ ಹಚ್ಚೆ ಹಾಕುವ ಹೆಂಗಸರು ಬೆಳಗಾವಿ ಜಿಲ್ಲೆಯ ಸುತ್ತಮುತ್ತಲೂ ಕಾಣಿಸಿಕೊಳ್ಳುತ್ತಾರೆ. ಹಾಗೂ ಕರ್ನಾಟಕದ ಎಲ್ಲ ಭಾಗಗಳಲ್ಲೂ ಇದ್ದಾರೆ. ಕಿಳ್ಳಿಕೇತರ ಮತ್ತು ಗೊಂದಲಿಗರ ಜನಾಂಗದ ಹೆಣ್ಣುಮಕ್ಕಳಲ್ಲಿ ಈ ಕಥೆ ಹೆಚ್ಚು ಪ್ರಚಲಿತದಲ್ಲಿದೆ.[೧೭] ಈ ಐತಿಹ್ಯಗಳಲ್ಲಿ ಇನ್ನೂ ಮುಂತಾದ ಜನಾಂಗಳಲ್ಲಿ ವಿವಿಧ ಬಗೆಯ ಐತಿಹ್ಯಗಳನ್ನು ಕೇಳಬಹುದಾಗಿದೆ.

**ಶರೀರದ ಹಲವು ಭಾಗಗಳಲ್ಲಿ ಕಂಡುಬರುವ ಹಚ್ಚೆಯ ಚಿತ್ರವಿನ್ಯಾಸಗಳು :**

ಪುರುಷ ಮತ್ತು ಸ್ತ್ರೀಯರಿಬ್ಬರಲ್ಲಿಯೂ ಹಚ್ಚೆಯನ್ನು ಹೊಯ್ಯಿಸಿಕೊಳ್ಳುವುದನ್ನು ಕಾಣಬಹುದು. ಆದರೆ ಪುರುಷರಿಗಿಂತ ಸ್ತ್ರೀಯರೇ ಹೆಚ್ಚಿನ ಸಂಖ್ಯೆಯ ಹಚ್ಚೆಯ ಚಿತ್ರಗಳನ್ನು ಶರೀರದ ಅಂಗಾಗಳಲ್ಲಿ ಹಾಕಿಸಿಕೊಳ್ಳುತ್ತಾರೆ. ಈ ಹಚ್ಚೆ ಚಿತ್ರಕಲೆಯು ಭಾರತ ದೇಶಕ್ಕೆ ಮಾತ್ರ ಸಿಮೀತಾವಾಗದೇ ಪ್ರಪಂಚದ ವಿವಿಧ ಭಾಗಗಳಲ್ಲಿ ಪ್ರಚಲಿತದಲ್ಲಿರುವುದನ್ನು ಇಂದಿಗೂ ಕಾಣಬಹುದು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಹಚ್ಚೆಯಿಂದ ಮೈತುಂಬ ಚಿತ್ರಗಳನ್ನು ಬಿಡಿಸಿಕೊಂಡಿರುವುದನ್ನು ಸಾಹಿತ್ಯದ ಮೂಲಕ ತಿಳಿದುಕೊಳ್ಳಬಹುದು.

ಬೆಳಗಾವಿ ಜಿಲ್ಲೆಯಲ್ಲಿ ಹೆಚ್ಚಾಗಿ ಕಣ್ಣಿಗೆ ಕಾಣಿಸುವ ಶರೀರದ ಮೇಲೆಯೇ ಹಚ್ಚೆಯನ್ನು ಹಾಕಿಸಿಕೊಂಡಿರುವುದು ತಿಳಿದುಬರುತ್ತದೆ. ಆದರೆ ಕೆಲವು ಸಲ ಕಣ್ಣಿಗೆ ಕಾಣಿಸದೇ ಇರುವ ಸ್ಥಳಗಳಲ್ಲಿಯೂ ಹಾಕಿಸಿಕೊಂಡಿರುವುದನ್ನು ಸಾಹಿತ್ಯ ಗ್ರಂಥಗಳಿದ ತಿಳಿದುಕೊಳ್ಳಬಹುದು. ಹಚ್ಚೆ ಹಾಕಿಸಿಕೊಳ್ಳುವ ಶರೀರದ ಪ್ರಮುಖ ಭಾಗಗಳಾದ ಮುಖ, ಕೊರಳು, ಕೈ, ಎದೆ, ಹೊಟ್ಟೆ, ಬೆನ್ನು, ಗುಪ್ತಾಂಗ, ಕಾಲು ಇಂತಹ ಭಾಗಗಳಲ್ಲಿ ಹಚ್ಚೆಯನ್ನು ಹಾಕಿಸಿಕೊಳ್ಳುವುದನ್ನು ಹೆಚ್ಚಾಗಿ ಕಾಣುತ್ತೇವೆ.

ಒಟ್ಟಾರೆಯಾಗಿ ಈ ಹಚ್ಚೆಯ ಚಿತ್ರಗಳನ್ನು ಹಾಕಿಸಿಕೊಳ್ಳುವ ಪ್ರಾಚೀನ ಸಂಪ್ರದಾಯಬದ್ಧ, ಶಾಸ್ತ್ರಬದ್ಧವಾದ ಹಚ್ಚೆಯಕಲೆ ಬೆಳಗಾವಿ ಜಿಲ್ಲೆಯ ಹಳ್ಳಿಗಳಲ್ಲಿ ಹೆಚ್ಚಾಗಿ ಕಾಣಬಹುದು. ಜನಪದಿಯರಲ್ಲಿ ಹಚ್ಚೆ ಹಾಕುವುದಕ್ಕೆ ತಮ್ಮದೇ ಆದ ಪರಿಕರಗಳು, ವಿಧಾನಗಳು ಮತ್ತು

೧೭. ಡಾ. ಎಸ್.ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ, ೭೯



ಉದ್ದೇಶಿತ ಚಿತ್ರಗಳು ಇರುತ್ತಿದ್ದವು. ಆ ಚಿತ್ರಗಳಲ್ಲಿ ಸೂರ್ಯ, ಚಂದ್ರ, ನಿಂಬೆಗಿಡ, ಜೋಗಿಜಡೆ, ನಾಗರಹೆಡೆ, ಚೇಳು, ಕಮಲ, ಗೌರಿಮುಡಿ, ಗಿಂಡಿ, ಶಂಖ, ಶಿವನಗುಡಿ, ಬಸವನ ಬಾಸಿಂಗ, ಮಕ್ಕಳ ಸಾಲು, ಹೊನ್ನೆಹೂ, ಸೀತೆಯ ಒಲೆ, ದುಂಡು ಚಂದಪ್ಪ, ಗಿಳಿ ಪದ್ಮ, ಲಿಂಗಗಳು, ಹನುಮಂತಪ್ಪನ ತೇರು, ಮುತ್ತೈದೆಯರು ಇಂತಹ ಇನ್ನೂ ಮುಂತಾದ ಉದ್ದೇಶ ಸಹಿತ ಚಿತ್ರಗಳು ಕಾಣಬಹುದು.

ಆದರೆ ಇಂದಿನ ಆಧುನಿಕತೆಯ ಮತ್ತು ಸಿನಿಮಾಗಳ ಪ್ರಭಾವದಿಂದ ಎಲ್ಲ ಕ್ಷೇತ್ರಗಳಲ್ಲಿ ಬದಲಾವಣೆಯಾಗಿದ್ದು ತಿಳಿಯಬಹುದು. ಅದರಂತೆಯೇ ಈ ಹಚ್ಚೆಯ ಚಿತ್ರಕಲೆಯಲ್ಲೂ ಸಹ ಬದಲಾವಣೆಗಳನ್ನು ಕಾಣಬಹುದಾಗಿದೆ. ಅವುಗಳ ಪರಿಕರಗಳಲ್ಲಿ ಹಚ್ಚೆ ಹಾಕುವ ಯಂತ್ರಗಳು, ರಸಾಯನಿಕ ಬಣ್ಣಗಳು ಹಾಗೂ ಈ ಬಣ್ಣಗಳನ್ನು ಗಮನಿಸಿದರೆ ಹಚ್ಚೆಗೆ ತದ್ವಿರುದ್ದವಾದ ಬಣ್ಣಗಳನ್ನು ನೋಡಬಹುದು. ಚಿತ್ರಗಳಲ್ಲಿ ಹೊಸ ಹೊಸ ಬಗೆಯ ಚಿತ್ರ ಚಿತ್ತಾರಗಳು, ಇವುಗಳನ್ನು ನೋಡಿದರೆ ಇವುಗಳಲ್ಲಿಯ ಉದ್ದೇಶವೆನೆಂದ್ಧರೆ; ತಮ್ಮ ಮೈ ಸುಂದರವಾಗಿ ಕಾಣಿಸಲು ಮಾತ್ರ ಎಂಬುದು ತಿಳಿದುಬರುತ್ತದೆ. ಜನಪದರಲ್ಲಿ ಹಚ್ಚೆ ಹಾಕಿಸಿಕೊಂಡವರು ೭ ದಿನಗಳಕಾಲ ನೋವನ್ನು ಅನುಭವಿಸುತ್ತಿದ್ದರು. ಆದರೆ ಆಧುನಿಕತೆಯ ಬದಲಾವಣೆಯಲ್ಲಿ ೭ ದಿನಗಳ ನೋವು ಕೇವಲ ೧ ಗಂಟೆಯಲ್ಲಿ ಮಾಯವಾಗುತ್ತದೆ. ಪ್ರಸ್ತುತದಲ್ಲಿ ಈ ಹಚ್ಚೆ ಚಿತ್ರಕಲೆ ಯುವಕ, ಯುವತಿಯರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಾಗುತ್ತಿರುವುದು ಕಂಡುಕೊಳ್ಳಬಹುದು. ಈ ಒಂದು ಹಚ್ಚೆ ಚಿತ್ರಕಲೆ ಪಟ್ಟಣ ಭಾಗಗಳಲ್ಲಿ ಮಾತ್ರ ಹೆಚ್ಚಾಗಿ ಕಂಡುಬರುತ್ತದೆ. ಹಚ್ಚೆಯ ಕಲೆ ನಗರ ನಾಗರೀಕತೆಯ ವ್ಯವಸ್ಥೆಯಿಂದಾಗಿ ಜನಪದರಿಂದ ಮರೆಯಾಗುತ್ತಾ ನಡೆದಿದೆ, ಹಾಗೂ ಫ್ಯಾಶನ್ ಆಗಿ ವ್ಯಾಪಾರ ರೂಪ ಪಡೆಯುತ್ತಿದೆ.

**ಮದರಂಗಿಯ ಚಿತ್ರಕಲೆ :**

ಚರ್ಮದ ಮೇಲೆ ರಚಿಸಿಕೊಳ್ಳುವ ಚಿತ್ರಕಲೆಯಲ್ಲಿ ಶಾಶ್ವತವಾದುದು ಹಚ್ಚೆ ಚಿತ್ರಕಲೆಯಾದರೆ, ಅಶಾಶ್ವತ ಚಿತ್ರಕಲೆಯಲ್ಲಿ ಮದರಂಗಿಯ ಚಿತ್ರಕಲೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಮದರಂಗಿಯು ಪ್ರಾಚೀನ ಕಾಲದಿಂದಲೂ ಬೆಳೆದುಕೊಂಡು ಬಂದಂತಹ ಹಾಗೂ ಕಾಲಮಾನಕ್ಕೆ ತಕ್ಕಂತೆ ತನ್ನ ರಚನಾ ಸ್ವರೂಪದಲ್ಲಿ ಬದಲಾವಣೆಯನ್ನು ಕಂಡುಕೊಳ್ಳುತ್ತ ಮುನ್ನೆಡೆದಿದೆ. ಸಂಪ್ರದಾಯ, ಕಲಾತ್ಮಕತೆ, ಸೌಭಾಗ್ಯಗಳೆಲ್ಲ ಮದರಂಗಿಯ ರೂಪದಲ್ಲಿ ಸ್ತ್ರೀ ಕೈ, ಕಾಲು, ಮುಖಗಳ ಮೇಲೆ ಸ್ಥಾನ ಪಡೆದಿದೆ. ಸ್ತ್ರೀಯರಂತೆ ಪುರುಷರು ಮದರಂಗಿಯಿಂದ ಶೃಂಗಾರಗೊಳ್ಳುವುದಿದೆ. ಆದರೆ ಪ್ರಮುಖವಾಗಿ ಈ ಮದರಂಗಿಯು ಚಿಕ್ಕಮಕ್ಕಳನ್ನೊಳಗೊಂಡು ಪ್ರೌಢ ಸ್ತ್ರೀಯರಿಗೆ ಮಿಸಲಾದಂತಹದು.

ಜನಪದಿಯರು ಮದರಂಗಿಯ ಬಣ್ಣವನ್ನು ಸಹಜ ಹಾಗೂ ಸರಳವಾಗಿ



ತಯಾರಿಸಿಕೊಳ್ಳುತ್ತಿದ್ದರು. ಮದರಂಗಿ ಗಿಡದದಿಂದ ಸೊಪ್ಪನ್ನು ತಂದು ಅದನ್ನು ಚೆನ್ನಾಗಿ ಒಣಗಿಸಿ, ಕುಟ್ಟಿ ಪುಡಿ ಮಾಡುತ್ತಾರೆ. ಈ ಪುಡಿಯನ್ನು ತೆಳ್ಳನೆಯ ಬಟ್ಟೆ ಇಲ್ಲವೆ ಸಣ್ಣ ಜರಡಿಯ ಮೂಲಕ ಸೋಸುತ್ತಾರೆ. ಸೋಸಿದ ಪುಡಿಯನ್ನು ಒಂದು ಪಾತ್ರೆಯಲ್ಲಿ ಸಂಗ್ರಹಿಸಿಡುತ್ತಾರೆ. ನಂತರ ಸಂದರ್ಭಗಳಿಗನುಸಾರವಾಗಿ ಮದರಂಗಿಯ ಪುಡಿಯನ್ನು ಉಪಯೋಗಿಸುತ್ತಾರೆ. ಹೇಗೆಂದರೆ ಚಹಾಪುಡಿ ಮತ್ತು ಲಿಂಬೆಹಣ್ಣಿನ ರಸವನ್ನು ನೀರಿನಲ್ಲಿ ಹಾಕಿ ಚೆನ್ನಾಗಿ ಕುದಿಸಿ, ಅದರಲ್ಲಿ ಮದರಂಗಿಯ ಪುಡಿಯನ್ನು ಕೂಡಿಸಿ ದ್ರಾವಣವನ್ನಾಗಿ ತಯಾರಿಸಿಕೊಳ್ಳುತ್ತಾರೆ.

ಜನಪದಿಯರು ಮದರಂಗಿಯಿಂದ ಚಿತ್ರಗಳನ್ನು ರಚಿಸುವುದಕ್ಕೆ ಶರೀರದ ವಿವಿಧ ಭಾಗಗಳನ್ನು ಕುರಿತು ಹೇಳಬಹುದು. ಮದರಂಗಿಯನ್ನು ರಾತ್ರಿ ಸಮಯದಲ್ಲಿ ಹಚ್ಚಿಕೊಳ್ಳುವುದು ಹೆಚ್ಚು ಪ್ರಚಲಿತದಲ್ಲಿದೆ. ಪ್ರಾಚೀನ ಕಾಲದಲ್ಲಿ ಹಣೆಯ ಮೇಲಲ್ಲದೇ ಕೆನ್ನೆ, ಹಣೆ, ಕೈಕಾಲುಗಳ ಸುತ್ತಲೂ, ಸ್ತನಗಳ ಮೇಲೂ ಪ್ರಿಯತಮರ ಕಣ್ಣಿಗೆ ಹಬ್ಬವಾಗುವಂತೆ ಅಂಗಾಂಗಗಳ ಮೇಲೂ ಚಿತ್ರವಿನ್ಯಾಸ ಮಾಡುತ್ತಿದ್ದರಂತೆ. ಚಂದನ, ಶ್ರೀಗಂಧ, ಕೇಸರಿ, ಕಸ್ತೂರಿಯುಕ್ತವಾದ ರಸಗಳಿಂದ ಲೇಪಿಸಿಕೊಳ್ಳುತ್ತಿದ್ದ ವಿವರ ಹಳೆಯ ಕಾವ್ಯಗಳಲ್ಲಿ ಕಾಣುತ್ತೇವೆ.[೧೮]

ಮದರಂಗಿಯನ್ನು ಹಚ್ಚಿಕೊಳ್ಳುವುದು ಅಥವಾ ಹಚ್ಚುವುದು ಕೆಲವು ಮುಖ್ಯವಾದಂತಹ ಸಂದರ್ಭಗಳನ್ನು ಬೆಳಗಾವಿ ಜಿಲ್ಲೆಯಲ್ಲಿ ಕಾಣಬಹುದು. ಅವುಗಳಲ್ಲಿ ಹುಟ್ಟು ಹಬ್ಬ, ಮದುವೆ, ನಿಶ್ಚಿತಾರ್ಥ, ಹಬ್ಬಗಳಲ್ಲಿ, ಜಾತ್ರೆ, ಉತ್ಸವಗಳು, ನೃತ್ಯದಂತಹ ಪ್ರದರ್ಶನ ಕಲೆಯಲ್ಲಿ ಹೀಗೆ ಇನ್ನೂ ಮುಂತಾದ ಸಂದರ್ಭಗಳಲ್ಲಿ ಮದರಂಗಿಯ ಚಿತ್ರಕಲೆಯಿಂದ ಶೃಂಗರಿಸಿಕೊಳ್ಳುವುದು ರೂಢಿಯಲ್ಲಿದೆ. ಈ ಎಲ್ಲ ಸಂದರ್ಭಗಳಲ್ಲಿ ಸ್ತ್ರೀಯರ ಸ್ಥಾನವೇ ಪ್ರಮುಖವಾಗಿ ಕಂಡುಬರುತ್ತಿದ್ದು, ಹಾಗೂ ಚಿಕ್ಕಮಕ್ಕಳಲ್ಲಿ ಈ ಕಲೆಯು ಉತ್ಸಾಹ ತುಂಬುವ ಸಾಧನವಾಗಿದೆ. ಮದರಂಗಿಯನ್ನು ಹಚ್ಚುವುದಕ್ಕೆ ಕೆಲವು ಸಲಕರಣೆಗಳು ಬೇಕಾಗುತ್ತವೆ ಅವುಗಳು ಡಬ್ಬಿ, ಮಿಶ್ರಣ ಪಾತ್ರೆ, ಕಡ್ಡಿ, ಬಿಳಿಯ ಬಟ್ಟೆ. ಹಾಗೂ ಚಿತ್ರಗಳಲ್ಲಿ ಮುಂತಾದವುಗಳು.

ಆದರೆ ಇಂದಿನ ಆಧುನಿಕತೆಯ ಪ್ರಭಾವದಿಂದ ಎಲ್ಲ ಕ್ಷೇತ್ರಗಳಲ್ಲಿ ಬದಲಾವಣೆಯಾಗಿದೆ. ಅದರಂತೆಯೇ ಈ ಮದರಂಗಿ ಚಿತ್ರಕಲೆಯಲ್ಲೂ ಸಹ ಬದಲಾವಣೆಗಳನ್ನು ಕಾಣಬಹುದಾಗಿದೆ. ಪರಿಕರಗಳಲ್ಲಿ ಮದರಂಗಿಯ ಚಿತ್ರಗಳನ್ನು ರಚಿಸಲು ಸಿದ್ಧ ರೂಪದ ಮೆಹಂದಿ ಕೋನ್ ಎಂದೇ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಹಾಗೂ ರಸಾಯನಿಕ ಮಿಶ್ರಿತ ಮದರಂಗಿ, ಚಿತ್ರಗಳಲ್ಲಿ ಹೊಸ ಹೊಸ ಬಗೆಯ ಸುಳುಪಿನ ನಕ್ಷಾವಿನ್ಯಾಸಗಳು ಕಂಡುಬರುತ್ತವೆ. ಪ್ರಸ್ತುತದಲ್ಲಿ ಈ ಮದರಂಗಿ ಚಿತ್ರಕಲೆ ವ್ಯಾಪಾರ ರೂಪವನ್ನು ಪಡೆದುಕೊಂಡು, ಬ್ಯೂಟಿ ಪಾರ್ಲರ್‌ಗಳಲ್ಲಿ

---

೧೮. ಡಾ. ಎಸ್.ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ, ೧೧೮



ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಾಗುತ್ತಿರುವುದು ಕಂಡುಕೊಳ್ಳಬಹುದು. ಈ ಒಂದು ಮದರಂಗಿಯ ಕಲೆ ನಗರ ನಾಗರಿಕತೆಯ ವ್ಯವಸ್ಥೆಯಿಂದಾಗಿ ಜನಪದರಿಂದ ಮರೆಯಾಗುತ್ತಾ ನಡೆದಿದೆ, ಹಾಗೂ ಫ್ಯಾಶನ್ ರೂಪ ಪಡೆಯುತ್ತಿದೆ.

**ಕೌದಿ :**

ಆದಿ ಮಾನವನು ಮೊದಲು ಕಲ್ಲಾಸರೆಯನ್ನೇ ತನ್ನ ವಾಸಸ್ಥಳವನ್ನಾಗಿ ಮಾಡಿಕೊಂಡಿದ್ದ. ಕಲ್ಲಾಸರೆಯ ಬದುಕಿನಲ್ಲಿ ಮಳೆ, ಚಳಿ, ಗಾಳಿ ಇವುಗಳಿಂದ ರಕ್ಷಿಸಿಕೊಳ್ಳಲು ಹೊದಿಕೆಗಳು ಅವಶ್ಯವಾದವು. ಆಗ ಮರದ ತೊಗಟೆ, ಗಿಡದ ತಪ್ಪಲು ಇಂತಹ ವಸ್ತುಗಳಿಂದ ತನ್ನನ್ನು ಕಾಪಾಡಿಕೊಳ್ಳಲು ಹೊದಿಕೆಯನ್ನಾಗಿ ಉಪಯೋಗಿಸಲು ಪ್ರಾರಂಭಿಸಿದ. ನಂತರ ಕಾಲಾಂತರದಲ್ಲಿ ನಾಗರಿಕತೆಯ ಜೀವನಕ್ಕೆ ಕಾಲಿರಿಸಿದಾಗ, ಅವನಿಗೆ ಉಡುಪು, ಆಹಾರ, ಹಾಸಿಗೆ, ಹೊದಿಕೆಗಳಲ್ಲಿ ಬದಲಾವಣೆಯಾದವು. ಆ ಬದಲಾವಣೆಯ ಹಿನ್ನೆಲೆಯಲ್ಲಿ ನೂಲಿನ ಬಟ್ಟೆ, ಬಟ್ಟೆಯ ಹೊದಿಕೆಗೆ ಮನುಷ್ಯ ಕಾಲಿಟ್ಟನು. ನಾಗರಿಕತೆಯ ಮಾನವನಿಗೆ ನೂಲಿನಿಂದ ತಯಾರಾದಂತಹ ಬಟ್ಟೆಯೇ ಹೊದಿಕೆಯ ಒಂದು ಸಾಧನವಾಯಿತು. ಈ ಸಾಧನದಲ್ಲಿ ತುಂಡು ಬಟ್ಟೆಗಳನ್ನು ಒಂದನ್ನೊಂದು ಜೊಡಿಸಿ ಕೈಯಿಂದ ಹೊಲಿಯುತಿದ್ದರು. ಹೀಗೆ ತಯಾರಾದ ಸಾಧನವನ್ನು ಕೌದಿ ಎಂದು ಜನಪದಿಯರು ಕರೆಯಲಾರಂಭಿಸಿದರು.

**ಕೌದಿ ತಯಾರಿಸುವ ಸಮಯ ಮತ್ತು ವಿಧಾನ :**

ಜನಪದರು ಯಾವುದೇ ಹೊಸ ಕೆಲಸವನ್ನು ಆರಂಭಿಸುವ ಮುನ್ನ ಹಿರಿಯರನ್ನಾಗಲಿ, ಮಠದಸ್ವಾಮಿಗಳನ್ನಾಗಲಿ, ಜ್ಯೋತಿಷಿಗಳನ್ನಾಗಲಿ ಕಂಡು ಅವರ ಅಭಿಪ್ರಾಯದ ಮೇರೆಗೆ ತಮ್ಮ ಕೆಲಸಕ್ಕೆ ತೊಡಗುತ್ತಾರೆ. ಅಂತಹದೊಂದು ಶುಭದಿನವನ್ನು ಗೊತ್ತುಮಾಡಿಕೊಂಡು ಹೆಣ್ಣುಮಕ್ಕಳು ಕೌದಿಯನ್ನು ಹೊಲಿಯಲು ಇಲ್ಲವೇ ಹೊಲಿಸಲು ಪ್ರಾರಂಭಿಸುತ್ತಾರೆ. ಸಾಮಾನ್ಯವಾಗಿ ಯುಗಾದಿಪಾಡ್ಯ ಅಥವಾ ಯಾವುದಾದರು ಒಳ್ಳೆಯ ದಿನದಂದು ಕೌದಿಗೆ ಶುಭ ಮುಹೂರ್ತವೆಂದು ನಿಶ್ಚಯಿಸುತ್ತಾರೆ. ಕೆಲವು ಸಲ ಮುಹೂರ್ತಕ್ಕಿಂತ ವಾರವು ಬಹಳ ಮುಖ್ಯವೆಂದು ಹೇಳುತ್ತಾರೆ. ಶನಿವಾರ ಇಲ್ಲವೆ ಬುಧುವಾರ ಮಾತ್ರವೇ ಕೌದಿ ಮಾಡಬೇಕೆಂಬ ನಿಯಮವಿದೆ. ಧನಿಷ್ಟಾ ನಕ್ಷತ್ರದ ಸಮಯವಾದ ಪಂಚಕದ ಸಂದರ್ಭದಲ್ಲಿ ಕೌದಿಯನ್ನು ಹೊಲಿಯುವುದಕ್ಕಾಗಲಿ ಮತ್ತು ಹೊಲಿಗೆ ಮುಗಿಸುವುದಾಗಲಿ ಮಾಡಬಾರದೆಂಬ ನಿಯಮ ಜನಪದರಲ್ಲಿದೆ.[೧೯]

ಕೌದಿಯನ್ನು ಹೆಚ್ಚಾಗಿ ಬೇಸಿಗೆ ಕಾಲದಲ್ಲಿ ಹೊಲಿಯುತ್ತಾರೆ. ಇನ್ನುಳಿದ ಸಮಯದಲ್ಲಿ ಅರಿವೆಗಳು ತಂಪಾಗಿರುವುದರಿಂದ ಸೂಜಿ ಸರಿಯಾಗಿ ನಾಟುವುದಿಲ್ಲ. ಇದರಿಂದ ಬೇಸಿಗೆಯಲ್ಲಿ

೧೯. ಡಾ. ಎಸ್.ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪುಟ, ೧೩೦



ಕೌದಿಯ ಪದರು ಅರಿವೆಗಳನ್ನು, ತೆಪೆ ತುಂಡುಗಳನ್ನು ಬಿಸಿಲಿಗೆ ಒಣಹಾಕಿ ಹೊಲಿಗೆಗೆ ತೊಂದರೆಯಾಗದಂತೆ ಮಾಡಿಕೊಳ್ಳುತ್ತಾರೆ. ಕೆಲವರು ವರ್ಷದುದ್ದಕ್ಕೂ ಕೌದಿ ಹೊಲಿಯುವುದನ್ನು ಹವ್ಯಾಸವಾಗಿರಿಸಿಕೊಂಡಿದ್ದಾರೆ. ಬೆಳಗಾವಿ ಜಿಲ್ಲೆಯ ಹಳ್ಳಿಗಳಲ್ಲಿ ಮಣ್ಣೆತ್ತಿ ಅಮವಾಸೆ ಎಂದರೆ ಜುಲೈ ತಿಂಗಳು ಬಿಟ್ಟರೆ ಉಳಿದ ಹನ್ನೊಂದು ತಿಂಗಳು ಕೌದಿಯನ್ನು ಹೊಲಿಯುತ್ತಿರುತ್ತಾರೆ. ಮುದುಕಿಯರು ಸಮಯ ಕಳಿಯುವುದಕ್ಕಾಗಿ ಕೌದಿಯನ್ನು ಹೊಲಿದರೆ, ಇದನ್ನೇ ವೃತ್ತಿಯನ್ನಾಗಿಸಿಕೊಂಡವರು ಇಡೀ ದಿನವೂ ಹೊಲಿಯುತ್ತಾರೆ. ಕೆಲವರು ಕೆಲಸ ಮುಗಿಸಿಕೊಂಡು ಮಧ್ಯಾಹ್ನದ ವೇಳೆಯಲ್ಲಿ ಮಾತ್ರ ಹೊಲಿಯುತ್ತಾರೆ.

ಕೌದಿಗೆ ಬೇಕಾದಂತಹ ಸಾಮಗ್ರಿಗಳಲ್ಲಿ ಮುಖ್ಯವಾಗಿ ಹಳೆಯ ಅಥವಾ ಹೊಸ ಬಟ್ಟೆಗಳನ್ನು ಉಪಯೋಗಿಸುತ್ತಾರೆ. ಬಟ್ಟೆಯನ್ನು ತುಂಡು ತುಂಡಾಗಿ ಕತ್ತರಿಸಿಕೊಳ್ಳಲು ಕತ್ತರಿ ಅಥವಾ ಕುಡುಗೋಲನ್ನು ಬಳಸುತ್ತಾರೆ. ಹಾಗೆ ತುಂಡು ಬಟ್ಟೆಗಳನ್ನು ಸಮಬದ್ಧವಾಗಿ ಜೋಡಿಸಿಕೊಂಡು ಹೊಲಿಯಲು ಸೂಜಿ ಮತ್ತು ದಾರವನ್ನು ಬಳಸುತ್ತಾರೆ. ಮೊದಲು ದೊಡ್ಡ ಅರಿವೆಯನ್ನು ತೊಯ್ಯಿಸಿ ಹಾಸಿಕೊಂಡು, ನಂತರ ಒಣ ಅರಿವೆಯನ್ನು ಅದರ ಮೇಲೆ ಹಾಕುತ್ತಾರೆ. ಹೀಗೆ ಎಲ್ಲ ಕಡೆಯೂ ಸಮನಾಗಿ ಹೆಚ್ಚೂ ಕಡಿಮೆಯಾಗದಂತೆ ಅರಿವೆ ಹಾಕಿಕೊಂಡು ಹೊಲಿಗೆ ಆರಂಭಿಸುತ್ತಾರೆ. ಇಂತಹ ವಿಧಾನವನ್ನು ಜನಪದಿಯರ ಹೇಳಿಕೆಯಲ್ಲಿ ಲ್ಯಾವಿ ಮಾಡುವುದು ಎಂದು ಕರೆಯುತ್ತಾರೆ. ಕೌದಿಗಳನ್ನು ದೊಡ್ಡವರ ಕೌದಿ ಮತ್ತು ಚಿಕ್ಕವರ ಕೌದಿ ಎಂದು ವಿಭಾಗಿಸಿಕೊಂಡು ತಯಾರಿಸಲಾಗುತ್ತದೆ. ದೊಡ್ಡವರ ಕೌದಿಗಳು ಏಳು ಅಡಿ ಉದ್ದ, ಐದು ಅಡಿ ಅಗಲ ಹಾಗೂ ಚಿಕ್ಕವರ ಕೌದಿಗಳಲ್ಲಿ ಐದು ಅಡಿ ಉದ್ದ, ನಾಲ್ಕು ಅಡಿ ಅಗಲಾಗಿರುತ್ತದೆ. ಕೌದಿಯಿಂದ ಮನುಷ್ಯರ ಹೊದಿಕೆಯ ವಸ್ತುಗಳಲ್ಲದೆ ತಲೆದಿಂಬು, ತೊಟ್ಟಿಲ ಕೌದಿ, ಕೈಚೀಲ, ವಸ್ತುಗಳಿಗೆ ಹೊದಿಕೆಯ ಕೌದಿಗಳನ್ನು ತಯಾರಿಸಲಾಗುತ್ತದೆ.

**ಕೌದಿ ಮೇಲಿನ ಚಿತ್ರಕಲೆ :**

ಕೌದಿಗಳು ಹೊದೊಕೆಯ ವಸ್ತುಗಳಾಗಿರಬಹುದು, ಆದರೆ ಇವುಗಳನ್ನು ತಯಾರಿಸುವ ಸಂದರ್ಭದಲ್ಲಿ ಇವು ಸುಂದರವಾಗಿ ಕಾಣಿಸಲು ಇವುಗಳ ಮೇಲೆ ವರ್ಣಮಯವಾದ ಬಟ್ಟೆಯ ತುಂಡುಗಳಿಂದ ಚಿತ್ರಗಳನ್ನು ರಚಿಸಲಾಗುತ್ತದೆ. ಇಲ್ಲಿ ಕಂಡುಬರುವ ಚಿತ್ರಗಳು ರಾಮಾಯಣ, ಮಹಾಭಾರತದ ದೃಶ್ಯಗಳಲ್ಲಿ ರಾಮನ ತೊಟ್ಟಿಲು, ಸೀತೆ, ಲವ-ಕುಶ, ಅಭಿಮನ್ಯು, ಚಕ್ರವ್ಯೂಹ, ರಾಧಾ-ಕೃಷ್ಣ, ಪಗಡೆಯಾಟ ಮುಂತಾದವು. ಐತಿಹಾಸಿಕ ಚಿತ್ರಗಳಲ್ಲಿ ಹಂಪಿ, ತಿರುಪತಿ, ಜಾತ್ರೆಯ ನೆನಪಿಗಾಗಿ ತೇರು, ಹಬ್ಬ, ಉತ್ಸವದ ಚಿತ್ರಗಳು, ಸ್ಥಳೀಯ ದೇವಸ್ಥಾನಗಳು, ಮಹಾಪುರುಷರ ಚಿತ್ರಗಳು ಕಾಣಬಹುದು. ಧಾರ್ಮಿಕ ಚಿತ್ರಗಳಲ್ಲಿ ಹಿಂದೂ-ಮುಸ್ಲಿಂ, ಕ್ರೈಸ್ತ-ಬೌದ್ಧ, ಜೈನ-ವೀರಶೈವ ಮೊದಲಾದ ಮತದ ಜನರು ತಮ್ಮ ಆರಾಧ್ಯ



ದೈವಗಳನ್ನು ಮತ್ತು ಧರ್ಮಗಳನ್ನು ಸಂಕೇತಿಸುವ ಚಿತ್ರಗಳನ್ನು ರಚಿಸಿದ್ದನ್ನು ನೋಡಬಹುದು.

ಸಾಮಾಜಿಕ ಮತ್ತು ನೈಸರ್ಗಿಕ ಚಿತ್ರಗಳಲ್ಲಿ ಕೃಷಿಗೆ, ನಿಸರ್ಗ, ಜಾತ್ರೆ, ಉತ್ಸವ, ಮದುವೆ, ಜನಪದ ಆಟಗಳಿಗೆ ಸಂಬಂಧಿಸಿದ ರೇಖಾಚಿತ್ರಗಳನ್ನು ಕಂಡುಕೊಳ್ಳಬಹುದು. ಇವುಗಳಲ್ಲಿ ಚಕಾರ ಮನಿ, ಪಗಡೆ ಬಜಾರ, ಬಾಸಿಂಗ, ಚಂದ್ರ, ನಕ್ಷತ್ರ, ನವಿಲು, ಗಿಳಿ, ಆನೆ, ಒಂಟೆ ಇನ್ನೂ ಮುಂತಾದವುಗಳು. ಅಲಂಕಾರಿಕ ಚಿತ್ರಗಳಲ್ಲಿ ಹೂಬಳ್ಳಿ, ನಕ್ಷಾವಿನ್ಯಾಸದ ಸುಳಿವುಗಳು, ಸ್ವಸ್ತಿಕ, ಹಣ್ಣುಗಳು ಹಾಗೂ ತುಂಡು ತೆಪೆ ಹಚ್ಚುವಲ್ಲಿಯೂ ಸಹ ವಿವಿಧ ರೀತಿಯ ಹೊಲಿಗೆಯ ರೇಖಾ ವಿನ್ಯಾಸದಲ್ಲಿ ಕೌದಿಯ ಅಲಂಕಾರಿಕ ಚಿತ್ರಗಳನ್ನು ಕಾಣುತ್ತೇವೆ. ಸುಳುವು, ಪಕ್ಷಿ, ಹೂ, ಎಲೆ ಬಳ್ಳಿಯಂತಹ ಚಿತ್ರಗಳು ದಾರದಿಂದ ರೇಖೆಯ ರೂಪ ಪಡೆದು ಕೌದಿಯಲ್ಲಿ ಕಾಣಿಸಿಕೊಳ್ಳುತ್ತವೆ. ಕೌದಿಯು ಮುಕ್ಕಾಲು ಭಾಗ ಈ ಅಲಂಕಾರಿಕ ಚಿತ್ರಗಳಿಂದಲೇ ಕೂಡಿಕೊಂಡಿರುತ್ತದೆ. ಇಂತಹ ಚಿತ್ರಕಲೆಯನ್ನು ಕೌದಿಯನ್ನು ಬೆಳಗಾವಿ ಜಿಲ್ಲೆಯ ಸವದತ್ತಿ, ದೊಡವಾಡ, ವಣ್ಣೂರು, ರಾಮದುರ್ಗ ತಾಲೂಕಿನ ನರಸಾಪೂರ, ಸುನ್ನಾಳ, ಬನ್ನೂರು, ಗೋಕಾಕ್ ತಾಲೂಕಿನ ಶಿಂದಿಕುರಬೆಟ, ಅಂಕಲಗಿ, ಅಕ್ಕತಂಗೆರಹಾಳ ಇನ್ನೂ ಮುಂತಾದ ತಾಲೂಕಿನ ಊರುಗಳಲ್ಲಿ ಕಾಣಬಹುದು.

ಇಂದಿನ ಆಧುನಿಕತೆಯ ಪ್ರಭಾವದಿಂದ ಕೌದಿಯಲ್ಲಿಯೂ ಬದಲಾವಣೆಯನ್ನು ನೋಡಬಹುದು. ಹಾಗೂ ಪ್ರಸ್ತುತ ಜನರು ಸಿದ್ಧ ರೂಪದಲ್ಲಿ ದೊರೆಯುವಂತಹ ಹೊದಿಕೆಗೆ ಮೊರೆ ಹೋಗುತ್ತಿದ್ದಾರೆ. ಈ ಸಿದ್ಧ ರೂಪದ ಹೊದಿಕೆಯು ಹಳ್ಳಿಗಳಿಗೂ ಆವರಿಸಿಕೊಂಡಿದೆ. ಹಾಗಾಗಿ ಕೌದಿಯ ತಯಾರಿಕೆಯಲ್ಲಿ ಸ್ವಲ್ಪ ಪ್ರಮಾಣ ಇಳಿಮುಖ ಕಾಣುತ್ತಿದೆ. ಆದರೆ ಹಲವಾರು ಹಳ್ಳಿಗಳಲ್ಲಿ ಕೌದಿಯನ್ನೇ ದೇವರು ಎಂದು ನಂಬಿರುವಂತಹ ಹಲವಾರು ಮನೆತನಗಳೂ ಇವೆ. ಹಾಗೂ ಕೌದಿಯನ್ನೆ ನಂಬಿ, ವೃತ್ತಿಯನ್ನಾಗಿಸಿಕೊಂಡು ಜೀವನ ನಡೆಸುತ್ತಿರುವಂತಹ ಕುಟುಂಬಗಳು ಬೆಳಗಾವಿ ಜಿಲ್ಲೆಯ ದೊಡವಾಡ, ನೇಸರಗಿ, ನೇಗಿನಾಳ ಇನ್ನು ಮುಂತಾದವು ಕಡೆ ಕಂಡುಬರುತ್ತವೆ. ಕೌದಿಯು ಆಧುನಿಕ ಯುಗದ ಚಿತ್ರಕಲೆಯ ಎರಡು ವಿಧಾನಗಳಿಗೆ ಮಾತೃ ಎಂದು ಹೇಳಬಹುದು. ಹೆಗೆಂದರೆ ಕೊಲ್ಯಾಜ್ ಮತ್ತು ಬಾಟಿಕ್ ಮಾಧ್ಯಮದ ಚಿತ್ರಕಲೆ ಎಂದು ಕರೆಸಿಕೊಳ್ಳುವ ವಿಧಾನವು ಕೌದಿಯಿಂದಲೇ ರೂಪತಾಳಿದ್ದು ಎಂದರೆ ತಪ್ಪಾಗಲಾರದು.

**ಕಸೂತಿ ಕಲೆ :**

ಕಸೂತಿಯಲ್ಲಿಯೂ ಬಟ್ಟೆಯ ಮೇಲೆ ದಾರದಿಂದ ರಚಿಸಲಾದ ಚಿತ್ರಗಳಿರುವುದರಿಂದ ಇದನ್ನು ಕೌದಿಯ ಸಹೋದರಕಲೆ ಎಂದು ಕರೆಯುವುದು ವಾಡಿಕೆ. ಆದರೆ ಇವೆರಡರಲ್ಲಿ ಮಾಧ್ಯಮವು ಒಂದೇ ಆದರೆ ವಿಧಾನಗಳು ಬೇರೆ ಬೇರೆಯಾಗಿವೆ. ಕಸೂತಿಯಲ್ಲಿ ಎರಡು ಬಗೆಯ ಆನಂದ ಇರುವುದನ್ನು ತಿಳಿಯಬಹುದು. ಕಸೂತಿಯನ್ನು ಹೆಣೆಯುವವರಲ್ಲಿ



ತೋರುವ ಸಮಾಧಾನ ಮತ್ತು ನೋಡುವವರಲ್ಲಿ ಕಾಣುವ ಸಂತೃಪ್ತಿ. ಈ ಆಂತರಿಕ ಸಂಬಂಧದ ಮೂಲಕ ಈ ಕಲೆ ಹೊರಹೊಮ್ಮುತ್ತದೆ. ಚಳಿ, ಮಳೆ, ಬಿಸಿಲು, ಗಾಳಿಗಳಿಂದ ಶರೀರದ ರಕ್ಷಣೆಯಾಗಲೆಂದು ಆರಂಭವಾದ ಉಡುಪು ಕಾಲಾಕ್ರಮದಲ್ಲಿ ಧಾರ್ಮಿಕ, ರಾಜಕೀಯ. ಸಾಮಾಜಿಕ ಅಂತಸ್ತಿನ ವಸ್ತುವಾಯಿತು. ನಂತರ ಪ್ರಾದೇಶಿಕವಾಗಿ, ಜನಾಂಗಿಕವಾಗಿ ವೈವಿಧ್ಯತೆ, ವೈಭವಗಳಿಂದ ಬೆಳೆದು ನಿಲ್ಲುವಂತಾಯಿತು. ಅಷ್ಟೇ ಅಲ್ಲದೆ ಈ ಕಲೆಯು ಇಡೀ ಜಗತ್‌ಪ್ರಸಿದ್ಧ ಕಲೆಯಾಗಿ ಇಂದು ಶಾಲಾ ಶಿಕ್ಷಣದಲ್ಲಿ ತನ್ನದೇ ಆದ ಪಠ್ಯಕ್ರಮವನ್ನು ಹೊಂದಿ, ಕಲಾ ಶಿಕ್ಷಣದಲ್ಲಿ ಸ್ಥಾನವನ್ನು ಪಡೆದುಕೊಂಡಿದೆ.

**ಕಸೂತಿ ಸಾಮಗ್ರಿಗಳು :**

ಕಸೂತಿ ರಚನೆಯಲ್ಲಿ ಪ್ರಮುಖವಾಗಿ ಬೇಕಾಗಿರುವಂತಹ ಸಾಮಗ್ರಿಗಳು ಹೀಗಿವೆ. ಕಸೂತಿ ಹಾಕುವಾಗ ಬಟ್ಟೆಯು ಮಡಿಕೆ ಬೀಳಬಾರದೆಂದು ಕಟ್ಟಿಗೆಯ ರಿಂಗನ್ನು ಬಳಸುತ್ತಾರೆ. ಸೂಜಿಗಳಲ್ಲಿ ಎರಡು ಬಗೆ ಅವುಗಳಲ್ಲಿ ಸಾಮಾನ್ಯ ಸೂಜಿ, ಕೊಕ್ಕೆ ಸೂಜಿ, ಹೆಣಿಕೆ ಮುಗಿದ ಮೇಲೆ ದಾರವನ್ನು ಕತ್ತರಿಸಲು ಕತ್ತರಿಯನ್ನು ಬಳಸುತ್ತಾರೆ. ದಾರಗಳಲ್ಲಿ ವಿವಿಧ ವರ್ಣದ ಸಾಮಾನ್ಯ ಹಾಗೂ ರೇಷ್ಮೆಯ ದಾರಗಳನ್ನು ಬಳಸುವುದು ಅವರವರ ಅಭಿರುಚಿಗನುಸಾರವಾಗಿ ಇರುವವು. ಕಸೂತಿಯನ್ನು ಹಾಕುವಾಗ ಕೈಗೆ ಸೂಜಿ ತಾಗಬಾರದೆಂದು ರಕ್ಷಣೆಗಾಗಿ ಲೋಹ ಮಾಧ್ಯಮದ ಅಂಗುಸ್ಥಾನ, ಚಿತ್ರದ ಬಾಹ್ಯ ರೇಖೆಗಳನ್ನು ಗುರುತಿಸಲು ಹಾಕಿಕೊಳ್ಳಲು ಪೆನ್ಸಿಲ್ ಉಪಯೋಗಿಸುತ್ತಾರೆ. ಕಸೂತಿಯನ್ನು ಹಾಕುವುದರಲ್ಲಿ ಸ್ತ್ರೀಯರದೇ ಪ್ರಧಾನ ಪಾತ್ರವಾಗಿದೆ. ಪುರುಷರ ಪಾತ್ರ ಸ್ವಲ್ಪ ಪ್ರಮಾಣದಲ್ಲಿ ಕಂಡುಬರುತ್ತದೆ.

**ಕಸೂತಿಯ ರಚನಾ ವಿಧಾನಗಳು :**

ಕಸೂತಿಯನ್ನು ಹಾಕುವಲ್ಲಿ ಬೇರೆ ಬೇರೆ ವಿಧಾನಗಳನ್ನು ಸಹ ತಿಳಿದುಕೊಳ್ಳಬಹುದು. ಅವುಗಳು ಕೈ ಕಸೂತಿ ಇದರಲ್ಲಿ ಕೈಯಿಂದ ಚಿತ್ರಗಳ ವಿನ್ಯಾಸಗಳನ್ನು ರಚಿಸುವಂತಹ ಕೌಶಲಯುಕ್ತ ಕಾರ್ಯ ಇದಾಗಿದೆ. ಇದರಲ್ಲಿ ಹೊಲಿಗೆಯ ಕಸೂತಿ ಎನ್ನುವುದು ದಾರವನ್ನು ಸೂಜಿಯಲ್ಲಿ ಪೋಣಿಸಿಕೊಂಡು ಹೊಲಿಗೆಯಿಂದ ಮಾಡಲಾಗುತ್ತದೆ. ಹಾಗೂ ಕೈ ಕಸೂತಿಯಲ್ಲಿಯೇ ಇನ್ನೊಂದು ವಿಧಾನವು ಇರುವುದು. ಅದು ಹೆಣಿಗೆಯ ಕಸೂತಿ ಇದರಲ್ಲಿ ಕಕ್ಕೊ ಸೂಜಿಯಿಂದ ದಾರವನ್ನೇ ಹೆಣೆಯುತ್ತ ಚಿತ್ರವನ್ನು ಮಾಡುತ್ತಾರೆ. ಯಂತ್ರದ ಕಸೂತಿ, ಇದರಲ್ಲಿ ಯಂತ್ರದ ಸಹಾಯದಿಂದ ಆಧುನಿಕ ರೀತಿಯಲ್ಲಿ ಹಾಕುವುದನ್ನು ಯಂತ್ರದ ಕಸೂತಿ ಎಂದು ಹೇಳುವರು. ಆದರೆ ಈ ಯಂತ್ರದ ಕಸೂತಿಗಿಂತ ಕೈ ಕಸೂತಿಗೆ ಹೆಚ್ಚು ಬೆಲೆ ಇರುವುದು ಕಂಡುಬರುತ್ತದೆ.



**ಕಸೂತಿ ರಚನಾ ಪ್ರಕಾರ ಮತ್ತು ಚಿತ್ರವಿನ್ಯಾಸಗಳು :**

ಕಸೂತಿ ರಚನಾ ಪ್ರಕಾರಗಳಲ್ಲಿ ಒಟ್ಟು ಐದು ಪ್ರಕಾರಗಳು ಕಂಡುಬರುತ್ತವೆ. ಅವುಗಳಲ್ಲಿ ೧. ಗಾಂವಟಿ(ದೇಶಿ) ಕಸೂತಿ, ಇದು ಇತರ ಕಸೂತಿಗಳಿಗಿಂತ ಭಿನ್ನವಾಗಿರುತ್ತದೆ. ಕಸೂತಿಯ ಕೆಳಗಿನ ಬದಿ ಮತ್ತು ಮೇಲಿನ ಬದಿಗಳರೆಡನ್ನೂ ಬೇಕಾದ ಹಾಗೆ ತಿರುಗಿಸಿ ನೋಡಿದರೂ ಈ ಕಸೂತಿಯ ವಿನ್ಯಾಸ ಒಂದೇ ರೀತಿಯಾಗಿ ಕಾಣುವುದು.

೨. ಮೆಂತೆ ಕಸೂತಿ, ಈ ಕಸೂತಿಯು ಸಾಲುಗಳು ಮೆಂತೆಕಾಳಿನ ಆಕಾರದಲ್ಲಿರುವುದರಿಂದ ಇದಕ್ಕೆ ಮೆಂತೆ ಕಸೂತಿ ಎಂದು ಹೆಸರು ಬಂದಿದೆ. ಇದರಲ್ಲಿ ಸಾಕಷ್ಟು ಪ್ರಯತ್ನ, ಏಕಾಗ್ರತೆ ಹಾಗೂ ಸ್ವಲ್ಪ ಮಟ್ಟಿನ ಬಣ್ಣದ ತಿಳುವಳಿಕೆ ಇರಬೇಕಾಗುತ್ತದೆ ಮತ್ತು ಇದಕ್ಕೆ ಹಿನ್ನೆಲೆ ಬಟ್ಟೆಯು ಬಣ್ಣದ್ದಾಗಿರುತ್ತದೆ.

೩. ನೇಯ್ಗೆ (ನೇಗಿ) ಕಸೂತಿ, ಈ ಕಸೂತಿಯನ್ನು ಬಟ್ಟೆಯ ಮೇಲಿರುವ ಅಡ್ಡ ಮತ್ತು ಉದ್ದವಾದ ಗೆರೆಗಳಲ್ಲಿ ಬಟ್ಟೆಯ ಅಡ್ಡ ಎಳೆಗಳೊಡನೆ ನೇಯ್ದಂತೆ ಹಾಕುತ್ತಾರೆ. ಹೀಗಾಗಿ ಕಸೂತಿಯ ಚಿತ್ರವಿನ್ಯಾಸಗಳು ನೇಯ್ದಂತೆ ಕಾಣಿಸುವುದು ಸಹಜ, ಹಾಗೂ ನೇಯ್ಗೆ ಕಸೂತಿ ಎನ್ನುವುದು ಕೂಡ.

೪. ಮುರಗಿ ಕಸೂತಿ, ಇದರಲ್ಲಿ ಹೆಣಿಕೆಯು ಮುರುಗಿ ಮುರುಗಿಯಾಗಿರುವುದು. ಅಲ್ಲದೆ ಈ ಕಸೂತಿಯಲ್ಲಿ ಎಳೆಗಳನ್ನು ಹೆಣೆಯುತ್ತ ಹೋದಂತೆ ಎಳೆಗಳು ಕೊನೆಗೆ ಎಲ್ಲೋ ನಿಂತಂತೆಯೂ, ಮೆಂತೆ ಕಸೂತಿಯ ಅರ್ಧ ಭಾಗದಂತೆಯೂ ಕಾಣಿಸುತ್ತವೆ. ಹಾಗೂ ಬಟ್ಟೆಯ ಮೇಲಿನ ಮುರುಗಿ ಮುರುಗಿಯಾದ ಎಳೆಗಳು ನೋಡಲು ಅಂದವಾಗಿರುತ್ತವೆ.

೫. ಕನ್ನಡಿ ಕಟ್ಟಿನಲ್ಲಿ ಹಾಕುವ ಕಸೂತಿ, ಇಲ್ಲಿ ಕಸೂತಿ ಹಾಕಿದ ಚಿತ್ರಗಳನ್ನು ಕನ್ನಡಿ ಕಟ್ಟು ಹಾಕಿಸುವುದು. ಹಾಗೂ ಮದುವೆಯ ಸಂದರ್ಭದಲ್ಲಿ ಹೆಣ್ಣಿನ ಮನೆಯವರು ಗಂಡಿನ ಮನೆಯವರಿಗೆ ಉಡುಗೊರೆಯ ರೂಪದಲ್ಲಿ ಕೊಡುವ ಸಂಪ್ರದಾಯವಿದ್ದು, ಬೆಳಗಾವಿ ಜಿಲ್ಲೆಯ ಹಳ್ಳಿಗಳಲ್ಲಿ ಇನ್ನೂ ಪ್ರಚಲಿತದಲ್ಲಿದೆ.

**ಕಸೂತಿಯಲ್ಲಿ ಚಿತ್ರವಿನ್ಯಾಸಗಳು :**

ಕಸೂತಿಯಲ್ಲಿ ಚಿತ್ರವಿನ್ಯಾಸಗಳು ತುಂಬಾ ವೈವಿಧ್ಯಮಾಯವಾಗಿವೆ. ಇವುಗಳಲ್ಲಿ ಧಾರ್ಮಿಕ ಮತ್ತು ಧಾರ್ಮಿಕೇತರ ಚಿತ್ರಗಳು ವಿಭಾಗಿಸಬಹುದು. ಧಾರ್ಮಿಕ ಕಸೂತಿ ಚಿತ್ರಗಳಲ್ಲಿ ಸ್ತ್ರೀಯರು, ಪುರುಷರು ಹಾಕುವ ಚಿತ್ರಗಳು ಕಾಣಿಸುತ್ತವೆ. ಇವುಗಳಲ್ಲಿ ಎತ್ತುಗಳ ಮೇಲೆ ಹಾಕುವ ಜೂಲದ ಚಿತ್ರಗಳು, ದೇವತೆಗಳ ಚಿತ್ರ, ಪೌರಾಣಿಕ ಚಿತ್ರ, ರಾಮಾಯಣದ,



ಮಹಾಭಾರತದ ದೃಶ್ಯಗಳು, ಧಾರ್ಮಿಕ ಕ್ಷೇತ್ರಗಳ ಚಿತ್ರಗಳನ್ನು ನೋಡಬಹುದು.

ಧಾರ್ಮಿಕೇತರ ಚಿತ್ರಗಳಲ್ಲಿ ಐತಿಹಾಸಿಕ ಚಿತ್ರಗಳು, ಇವುಗಳಲ್ಲಿ ಬಸವೇಶ್ವರ, ಅಕ್ಕಮಹಾದೇವಿ, ಸಿಂದೂರು ಲಕ್ಷ್ಮಣ, ಸಂಗೊಳ್ಳಿ ರಾಯಣ್ಣ, ಕಿತ್ತೂರು ಚನ್ನಮ್ಮ, ಟಿಪ್ಪು ಸುಲ್ತಾನ, ಕೃಷ್ಣದೇವರಾಯ ಇಂತಹ ಇನ್ನೂ ಮುಂತಾದ ಐತಿಹಾಸಕ ವ್ಯಕ್ತಿಗಳ ಚಿತ್ರಗನ್ನು ಈ ಕಸೂತಿಯಲ್ಲಿ ಕಾಣಬಹುದು. ಸಾಮಾಜಿಕ ಚಿತ್ರಗಳಲ್ಲಿ ಮನೆ, ಮದುವೆ, ಮದುವೆಯ ಹಂದರ, ಜಾತ್ರೆ, ಉತ್ಸವ, ಹಬ್ಬಗಳು ದೀಪದ ಸಾಲುಗಳು, ರಂಗೋಲಿ ಹೀಗೆ ಮೊದಲಾದ ಸಾಮಾಜಿಕ ಸನ್ನಿವೇಶಗಳನ್ನು ಈ ವಿಧಾನದಲ್ಲಿ ಮೂಡಿಬರುತ್ತವೆ. ರಾಜಕೀಯ ಚಿತ್ರಗಳಲ್ಲಿ ಗಾಂಧೀಜಿ, ಸುಭಾಷ್‌ಚಂದ್ರ ಭೋಸ್, ನೆಹರು, ಇಂದಿರಾಗಾಂಧಿ, ಅಂಬೇಡ್ಕರ ಮುಂತಾದ ರಾಷ್ಟ್ರನಾಕರು, ಸ್ವಾಮಿ ವಿವೇಕಾನಂದ, ಅರವಿಂದ, ವಿಶ್ವೇಶ್ವರಯ್ಯನವರಂತಹ ರಾಷ್ಟ್ರೀಯ ಮಹಾಪುರುಷರ ಚಿತ್ರಗಳನ್ನು ಹೆಣೆಯುತ್ತಾರೆ. ಅಲಂಕಾರಿಕ ಚಿತ್ರಗಳಲ್ಲಿ ನದಿ, ಕೆರೆ, ಬಾವಿ, ಗಿಡಮರ, ಹೂಬಳ್ಳಿ, ನಕ್ಷತ್ರ, ಸೂರ್ಯ, ಚಂದ್ರ, ಹಣ್ಣು, ಎಲೆ, ಕಾಯಿ, ಪಶುಪಕ್ಷಿಗಳು ಇನ್ನೂ ಮುಂತಾದ ಚಿತ್ರಗಳನ್ನು ಹೆಣೆಯುವುದು ರೂಢಿಯಲ್ಲಿದೆ. ಇವುಗಳನ್ನು ಮಕ್ಕಳ ಕುಲಾಯಿ, ಹಾಸಿಗೆ, ಹೊದಿಕೆ, ಅಂಗಿಗಳಲ್ಲಿ, ತೊಟ್ಟಿಲಿನ ಚಟ್ಟುಗಳಲ್ಲಿ, ಕೈಚೀಲ, ಬಾಗಿಲ ತೋರಣ ಇನ್ನೂ ಅನೇಕ ಬಗೆಯ ಬಣ್ಣದ ಬಿನ್ನಾಣಗಳಿಂದ ಹೆಣೆದಂತಹ ಚಿತ್ರಗಳನ್ನು ಕಾಣಬಹುದು. ಇಂತಹ ಕಸೂತಿ, ಹೊಲಿಗೆ ಮತ್ತು ಹೆಣಿಕೆಯಿಂದ ಕೂಡಿದ ವಸ್ತ್ರ ಮಾಧ್ಯವು ವೈಶಿಷ್ಟ್ಯ ಪೂರ್ಣವಾದ ಕಲೆಯಾಗಿದೆ. ಇವುಗಳು ಕನ್ನಡ ಕಸೂತಿ ಎಂದೇ ಪ್ರಸಿದ್ಧಿಯನ್ನು ಪಡೆದಿವೆ.

**ತೋಗಲು ಗೊಂಬೆಗಳಲ್ಲಿ ಚಿತ್ರಕಲೆ :**

ಸಾಮಾನ್ಯವಾಗಿ ಚಿತ್ರಗಳನ್ನು ಗೋಡೆ, ಮರದ ಹಲಿಗೆ, ಮೈಚರ್ಮ, ಗಾಜು, ಬಟ್ಟೆ ಇನ್ನೂ ಹಲವಾರು ಮಾಧ್ಯಮಗಳ ರಚಿತವಾಗಿರುವುದನ್ನು ನಾವು ಕಂಡುಕೊಂಡಿದ್ದೇವೆ. ಆದರೆ ಈ ತೊಗಲು ಗೊಂಬೆಯ ಮೇಲಿನ ಚಿತ್ರಕಲೆ ಒಂದು ವಿಶಿಷ್ಟವೆನ್ನಬಹುದು. ಏಕೆಂದರೆ ತೊಗಲು ಗೊಂಬೆಯನ್ನು ಒಂದು ಮನೋರಂಜನೆಗಾಗಿ ಬಳಸಿಕೊಳ್ಳುವಂತ ಪ್ರದರ್ಶನಾತ್ಮಕ ಮಾಧ್ಯಮವಾಗಿದೆ. ಈ ಪ್ರದರ್ಶನ ಮಾಧ್ಯಮದ ಕಲೆಗಳು ಜಗತ್ತಿನ ಎಲ್ಲೆಡೆಯೂ ಕಂಡುಬರುತ್ತವೆ. ಒಂದೊಂದು ಕಲೆಯೂ ವಿಶಿಷ್ಟವಾದ ಪ್ರೇಕ್ಷಕವರ್ಗವನ್ನು ಹೊಂದಿರುತ್ತದೆ. ಇಂತಹ ಕಲೆಗಳಲ್ಲಿ ತೊಗಲು ಗೊಂಬೆಯಾಟವೂ ಒಂದು. ಈ ತೊಗಲು ಗೊಂಬೆಯ ಆಟದ ಗೊಂಬೆಗಳಿಗೆ ಸುಂದರವಾಗಿ ವರ್ಣವಿನ್ಯಾಸದಿಂದ ಅಲಂಕಾರಗೊಳಿಸಲಾಗಿರುತ್ತದೆ. ಇವುಗಳಲ್ಲಿಯ ಚಿತ್ರಕಲೆ ಪ್ರಾಚೀನ ಕಾಲದಿಂದಲೂ ವೈವಿಧ್ಯತೆಯನ್ನು ಉಳಿಸಿಕೊಂಡು ಬಂದಿದೆ. ಚಿತ್ರಗಳ ಮೂಲಕ ಮನೋರಂಜನೆ ಒದಗಿಸುವ ಕೆಲಸವನ್ನು ದಕ್ಷಿಣ ಭಾತರದ ತೊಗಲು ಗೊಂಬೆ ಕಲಾವಿದರು ಮಾಡಿಕೊಂಡು ಬಂದಿರುವುದು ಇತಿಹಾಸದಿಂದ



ತಿಳಿಯಬಹುದು.

ಈ ತೊಗಲು ಗೊಂಬೆಯ ವರ್ಣರಂಜಿತ ಕಲಾ ಲೋಕವನ್ನು ಕೈಚಳಕದ ಅದ್ಭುತ ಕಲೆ ಎಂದರೆ ತಪ್ಪಾಗಲಾರದು. ಏಕೆಂದರೆ ತೊಗಲು ಗೊಂಬೆಯಾಟದ ಕಲೆ ಒಬ್ಬ ವ್ಯಕ್ತಿಗೆ, ಸೀಮಿತವಾಗಿರದೆ ಇಡೀ ಕುಟುಂಬದ ಜನರನ್ನು ತೊಡಗಿಸಿಕೊಳ್ಳುವ ಜನಸಮುದಾಯದ ಕಲೆಯಾಗಿದೆ. ಇಂತಹ ತೊಗಲು ಗೊಂಬೆಯಾಟದ ಕಲಾವಿದರನ್ನು ಕರ್ನಾಟಕದಾದ್ಯಂತ ಕಾಣಬಹುದು. ಅದರಲ್ಲಿಯೂ ಬೆಳಗಾವಿ ಜಿಲ್ಲೆಯ ಗೋಕಾಕ್ ತಾಲೂಕಿನ ಸುತ್ತಮುತ್ತ ಪ್ರದೇಶಗಳಲ್ಲಿ ಸುಮಾರು ೧೩ ರಿಂದ ೧೫ ಕಲಾವಿದರ ಕುಟುಂಬಗಳನ್ನು ಕಾಣಬಹುದು. ಈ ಗೊಂಬೆಯಾಟದ ಕಲಾವಿದರನ್ನು "ಕಿಳ್ಳಿಕ್ಯಾತರ" ಎಂದು ಕರೆಯುತ್ತಾರೆ. ಈ ಕಿಳ್ಳಿಕ್ಯಾತರ ಜನಾಂಗದವರೇ ತೊಗಲು ಗೊಂಬೆಗಳ ಆಟವನ್ನು ಆಡಿಸುವುದು ಮತ್ತು ಗೊಂಬೆಯ ಕಲಾಕೃತಿಗಳನ್ನು ಸ್ವತಹ ಇವರೇ ತಯಾರಿಸಿಕೊಳ್ಳುತ್ತಾರೆ.

ಈ ತೊಗಲು ಗೊಂಬೆಗಳಿಗೆ ನಿರ್ದಿಷ್ಟವಾದ ಪ್ರಾಣಿಗಳು ಅಂದರೆ ಮೇಕೆ, ಕುರಿ, ಎಮ್ಮೆ, ಕತ್ತೆ ಹಾಗೂ ಒಂಟೆಯ ಚರ್ಮವನ್ನು ಸಂಗ್ರಹಿಸಿಕೊಳ್ಳುತ್ತಾರೆ. ಕಿಳ್ಳಿಕ್ಯಾತರರು ವೈಯಕ್ತಿಕವಾಗಿ ಹಾಗೂ ದಾನ ಪಡೆಯುವುದರ ಮೂಲಕ ಚರ್ಮವನ್ನು ಸಂಗ್ರಹ ಮಾಡುತ್ತಾರೆ. ಮೊದಲಿನ ಕಾಲದಲ್ಲಿ ಜಿಂಕೆಯ ಚರ್ಮವನ್ನು ಮಾತ್ರ ಉಪಯೋಗಿಸುತ್ತಿದ್ದರು ಎಂಬುದು ಇತಿಹಾಸದಿಂದ ತಿಳಿಯಬಹುದು. ಇದು ಹೆಚ್ಚು ಪಾರದರ್ಶಕವಾಗಿರುವುದರಿಂದ ಮತ್ತು ಚಳಿಗಾಳಿ, ಮಳೆಗೆ ಬೇಗ ಹಾಳಾಗುವುದಿಲ್ಲ. ಈಗ ಯಾವ ಚರ್ಮವನ್ನಾದರೂ ಸಂದರ್ಭಕ್ಕೆ ತಕ್ಕಂತೆ ಉಪಯೋಗಿಸುತ್ತಾರೆ. ಸಂಗ್ರಹಿಸಿದ ಚರ್ಮವನ್ನು ಮಾಂಸ ಮತ್ತು ಕೂದಲುಗಳನ್ನು ತೆಗೆದು ತಿದ್ದಿ, ತೀಡಿ ಹದಗೊಳಿಸಿ ಆಕೃತಿಗೆ ತಕ್ಕಂತೆ ಕತ್ತರಿಕೊಳುತ್ತಾರೆ. ಆ ಚರ್ಮವನ್ನು ತೆಳ್ಳಗೆ ಪ್ಲ್ಯಾಸ್ಟಿಕ್ ಹಾಳೆಯ ಹಾಗೆ ಕಾಣಿಸುವಂತೆ (ಪಾರದರ್ಶಕ) ಮಾಡಿಕೊಂಡು, ಆ ಆಕೃತಿಗಳನ್ನು ಪಾತ್ರಕ್ಕೆ ಅನುಗುಣವಾಗಿ ವರ್ಣ ಲೇಪನ ಮಾಡಿಕೊಳ್ಳುತ್ತಾರೆ. ಏಕೆಂದರೆ ಈ ಗೊಂಬೆಯ ಆಟವು ರಂಗದ ಮೇಲೆ ರಾತ್ರಿಯ ವೇಳೆ ದೀಪದ ಬೆಳಕಿನಲ್ಲಿ, ವಾದ್ಯಗಳ ಮೇಳದೊಂದಿಗೆ ಆಡಿಸುವಂತ ಆಟ ಇದಾಗಿದೆ.

ಈ ಆಟಗಳಲ್ಲಿ ವಿವಿಧ ಕಥಾನಕಗಳನ್ನು ಆಡಿಸುವ ಆಟವೇ ತೊಗಲು ಗೊಂಬೆಯಾಟವಾಗಿದೆ. ಈ ಆಟಗಳಲ್ಲಿ ಪ್ರಮುಖವಾಗಿ ದಶಾವತಾರದ ದೃಶ್ಯಗಳು, ರಾಮಾಯಣ, ಮಹಾಭಾರತ ಇನ್ನೂ ಮುಂತಾದ ದೃಶ್ಯಗಳನ್ನು ಪ್ರದರ್ಶನಗೊಳ್ಳುತ್ತವೆ. ವಿಷಯಕ್ಕೆ ಅನುಗುಣವಾಗಿ ರಚಿಸಿದ ಆಕೃತಿಗಳಲ್ಲಿ ಆಕೃತಿಗಳ ಗಾತ್ರ, ಅಲಂಕಾರ, ವೇಷಭೂಷಣಗಳು ವೈವಿಧ್ಯತೆಯಿಂದ ಕೂಡಿದ್ದು, ನೋಡಲು ಆಕರ್ಷಕವಾಗಿರುತ್ತವೆ.

ತೊಗಲು ಗೊಂಬೆಯಾಟವೆಂಬುದು ಮಕ್ಕಳಿಗೆ ಮಾತ್ರ ಸೀಮಿತವಾಗಿರಾದೆ, ಎಲ್ಲ ವಯೋಮಿತಿಯವರನ್ನು ರಂಜಿಸುವಂಥ ಆಕರ್ಷಣಿಯ ಕಲೆಯಾಗಿದೆ. ಈ ಗೊಂಬೆಯಾಟದ



ಪ್ರಭಾವದಿಂದಲೇ ಸಿನಿಮಾ ಮಾಧ್ಯಮ ಉಗಮವಾಗಿದೆ ಎಂದರೆ ತಪ್ಪಾಗಲಾರದು. ಆದರೆ ಸಿನಿಮಾಗಳ ಪ್ರಚಾರ, ಪ್ರಭಾವದಿಂದ ಇಂದು ಸಂಪೂರ್ಣವಾಗಿ ನಶಿಸಿಹೋಗುವಂಥ ದಾರಿಯಲ್ಲಿ ತೊಗಲು ಗೊಂಬೆಯಾಟದ ಪರಿಸ್ಥಿತಿ ಇರುವುದು ನಿಜಕ್ಕೂ ಒಂದು ಖೇದದ ಸಂಗತಿಯೆಂದು ಹೇಳಬಹುದು. ಇಂಥ ಭಾರತೀಯ ಸಂಸ್ಕೃತಿಯ ಪ್ರತೀಕವಾಗಿರುವ ಆಟಗಳಲ್ಲಿ ಒಂದಾಗಿರುವ ತೊಗಲು ಗೊಂಬೆಯಾಟವನ್ನು, ಇದನ್ನು ಆಡಿಸುವಂತಹ ಕುಟುಂಬಗಳನ್ನು ಮತ್ತು ಆ ಕುಟುಂಬದ ಕಲಾವಿದರನ್ನು ಸಾರ್ವಜನಿಕರು, ಸಂಘ ಸಂಸ್ಥೆಗಳು ಮತ್ತು ಸರ್ಕಾರವು ಪ್ರೋತ್ಸಾಹಿಸಿದರೆ ತೊಗಲು ಗೊಂಬೆಯಾಟವನ್ನು ಸಂರಕ್ಷಿಸಿ ಮುಂದಿನ ಜನಾಂಗಕ್ಕೆ ಉಳಿಸಿದಂತಾಗುತ್ತದೆ.

**ಶೀಗಿ ಬುಟ್ಟಿಯ ಮೇಲಿನ ಚಿತ್ರಕಲೆ :**

ಪ್ರಚಲಿತವಿರುವ ಹೆಚ್ಚಿನ ಜನಪದ ಆಚರಣೆಗಳಲ್ಲಿ ಚಿತ್ರ ರಚನೆ ಮಾಡುವುದನ್ನು ಕಂಡುಕೊಳ್ಳಲಾಗಿದೆ. ಹಬ್ಬ ಹರಿದಿನಗಳಲ್ಲಿ ಚಿತ್ರ ಬರೆದು ಮನೆ ಗೋಡೆಗಳು, ಜಗಲಿ, ಹೀಗೆ ಇನ್ನೂ ಮುಂತಾದವುಗಳನ್ನು ಅಲಂಕರಿಸುವುದು, ಶೀಗಿ ಹುಣ್ಣಿಮೆಯಲ್ಲಿ ವೈವಿಧ್ಯ ಚಿತ್ರ ರಚಿಸುವುದು ಹೀಗೆ ಹತ್ತು ಹಲವು ವಿಧಾನಗಳಿದ್ದು, ಈ ಹಿನ್ನೆಲೆಯ ಜನಪದ ಚಿತ್ರ ರಚನೆಯ ಪ್ರಕಾರಗಳಲ್ಲಿ ಒಂದಾದ ಶೀಗಿ ಚಿತ್ರಕಲೆಯು ಒಂದಾಗಿದೆ. ಶೀಗಿ ಹುಣ್ಣಿಮೆ ಹಬ್ಬದ ಸಂದರ್ಭದಲ್ಲಿ ಚಿತ್ರಗಳನ್ನು ಬಿಡಿಸುವುದೇ ಶೀಗಿ ಚಿತ್ರಕಲೆಯಾಗಿದೆ. 'ಶೀಗಿ' ಸಂಸ್ಕೃತದ 'ಶೀಖಾ' ಹಬ್ಬದ ತದ್ಭವವಾಗಿದ್ದು ಅದು ಶಿಖರ, ಶಿಖ, ಶೀಗಿಯಾಗಿರುವಂತೆದೆ ಎಂದು ಅಭಿಪ್ರಾಯವಿದೆ. ಈ ಶೀಗಿ ಶಿಲ್ಪವನ್ನು ಮಣ್ಣಿನಿಂದ ಇಲ್ಲವೆ ಮರದಿಂದ ಶಿಖರದ ಆಕಾರದಲ್ಲಿ ಮಾಡಿರುತ್ತಾರೆ. ಈ ಪದ್ದತಿಯನ್ನು ಉತ್ತರ ಕರ್ನಾಟಕ ಭಾಗದಲ್ಲಿ ಅದರಲ್ಲಿಯೂ ಬೆಳಗಾವಿ ಜಿಲ್ಲೆಯಲ್ಲಿ ಸ್ತ್ರೀ ದೇವತೆಯಾಗಿ ಪೂಜಿಸುತ್ತಾರೆ. ಈ ಶೀಗಿ ಹುಣ್ಣಿಮೆ ಆಚರಣೆಯ ವಿವಿಧ ಸಂದರ್ಭಗಳಲ್ಲಿ ರಚಿಸಲಾಗುವ ಚಿತ್ರಕಲೆಯನ್ನು 'ಶೀಗಿ ಚಿತ್ರಕಲೆ' ಎಂದು ಕರೆಯಲಾಗುತ್ತದೆ.

ಶೀಗಿ ಚಿತ್ರಕಲೆಯನ್ನು ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಸ್ವರೂಪ, ಮಾಧ್ಯಮ ಮತ್ತು ಸ್ಥಳಗಳಲ್ಲಿ ರಚನೆ ಮಾಡಲಾಗುತ್ತದೆ. ಬೀದರ್ ಭಾಗದಲ್ಲಿ ಮನೆಯ ಹೊರಗೋಡೆಯಲ್ಲಿ ಚಿತ್ರಿಸಿದರೆ, ಬೆಳಗಾವಿ, ಬಾಗಲಕೋಟೆ, ಬಿಜಾಪುರ, ಧಾರವಾಡ ಭಾಗಗಳಲ್ಲಿ ಮನೆಯ ಒಳಗೋಡೆಯ ಮೇಲೆ ಚಿತ್ರವನ್ನು ಬರೆಯುತ್ತಾರೆ. ಹಾಗೆಯೇ ಉತ್ತರ ಕರ್ನಾಟಕದ ಹಲವು ಭಾಗಗಳಲ್ಲಿ ಶೀಗಿ ಹುಣ್ಣಿಮೆಯಲ್ಲಿ ಚರಗದ ಬುಟ್ಟಿಯ ಮೇಲೆ ಚಿತ್ರಗಳನ್ನು ರಚಿಸಲಾಗುತ್ತದೆ. ಇನ್ನೂ ಬೇರೆ ಬೇರೆ ಪ್ರದೇಶಗಳಲ್ಲಿ ಇನ್ನಿತರ ಮಾಧ್ಯಮಗಳ ಮೇಲೆ ಚಿತ್ರಗಳನ್ನು ರಚಿಸುವುದು ಕಂಡುಬರುತ್ತವೆ. ಆದರೆ ಈ ಅಧ್ಯಯನವು ಬೆಳಗಾವಿ ಜಿಲ್ಲೆಗೆ ಸಂಬಂಧಿಸಿರುವುದರಿಂದ ಈ ಜಿಲ್ಲೆಯಲ್ಲಿ ಕಂಡುಬರುವಂತಹ ಶೀಗಿ ಚಿತ್ರಗಳನ್ನು ಮಾತ್ರ ಸ್ಥೂಲವಾಗಿ ವಿವರಿಸಲಾಗಿದೆ.



ಈ ಶೀಗಿ ಚಿತ್ರಕಲೆಯನ್ನು ಬೆಳಗಾವಿ ಜಿಲ್ಲೆಯಲ್ಲಿ ಹೆಚ್ಚಾಗಿ ಒಳಗೋಡೆಯ ಮೇಲೆ, ಬಿದಿರು ಬುಟ್ಟಿಯ ಮೇಲೆ, ಮಣ್ಣಿನ ಪಾತ್ರೆಗಳ ಮೇಲೆ, ಕಲ್ಲಿನ ಗುಂಡುಗಳ ಮೇಲೆ ಚಿತ್ರಿಸಲಾಗುತ್ತದೆ. ಒಳಗೋಡೆಯಲ್ಲಿ ಚಿತ್ರಿಸುವ ಶೀಗಿ ಚಿತ್ರಕಲೆಯು ಒಂದೊಂದು ವಿಷಯಕ್ಕೆ ಸಂಬಂಧಿಸಿದ ಏಳು ದಿನಗಳ ವರೆಗೆ ಚಿತ್ರಗಳನ್ನು ರಚಿಸಲಾಗುತ್ತದೆ. ಇವುಗಳ ಮೇಲಿನ ಶೀಗಿ ಚಿತ್ರಗಳ ವಸ್ತುವಿಷಯಗಳನ್ನು ಕುರಿತು ಹೇಳುವುದಾದರೆ, ಚುಕ್ಕಿ, ಚಂದ್ರ, ಗಂಗೆ, ಗೌರಿ, ಬಾರಂಭಾವಿ, ಬಾಳೆಗಿಡ ಮುಂತಾದ ಚಿತ್ರಗಳನ್ನು ಬಣ್ಣಗಳಿಂದ ರಚಿಸುತ್ತಾರೆ. ಮೊದಲನೆಯ ದಿನ ಸೂರ್ಯ, ಚಂದ್ರ. ಎರಡನೆಯ ದಿನ ಹೂಬಳ್ಳಿಗಳ ಅಲಂಕರಣ. ಮೂರನೆಯ ದಿನ ತುಳಸಿ ಕಟ್ಟೆ, ಜೋಳದ ಬೆಳೆ, ನಾಲ್ಕನೆಯ ದಿನ ಕೊಳಲಬಾವಿ, ಸ್ವಸ್ತಿಕ ಚಿನ್ಹೆ, ಐದನೆಯ ದಿನ ರಾಮನ ತೊಟ್ಟಿಲು, ಆರನೆಯ ದಿನ ಹನುಮಂತ ದೇವರು ಮತ್ತು ಈಶ್ವರ ಲಿಂಗ, ಏಳನೆಯ ದಿನ ಕೋಟೆ ಇಂತಹ ಚಿತ್ರಗಳನ್ನು ಕಾಣಬಹುದು.

ಬಿದುರು ಬುಟ್ಟಿಗಳ ಮೇಲೆ ಚಿತ್ರಿಸುವ ಶೀಗಿ ಚಿತ್ರಕಲೆಯ ವಸ್ತುವಿಷಯಗಳೆಂದರೆ ಸೂರ್ಯ, ಚಂದ್ರ, ಸ್ವಸ್ತಿಕ್, ಶುಭ-ಲಾಭ, ಓಂ, ಶ್ರೀ, ನಂದಿ, ಏಣಿ, ನವಿಲು, ಕೋಳಿ, ಗಿಳಿ, ಗುಬ್ಬಿ, ಈಶ್ವರ ಲಿಂಗ, ಹಾವು, ಚೇಳು, ಝುರಿ, ನಕ್ಷತ್ರ, ಎಲೆಬಳ್ಳಿ, ಹೂವು ಕಾಯಿ, ವಿವಿಧ ಬಗೆಯ ಮರಗಳು, ಕಾಳಿನ ತೆನೆ, ಮಾನವಾಕೃತಿಗಳರಿವುದನ್ನು ಮನಗಾಣಬಹುದು. ಹೀಗೆ ಇವೇ ಚಿತ್ರಗಳನ್ನು ಮಣ್ಣಿನ ಪಾತ್ರೆಗಳ ಮೇಲೂ ಕಾಣಬಹುದು. ಹಾಗೂ ಕಲ್ಲಿನ ಗುಂಡುಗಳ ಮೇಲೆ ಚಿತ್ರಿಸುವ ಚಿತ್ರತಗಳ ವಿನ್ಯಾಸಗಳಲ್ಲಿ ಹೆಚ್ಚಿನ ವೈವಿಧ್ಯತೆ ಇರುವುದಿಲ್ಲ. ಸಾಮಾನ್ಯವಾಗಿ ಎರಡು ಅಥವಾ ನಾಲ್ಕು ರೇಖಾವಿನ್ಯಾಸದ ವೃತ್ತಗಳು, ಪೂರ್ಣಚಂದ್ರ, ವಿಭೂತಿ ಲೇಪನದಂತೆ ಇರುವ ಮೂರು ಬೆರಳು ಗುರುತು. ಕೆಮ್ಮಣ್ಣಿನಲ್ಲಿ ಅದ್ದಿ ಕಲ್ಲುಗಳಿಗೆ ಬಳಿಯುವುದು. ಸ್ವಸ್ತಿಕ್ ಚಿನ್ಹೆ ಇಂತಹ ಚಿತ್ರಗಳನ್ನು ಕಾಣಬಹುದು.

ಈ ಶೀಗಿ ಆಡುವವರೆಂದರೆ, ಹಿಂದೂ ಮಹಿಳೆಯರು ಮಾತ್ರ. ಹಿಂದೂಗಳಲ್ಲಿ ಲಿಂಗಾಯತ, ಜಂಗಮ, ಪಂಚಾಳ ಮುಂತಾದವರಲ್ಲಿ ಉಳಿದ ವರ್ಗದವರಿಗಿಂತಲೂ ಸ್ವಲ್ಪ ಹೆಚ್ಚಾಗಿ ಶೀಗಿ ಆಚರಣೆಯನ್ನು ಕಾಣಬಹುದಾಗಿದೆ. ಇದರಂತೆ ಯಾರ ಮನೆಯಲ್ಲಿ ಹುಡಿಗಿಯರು, ಮುದಕಿಯರು ಹೆಚ್ಚಾಗಿ ಇರುವರೋ, ಅವರ ಮನೆಯ ಮುಂದೆ ಶೀಗಿ ಆಡುವುದನ್ನು ಹೆಚ್ಚಾಗಿ ಕಾಣುತ್ತೇವೆ. ಏಕೆಂದರೆ ಶೀಗಿ ಆಡುತ್ತ ಮೋಜಿನಿಂದ ಕಾಲ ಕಳೆಯುವವರೆಂದರೆ ಈ ವಯಸ್ಸಿನವರೇ ಹೆಚ್ಚು. ಸ್ತ್ರೀ ಸಾಮಾನ್ಯ ಮಹಿಳೆಯರಂತೂ ಸಂಜೆಯವರೆಗೆ ಹೊಲದಲ್ಲಿ ದುಡಿದು ಸಂಜೆ ಸಮಯಕ್ಕೆ ಮನೆಗೆ ಬಂದು, ಸಂಜೆಯ ಮನೆಯಲ್ಲಿ ಅಡಿಗೆ ಹೀಗೆ ಮುಂತಾದ ಕೆಲಸಗಳಲ್ಲಿ ತೊಡಗುತ್ತಾರೆ. ಕೆಲವರು ತಮ್ಮ ಕೆಲಸ ಬದಿಗಿಟ್ಟು, ವರ್ಷಕ್ಕೆ ಆರೆಳು ದಿವಸವಿರುವ ಶೀಗಿ ಆಚರಣೆಯಲ್ಲಿ ತೊಡಗಿಕೊಳ್ಳುತ್ತಾರೆ.

ಈ ಶೀಗಿ ಆಡುವುದು ಮತ್ತು ಹಾಡುವುದು ಓಣಿಯ ಓರಿಗೆಯವರೆಲ್ಲರೂ ಸೇರಿ,



ಶಿಗಿ ಚಿತ್ರಕಲೆ







ಬುಟ್ಟಿಯ ಮೇಲೆ ಶಿಗಿ ಚಿತ್ರಕಲೆ





ಮಣ್ಣಿನ ಪಾತ್ರೆಯ ಮೇಲೆ ಶಿಗಿ ಚಿತ್ರಕಲೆ









ಶಿಗಿ ಚಿತ್ರ ಬರೆಯುತ್ತಿರುವ ಮಹಿಳೆಯರು



ಹೀಗೆ ಕೂಡಿಕೊಂಡು ಆಡುವವರೆಲ್ಲರೂ ಒಬ್ಬರ ಮನೆಯಿಂದ ಮತ್ತೊಬ್ಬರ ಮನೆಯ ಮುಂದೆ ಆಡಲು ಮತ್ತು ಹಾಡಲು ಹೋಗಲೇಬೇಕೆಂಬ ಕಡ್ಡಾಯವಿಲ್ಲದಿದ್ದರೂ, ಹಾಗೆ ಹೋಗುವುದು. ಒಂದು ಸಂಪ್ರದಾಯ ಹೀಗೆ ಮನೆ ಮನೆಗೆ ಕೆಲಸವಿರುವ ಹೆಣ್ಣು ಮಕ್ಕಳು ಹೋಗಲು ಆಗುವುದಿಲ್ಲ. ಆಗ "ತನ್ನ ಮನೆಗೆ ಶೀಗಿ ಹಾಡಾಕ ಬಂದು ಮತ್ತೊಬ್ಬರ ಮನೆಗೆ ಬರಳು ಯಾನಿಲ್ಲ, ಹಿಂತಕಿನ ಮನೆಗೆ ನಾಳಿನ ಚಿನ ಶೀಗಿ ಆಡಾಕ ಯಾರ ಹೊಕ್ಕಾರೆ" ಎಂಬ ಮಾತುಗಳು ಉಳಿದವರಿಂದ ಬರದೆ ಇರಲಾರವು. ಕೆಲವೊಮ್ಮೆ ಕೆಲವರಿಗೆ ರಿಯಾಯಿತಿ ದೊರೆಯುವುದುಂಟು. ಹೆಣ್ಣು ಮಕ್ಕಳೆಲ್ಲ ಸೇರಿ ಶೀಗಿ ಆಡುವಾಗ ಮತ್ತು ಹಾಡುವಾಗ ಸಣ್ಣ ಸಣ್ಣ ಗಂಡು ಮಕ್ಕಳು ಅವರ ಜೊತೆ ಸೇರಿಕೊಂಡು ಸಂಭ್ರಮಿಸುತ್ತಾರೆ. ಇವರಿಗೆ ಜೊತೆಯಲ್ಲಿರುವ ಹೆಣ್ಣು ಹುಡಿಗಿಯರು ಇವರಿಗೆ ಹೆಂಗಸಾಗಿಯಲ್ಲೋ ಎಂದು ಚುಡಾಯಿಸುತ್ತಾ ಕುಣಿಯುವ ಪರಿ ತುಂಬಾ ಕುತೂಹಲಕಾರಿಯಾಗಿದೆ.

ಒಟ್ಟಾರೆಯಾಗಿ ಈ ಜನಪದ ಕಲೆಗಳಲ್ಲಿ ಹಚ್ಚೆ, ಮದರಂಗಿ, ಕೌದಿ, ಕಸೂತಿ, ತೊಗಲು ಗೊಂಬೆ, ಶೀಗಿ ಬುಟ್ಟಿಯ ಮೇಲೆ ಚಿತ್ರ ಕಲೆಗಳ ಭಿನ್ನತೆ ಇರುವಂತೆ ಬೆಳಗಾವಿ ಜಿಲ್ಲೆಯಲ್ಲಿ ಪ್ರಾದೇಶಿಕ ವೈವಿಧ್ಯತೆಗಳನ್ನು ಇಂತಹ ಕಲೆಗಳನ್ನು ಕಾಣಬಹುದು. ಹಾಗೂ ಬೆಳಗಾವಿ ಜಿಲ್ಲೆಯಲ್ಲಿ ಜನಪದ ಕಲೆಗಳಲ್ಲಿ ಹಚ್ಚೆ, ಮದರಂಗಿ, ಕೌದಿ, ಕಸೂತಿ, ತೊಗಲು ಗೊಂಬೆ, ಶೀಗಿ ಬುಟ್ಟಿ ಚಿತ್ರಗಳಿಗಳಷ್ಟೇ ಅಲ್ಲದೇ ಜನಪದ ಶಿಲ್ಪಗಳಲ್ಲಿ ಕಟ್ಟಿಗೆ, ಮಣ್ಣು ಇವುಗಳ ಮೇಲಿನ ಚಿತ್ರಕಲೆಯನ್ನು ನೋಡಬಹುದು. ದುರುಗಮುರಗಿಯ ಪೆಟ್ಟಿಗೆಯ ಮೇಲೆ, ಆಟಿಕೆಯ ವಸ್ತುಗಳಲ್ಲಿ ಹಾಗೂ ಬಟ್ಟೆಯ ಮಾಧ್ಯಮದಲ್ಲಿ ರಂಗಪರದೆಯ ಚಿತ್ರಕಲೆ ಹೀಗೆ ಇನ್ನೂ ಮುಂತಾದವುಗಳಲ್ಲಿ ವರ್ಣರಂಜಿತ ಚಿತ್ರಗಳನ್ನು ಕಾಣಬಹುದು. ಇವುಗಳನ್ನು ಜನಪದಿಯರ ಮುಂದಿನ ಬೆಳವಣಿಗೆಯೆಂದು ಸಹ ಕರೆಯಬಹುದು.

ಕರ್ನಾಟಕದಲ್ಲಿ ಎಲ್ಲ ಪಟ್ಟಣ ಮತ್ತು ಗ್ರಾಮೀಣ ಭಾಗದ ಕಲೆಗಳಾದ ಸಾಹಿತ್ಯ, ಸಂಗೀತ, ನೃತ್ಯ, ಮೂರ್ತಿಶಿಲ್ಪ, ವಾಸ್ತುಶಿಲ್ಪ ಹಾಗೂ ಚಿತ್ರಕಲೆಗಳಂತೆ ಲಲಿತಕಲೆಗಳನ್ನು ಪ್ರೋತ್ಸಾಹಿಸಿದ್ದಾರೆ. ಹಾಗೂ ಗೌರವ ಸ್ಥಾನವನ್ನು ಕೊಟ್ಟು ವೈಭವೀಕರಿಸಿದ್ದಾರೆ. ಬೆಳಗಾವಿ ಜಿಲ್ಲೆಯಲ್ಲಿ ಬರುವಂತಹ ನಗರಗಳಾದ ಗೋಕಾಕ್, ಬೈಲಹೊಂಗಲ ಮತ್ತು ಪಶ್ಚಾಪುರ ಇವು ಸಂಕೀರ್ಣ ಮಾಧ್ಯಮದ ಜನಪದ ಶಿಲ್ಪ ಕಲಾಕೃತಿಗಳ, ಆಟಿಕೆಯ ವಸ್ತುಗಳ ನಿರ್ಮಾಣಕ್ಕೆ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. ಅಲ್ಲದೇ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ತನ್ನದೇ ಆದ ಛಾಪು ಮೂಡಿಸಿ, ಕಲಾ ಜಗತ್ತಿಗೆ ತನ್ನದೇ ಒಂದು ವಿಶಿಷ್ಟ ಕೊಡುಗೆಯನ್ನು ನೀಡಿವೆ.

ನಮ್ಮ ನಿತ್ಯದ ಬದುಕಿನಲ್ಲಿ ಹಾಸು-ಹೊಕ್ಕಾಗಿ ಹೆಣೆದುಕೊಂಡಿರುವ ಈ ಕಲೆಗಳಲ್ಲಿ ಕೆಲವನ್ನು ಕುಶಲಕಲೆಗಳು ಅಥವಾ ಉಪಯುಕ್ತ ಕಲೆಗಳು ಎಂದು ಬೇರ್ಪಡಿಸುವುದುಂಟು. ಅದರಂತೆ ಉಪಯುಕ್ತತೆ ಗೌಣವೆನಿಸಿ ಶುದ್ಧ ಆನಂದವನ್ನು ಕೊಡುವ ಚಿತ್ರ, ಶಿಲ್ಪಾದಿ



ಕಲೆಗಳನ್ನು ಪ್ರತ್ಯೇಕಿಸಿ ಅವನ್ನು ಲಲಿತ ಕಲೆಗಳೆಂದು ಗುರುತಿಸುತ್ತೇವೆ. ಅಂದರೆ, ಆನಂದ ಮೂಲವಾದ ಕಲೆಗಳನ್ನು ಲಲಿತಕಲೆ ಎಂದೂ, ಉಪಯುಕ್ತತೆ ಮೂಲವಾದುದನ್ನು ಕುಶಲ ಕಲೆ ಎಂದು ಗುರುತಿಸುತ್ತೇವೆ. ಈ ಉಪಯುಕ್ತ ಕಲೆಗಳನ್ನು ಈಚೆಗೆ ಕರಕುಶಲ ಕಲೆಗಳು ಎಂದೂ ಗುರುತಿಸುತ್ತಿದ್ದೇವೆ. ಅಂದರೆ ಯಂತ್ರ ನಿರ್ಮಿತ ವಸ್ತುಗಳಿಗಿಂತ ಭಿನ್ನವಾದವುಗಳು ಮತ್ತು ದೇಶಿಯ ರಚನೆಗಳು ಎಂಬುದನ್ನು ಸೂಚಿಸಲು ಈ ಪದ ರೂಢಿಯಲ್ಲಿ ಬಂದಿದೆ. ಭಾರತದಲ್ಲಿ ಹಿಂದೆ ಇಂಥ ಸಂದರ್ಭ ಇರಲಿಲ್ಲವಾದ ಕಾರಣ ಅವುಗಳನ್ನು ಒಟ್ಟಾಗಿ ಅರವತ್ನಾಲ್ಕು ಕಲೆಗಳು ಎಂದು ಕರೆದಿದೆ. ಈಚೆಗೆ ಯಾಂತ್ರೀಕರಣದ ಫಲವಾಗಿ ಯಂತ್ರ ನಿರ್ಮಿತಿಗಳಿಗಿಂತ ಭಿನ್ನವಾದ ಮಾನವ ನಿರ್ಮಿತ ಕಲಾವಸ್ತುಗಳನ್ನು ಕರಕುಶಲ ಕಲೆಗಳು ಎಂದು ಹೇಳಲಾಗಿದೆ.[೨೦]

ಕರಕುಶಲ ಕಲೆಗಳ ವಿಕಾಸಕ್ಕೂ ಮಾನವನ ಬುದ್ಧಿ ಭಾವನೆಗಳ ಬೆಳವಣಿಗೆಗೂ ಕೂಡ ನೇರವಾದ ಸಂಬಂಧವಿದೆ. ಒಬ್ಬಂಟಿಯಾಗಿ ಜೀವಿಸುತ್ತಿದ್ದ ಮಾನವನು ಕುಂಟುಂಬ ಜೀವಿ, ಸಂಘಜೀವಿ, ಗ್ರಾಮ ಜೀವಿ, ಪಟ್ಟಣ ನಗರ ಜೀವಿಯಾದನು. ಈ ಎಲ್ಲ ಹಂತಗಳಲ್ಲಿಯೂ ಹಲವಾರು ಸಂಬಂಧ, ಸಂಪರ್ಕಗಳನ್ನು ವಿಸ್ತರಿಸಿಕೊಂಡು, ತನ್ನ ಬದುಕಿನ ಇರುವಿಕೆಗಳಲ್ಲಿ ಅನೇಕ ಪರಿವರ್ತನೆಗಳನ್ನು ಕಾಣುತ್ತಾ ಬೆಳೆಯುತ್ತಲೇ ಬಂದಿರುವನು. ಜೊತೆಗೆ ತನ್ನ ಸುತ್ತಲಿನ ಪರಿಸ್ಥಿತಿ, ಪರಿಸರ–ಪರಿಕಲ್ಪನೆಗಳನ್ನು ತನಗಾಗಿ, ತನ್ನವರಿಗಾಗಿ ಬಳಸಿಕೊಳ್ಳುತ್ತಲೇ ಬಂದಿದ್ದಾನೆ. ಕರಕುಶಲ ಕಲೆಗಳೂ ಕೂಡ ಅವನ ಈ ಬೆಳವಣಿಗೆಯೊಂದಿಗೆ ವಿಕಾಸಗೊಳ್ಳುತ್ತಲೇ ಬಂದಿವೆ.

ಮಾನವನ ಸಾಂಘಿಕಜೀವನ ಪ್ರಾರಂಭದ ದೆಸೆಯಿಂದಲೇ ಒಬ್ಬನು, ಇನ್ನೂಳಿದವರಿಗಿಂತ ಒಂದು ಕೆಲಸದಲ್ಲಿ ಕುಶಲಿ (ನಿಪುಣ) ಎಂದು ಕಂಡುಬಂದಾಗ ಆ ಕೆಲಸವನ್ನು ಅವನಿಗೆ ಒಪ್ಪಿಸಿರುವುದು ಸಹಜ. ಕರಕುಶಲ ಕಲೆಗಳು ಏಕಕಾಲಕ್ಕೆ ಅಸ್ತಿತ್ವಕ್ಕೆ ಬಂದಿರಲಾರವು. ನಿತ್ಯ ಜೀವನದ ಅಗತ್ಯಕ್ಕೆ ಬಳಸಿಕೊಳ್ಳಬಹುದಾದ ಮೂಲ ಸಾಮಗ್ರಿಗಳಲ್ಲಿ ಮಣ್ಣು, ಕಲ್ಲು, ಕಟ್ಟಿಗೆಗಳಂತಹ ವಸ್ತುಗಳ ಬಳಕೆಯ ಹಿನ್ನೆಲೆಯಲ್ಲಿ ಆಯಾ ಕುಶಲಿಗರು ಅಸ್ತಿತ್ವಕ್ಕೆ ತಂದಿರುವುದು ಕಾರಣವಾಗಿವೆ.[೨೧] ಈ ಮೇಲೆ ಹೇಳಿದಂತ ಸಾಮಗ್ರಿಗಳನ್ನೊಳಗೊಂಡು ರಚನೆಯಾದಂತಹ ಕಲಾಕೃತಿಗಳನ್ನು ಸಂಕೀರ್ಣ ಮಾಧ್ಯಮದ ಕಲಾಕೃತಿಗಳೆಂದು ಹೇಳಲಾಗಿದೆ.

೧೯ನೆಯ ಶತಮಾನದ ಅಂತ್ಯ ಭಾಗದಲ್ಲಿ ಪ್ರಕಟಗೊಂಡ 'ಬಾಂಬೆ ಗೆಜಿಟಿಯರ್' ನಲ್ಲಿ "ಬೆಳಗಾವಿ ಪ್ರದೇಶದ ಕೆಲವು ಭಾಗಗಳಲ್ಲಿ ಅಲ್ಲಲ್ಲಿ ಫ್ಯಾನ್ಸಿ ಫರ್ನಿಚರ್ ಮತ್ತು ಕಟ್ಟಿಗೆಯ ಆಟಿಕೆಗಳು ತಯಾರಾಗುತ್ತಿದ್ದವು" ಎಂದು ಉಲ್ಲೇಖಿಸಲಾಗಿದೆ. ಪ್ರಾರಂಭಲ್ಲಿ ಈ

೨೦. ಡಾ. ಕರೀಗೌಡ ಬಿಚನಹಳ್ಳಿ : ಕರಕುಶಲ ಕಲೆಗಳು, ಪುಟ, ೨

೨೧. ಡಾ. ಬಿ.ಕೆ. ಹಿರೇಮಠ : ಸೃಷ್ಟಿ, ಪುಟ, ೨೦೪



ಕಲೆಯು ಬಿಡುವಿನ ವೇಳೆಯಲ್ಲಿ ಮನಸ್ಸಿಗೆ ಖುಷಿಕೊಡಲು ಈ ಕಲೆಯನ್ನು ಆರಂಭಿಸಿದರು. ಹವ್ಯಾಸಕ್ಕಾಗಿ ಎಂದುಕೊಂಡು ಮನಸ್ಪೂರ್ವಕವಾಗಿ ಕೆಲಸಮಾಡುತ್ತಿದ್ದರಿಂದ ನೈಜತೆಯು ಈ ಕಲಾಕೃತಿಗಳ ಜೀವಾಳವಾಗಿ ಬೆಳೆದು ಉಳಿದುಕೊಂಡು ಬಂದಿವೆ. ವಿದೇಶಿಗರು, ಶ್ರೀಮಂತರು, ರಾಜ ಮಹಾರಾಜರು ಮತ್ತು ಪಾರ್ಸಿ ವ್ಯಾಪಾರಿಗಳು ಈ ಕಲೆಯನ್ನು ಕಂಡು ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಿದ್ದರು. ಅಲ್ಲದೇ ವಿದೇಶಗಳಲ್ಲಿ ಈ ಕಲೆಗಳಿಗೆ ಹೆಚ್ಚಿನ ಬೇಡಿಕೆಯಿದೆ.

ಬೆಳಗಾವಿ ಜಿಲ್ಲೆಯ ಜನಪದ ಹಿನ್ನೆಲೆಯ ಮುಂದಿನ ಹಂತದ ಕಲಾಕೃತಿಗಳ ಕುರಿತು ಹೇಳವುದಾದರೆ ಜಿಲ್ಲೆಯಲ್ಲಿ ತಾಲೂಕುಗಳಾದ ಅನೇಕ ಗ್ರಾಮಗಳಲ್ಲಿ ಸಂಕೀರ್ಣ ಮಾಧ್ಯಮದ ಕಲೆಗಳು ಕಂಡುಬಂದಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಈ ಅಧ್ಯಾಯದಲ್ಲಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಆ ಕಲೆಗಳು ಬೆಳಗಾವಿ ಜಿಲ್ಲೆಯ ಕರಕುಶಲ ಕಲೆ ಎಂದೇ ಪ್ರಸಿದ್ಧಿನ್ನು ಪಡೆದಿವೆ. ಈ ಸಂಕೀರ್ಣ ಮಾಧ್ಯಮದ ಕಲಾಕೃತಿಗಳಲ್ಲಿ ಗೋಕಾಕ್‌ದ ಕಾಷ್ಠಕಲೆ, (ಮರ ಮಾಧ್ಯಮ ಕಲಾಕೃತಿಗಳು) ಬೈಲಹೊಂಗಲದ ಕರಕುಶಲ ಕಲೆ (ಮರ ಮತ್ತು ಮಣ್ಣು ಮಾಧ್ಯಮದ ಕಲಾಕೃತಿಗಳು) ಪಾಶ್ಚಾಪೂರದ ಕಲೆ (ಮರ ಮಾಧ್ಯಮದ ಭಿತ್ತಿಯ ಮೇಲೆ ಚಿತ್ರಕಲೆ) ಹೀಗೆ ಇನ್ನೂ ಮುಂತಾದವುಗಳು.

೧. ಗೋಕಾಕ್ ೨. ಬೈಲಹೊಂಗಲ ೩. ಪಾಶ್ಚಾಪೂರ

### ೧. ಗೋಕಾಕ್ ಕಾಷ್ಠಕಲೆ :

ಪ್ರಾಕೃತಿಕ ಸಿರಿ ಸೌಂದರ್ಯದ ನೆಲೆಬೀಡಾದ ಗೋಕಾಕ್ ಸಾಹಿತ್ಯ, ಕಲೆ, ಸಂಸ್ಕೃತಿಯ ತಾಣವಾಗಿದೆ. 'ಗೋಕಾಕ್ ಬಣ್ಣ, ಯಾದವಾಡ ಸುಣ್ಣ, ಬನಹಟ್ಟಿ ಹೆಣ್ಣ' ಎಂದು ಜನಪದ ಕಾವ್ಯಗಳಲ್ಲಿ ಗೋಕಾಕ್‌ನ್ನು ಬಣ್ಣಿಸಲ್ಪಟ್ಟಿದೆ.

ಬೆಳಗಾವಿ ಜಿಲ್ಲೆಯ ಗೋಕಾಕ್ ಬಣ್ಣ ಹಾಗೂ ಬಣ್ಣದ ತಯಾರಿಕೆಗೆ ಪ್ರಸಿದ್ಧಿ ಪಡೆದ ಊರಾಗಿದೆ.[೨೨] ಈ ಗೋಕಾಕ್ ಕಲೆಯ ಕಲಾಕೃತಿಗಳನ್ನು ಮದುವೆ, ಹುಟ್ಟು ಹಬ್ಬದ ಸಂದರ್ಭಗಳಲ್ಲಿ ಉಡುಗೊರೆಯಾಗಿ ನೀಡುವ ಹಾಗೂ ಮನೆಯ ಅಲಂಕರಣ ವಸ್ತುಗಳಾಗಿಯೂ ಬಳಸುವಂತಹ ಪ್ರತೀತಿ ಕೂಡ ಕಂಡುಬರುತ್ತದೆ. ಇಂತಹ ಉಡುಗೊರೆಯು ಪ್ರತಿಷ್ಠೆಯ ಸಂಕೇತವು ಕೂಡ ಆಗಿರುವುದಲ್ಲದೆ, ಈ ಕಲೆಗೆ ಗೋಕಾಕ್ ಟಾಯ್ಸ ಎಂದೇ ಹೆಸರಿಸಲಾಗಿದೆ. ನಿಸರ್ಗ ನಿರ್ಮಿತ ವಸ್ತುಗಳಲ್ಲಿ ಕಂಡುಬರುವಂತಹ ನಿಖರತೆ ಸ್ಪಷ್ಟವಾಗಿ ಮಾನವ ನಿರ್ಮಿತ

---

೨೨. ಡಾ. ಎಸ್.ಸಿ. ಪಾಟೀಲ, ಶ್ರೀ ಸತ್ಯಾನಂದ ಪಾತ್ರೋಟ (ಸಂ): ನಿಜದ ನೆಲೆ, ಶ್ರೀರಾಮ ಇಟ್ಟಣ್ಣವರ, (ಲೇ), ಗೋಕಾಕ್ ಕಲೆ, ಪುಟ, ೧೪೫, ೧೫೧



ವಸ್ತುಗಳಲ್ಲಿ ಗೋಚರವಾಗದು. ಮಾನವನು ಎಷ್ಟೇ ವೈಜ್ಞಾನಿಕವಾಗಿ ಮುಂದುವರೆದರೂ ಪ್ರಕೃತಿಗೆ ಸರಿಸಾಟಿಯಾಗಲಾರದು. ಪ್ರಕೃತಿ ನಿರ್ಮಿತ ವಸ್ತುಗಳ ಪ್ರತಿಕೃತಿ ತಯಾರಿಕೆಯಲ್ಲಿ ಮಾನವನು ಕೌಶಲ್ಯದ ಬಳಕೆ ಪೂರ್ಣ ಪ್ರಮಾಣದಲ್ಲಿ ಬಳಕೆಯಾದಲ್ಲಿ ಮಾತ್ರ ಅದಕ್ಕೊಂದು ನಿರ್ದಿಷ್ಟತೆ ದೊರಕುತ್ತದೆ.

ಬೇಸಿಗೆ ಬಂತೆಂದರೆ ವಿವಿಧ ತರದ ಹಣ್ಣು, ಹೂವುಗಳು ಮಾರುಕಟ್ಟೆಯನ್ನು ಆಕ್ರಮಿಸುತ್ತವೆ. ಪ್ರಕೃತಿ ನಿರ್ಮಿತ ವಿಸ್ಮಯತೆಯ ಪ್ರತೀಕವೆನಿಸಿದ ಭಿನ್ನ ಭಿನ್ನವಾದ ವರ್ಣಮಯ ವಿನ್ಯಾಸಗಳನ್ನು ಹೊಂದಿರುವ ಹಣ್ಣು ಹಂಪಲುಗಳು ನೋಡುಗರ ಮನಸ್ಸನ್ನು ಸೂರೆಗೊಳಿಸುತ್ತವೆ. ಅಲ್ಪಾಯುಷಿಗಳಾದ ಪ್ರಕೃತಿ ನಿರ್ಮಿತ ಇಂತಹ ಹಣ್ಣುಗಳು ನೋಡುಗನ ಮನಸ್ಸಿನಲ್ಲಿ ಒಂದು ಬಗೆಯ ಅವ್ಯಕ್ತ ಆನಂದವನ್ನು ಉಂಟುಮಾಡುವುದರಲ್ಲಿ ಸಂಶಯವೇ ಇಲ್ಲ. ಆದರೆ ಇಂತಹ ವಸ್ತುಗಳು ಬಹುಕಾಲ ಉಳಿಯುವುದಿಲ್ಲ. ಆದಕಾರಣ ಬಣ್ಣ ತಯಾರಿಕೆಯ ತವರೂರಾದ ಗೋಕಾಕ್‌ನಲ್ಲಿ ನುರಿತ ಕಲಾವಿದರಿಂದ ಕಾಷ್ಠದಿಂಧ ತಯಾರಾಗುವ ವಸ್ತುಗಳು ಚಿರಕಾಲ ನೋಡುಗರ ಮನಸ್ಸನ್ನು ಮುದಗೊಳಿಸುತ್ತವೆ. 

ಕಲಾವಿದನ ಕಲಾಭಿವ್ಯಕ್ತಿಗೆ ಅನೇಕ ಬಗೆಯ ಮಾಧ್ಯಮಗಳು ಪೂರಕವೆನಿಸುತ್ತವೆ. ವಿಭಿನ್ನ ಮಾಧ್ಯಮಗಳ ಕುಲುಮೆಯಲ್ಲಿ ಹೊರಹೊಮ್ಮುವ ಕಲಾವಿದನ ಕಲಾಭಿವ್ಯಕ್ತಿ ಅನೇಕ ಬಗೆಯ ವಿಧಿ-ವಿಧಾನಗಳ ಮೂಲಕ ಹೊರಬಂದು ತನ್ನತನವನ್ನು ಪ್ರದರ್ಶಿಸುತ್ತದೆ. ಕಲಾವಿದನಲ್ಲಿ ಆಶಯವು ಬೀಜವಾಗಿ ಕಲಾಂತರದಲ್ಲಿ ಅದು ಫಲಿತಗೊಂಡು ಅವನ ಕೃತಿಯಲ್ಲಿ ಅದು ಬೆಳೆದು ಹೆಮ್ಮರವಾಗುತ್ತದೆ. ಅದೇ ರೀತಿಯಾಗಿ ನೋಡುಗರ ಮನಸ್ಸಿನಲ್ಲಿ ಚಿರಕಾಲ ಸ್ಥಾನವನ್ನು ಪಡೆಯುತ್ತದೆ. ಕಲಾವಿದನ ಈ ಬಗೆಯ ಕೃತಿ ಸೃಷ್ಟಿಯ ಸಂದರ್ಭದಲ್ಲಿ ನಿಸರ್ಗವು ಕೂಡ ಪೂರಕವೆನಿಸುತ್ತದೆ. ಅದೆ ಬಗೆಯಲ್ಲಿ ನಿಸರ್ಗದ ಕೊಡುಗೆ ಅನನ್ಯ. ವಿಸ್ಮಯತೆಯ ಕಡಲಾಗಿರುವ ಪ್ರಕೃತಿಯಿಂದ ಸಾಮಾನ್ಯ ನೋಡುಗನು ಕೂಡ ಪ್ರೇರಿತನಾಗುವಂತ ಸಂದರ್ಭದಲ್ಲಿ ಕಲಾವಿದರು ಕೂಡ ಪ್ರೇರಣೆಯನ್ನು ಪಡೆದುಕೊಂಡಿರುವುದು ಆಶ್ಚರ್ಯವೇನಲ್ಲ. ಜನಪದ ಕಲಾವಿದರು ಸಮಾಜದ ಆಗುಹೋಗುಗಳ ಮೂಲಕ ಪ್ರೋತ್ಸಾಹಗೊಂಡು ತಮ್ಮ ಕಲೆಯ ಮೂಲಕ ಅದನ್ನು ಪ್ರಚಾರಪಡಿಸಿದರು. ಈ ದೆಸೆಯಲ್ಲಿ ಆಧುನಿಕ ಕಲಾವಿದರು ತನ್ನ ಕಲಾಭಿವ್ಯಕ್ತಿಗೆ ಪಾರಂಪರಿಕತೆಯ ಜೊತೆ ಜೊತೆಗೆ ಆಧುನಿಕತೆಯನ್ನು ತಮ್ಮ ಕಲೆಯ ಮುಖಾಂತರ ಪ್ರಚಾರಪಡಿಸುತ್ತಿದ್ದಾರೆ.

ಬಣ್ಣಗಾರಿಕೆಯಲ್ಲಿ ಕರ್ನಾಟಕದ ಅನೇಕ ಊರುಗಳು ಪ್ರಸಿದ್ಧವಾಗಿವೆ. ಕೊಪ್ಪಳ ಜಿಲ್ಲೆಯ ಕಿನ್ನಾಳ, ಹಾಸನ ಜಿಲ್ಲೆಯ ಚನ್ನರಾಯಪಟ್ಟಣ, ಬೆಳಗಾವಿ ಜಿಲ್ಲೆಯ ಗೋಕಾಕ್ ಇವು ಬಣ್ಣಗಾರಿಕೆಯಲ್ಲಿ ಪ್ರಸಿದ್ಧಿಯಾಗಿವೆ. ತಮ್ಮ ಪೂರ್ವಜರಿಂದ ಈ ಕಲೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಗೋಕಾಕ್ ಜಿನಗಾರರು ಕಾಷ್ಠ ಮಾಧ್ಯಮದಲ್ಲಿ



ತಯಾರಿಸಲ್ಪಡುತ್ತಿರುವ ಕಲೆಯನ್ನು ಗೋಕಾಕ್ ಕಲೆಯೆಂದೇ ಹೆಸರು ಪಡೆದಿದೆ. ಅನೇಕ ಕಲಾವಿದರ ಕುಟುಂಬಗಳು ಈ ಕಲೆಯನ್ನು ಧಾರ್ಮಿಕ ವಿಧಿ–ವಿಧಾನಗಳಿಂದ ಉಳಿಸಿ ಬೆಳೆಸಿಕೊಂಡು ಬರುತ್ತಿದ್ದಾರೆ. ಎಲೆಮರೆಯ ಕಾಯಿಯಂತೆ ತಮ್ಮ ಈ ಕಾಯಕವನ್ನು ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇಂತಹ ಕಲೆ, ಕಲಾವಿದರ, ಹಾಗೂ ಕಲಾವಿದರ ಕುಂಟುಂಬವನ್ನು ಪರಿಚಯಿಸುವ ಉದ್ದೇಶ ಈ ಅಧ್ಯಯನದ್ದಾಗಿದೆ.

ಗೋಕಾಕ್ ಕಲೆಗೆ ಸುಮಾರು ಮುನ್ನೂರು ವರ್ಷಗಳ ಇತಿಹಾಸವಿದೆ. ಈ ಕಲೆಯು ಆಧುನಿಕತೆಯ ಜೊತೆಗೆ ತನ್ನ ಸಂಪ್ರದಾಯವನ್ನು ಮರೆತಿಲ್ಲ. ಇಂದಿನ ತಲೆಮಾರಿನ ಕಲೆಯ ಜೊತೆಗೆ ಆಧುನಿಕತೆಯನ್ನು ಮೈಗೂಡಿಸಿಕೊಂಡು ಪರಿವರ್ತನೆಗೊಂಡಿದೆ. ಮಾಹಿತಿಗಳ ಆಧಾರದ ಮೇಲೆ ಗೋಕಾಕ್ ನಗರಕ್ಕೆ ಈ ಕಲೆಯನ್ನು ತಂದವರು ಜಿನಗಾರರು. ಈ ಜಿನಗಾರರು ಮೂಲತಹ ಕೊಲ್ಹಾಪುರ ಪ್ರದೇಶದವರು. ಸುಮಾರು ಎರಡು ದಶಕಗಳ ಹಿಂದೆ ಭೀಮಪ್ಪ ಎಂಬ ಹೆಸರಿನ ಜಿನಗಾರನ ನೇತೃತ್ವದಲ್ಲಿ ಗೋಕಾಕ್ ಪ್ರದೇಶಕ್ಕೆ ವಲಸೆಬಂದರು. ಭೀಮಪ್ಪನ ಮೊಮ್ಮಗ ಬಾಪೂ ಜಿನಗಾರ ಇವನು ಒಬ್ಬ ಕುಶಲ ಬಣ್ಣಗಾರ. ಕೊಲ್ಹಾಪುರ ಮಹಾರಾಜನ ಆಶ್ರಯದಲ್ಲಿದ್ದನು. ಮಹಾರಾಜನ ಮರಣದ ನಂತರ ಇವನು ಗೋಕಾಕ್‌ಗೆ ಬಂದು ತನ್ನ ಬಂದುಗಳನ್ನು ಸೇರಿಸಿಕೊಂಡು ಕಟ್ಟಿಗೆಯ ಆಟಿಕೆ, ಪಲ್ಲಕ್ಕಿ, ದೇವರ ಮೂರ್ತಿಗಳು, ಆಭರಣಗಳು ಮತ್ತು ಆಗಿನ ಪ್ರಾದೇಶಿಕ ಮುಖಂಡರು ಉಪಯೋಗಿಸುತ್ತಿದ್ದ ಛತ್ರಿ, ಚಾಮರ ಹೀಗೆ ಮುಂತಾದ ಕರಕುಶಲ ವಸ್ತುಗಳನ್ನು ಮಾಡುತ್ತಿದ್ದನು. ಬಾಪು ಜಿನಗಾರನೇ ಕಟ್ಟಿಗೆಯ ಆಟಿಕೆಗಳನ್ನು ತಯಾರಿಸುವ ಕಲೆಯನ್ನು ಗೋಕಾಕ್‌ನಲ್ಲಿ ನೆಲೆಸಿದ್ದ ತನ್ನ ಬಂಧುಗಳಿಗೆ ಹೇಳಿಕೊಟ್ಟನೆಂಬ ಪ್ರತೀತಿ ಇದೆ.[೨೩]

ಕಲಾಂತರದಲ್ಲಿ ಗೋಕಾಕ್ ಕಲೆಯನ್ನು ಜಿನಗಾರರು ಮಾತ್ರವಲ್ಲದೆ ಸೋಮವಂಶಿಯ ಕ್ಷತ್ರಿಯ ಮತ್ತು ಪಂಚಾಳರ ಮನೆತನಕ್ಕೆ ಸೇರಿದವರು, ಇವೆರಡು ಮನೆತನಗಳು ಮರಗೆಲಸ, ಅಕ್ಕಸಾಲಿಗ ಹೀಗೆ ಗೋಕಾಕ್ ಕಲೆಯನ್ನು ಮುಂದುವರೆಸಿಕೊಂಡು ಬಂದರು. ಇವರಿಗೆ ಸರ್ಕಾರದಿಂದ ಯಾವ ಸೌಲಭ್ಯಗಳು ದೊರೆತಿಲ್ಲ. ಇವರ ಸ್ವಂತ ಬುದ್ಧಿಯಿಂದ, ಚತುರತೆಯಿಂದ ಈ ಕಲೆಯನ್ನು ಮಾಡುತ್ತಾ ಬಂದಿದ್ದಾರೆ. ಎಲೆಯ ಬಳ್ಳಿಯ ತೋಟದಲ್ಲಿ ಬೆಳೆದ 'ಹಾರಿವಾಳ' ಕಟ್ಟಿಗೆಯನ್ನು ತಂದು ಕಲಾಕೃತಿಗಳಾದ ಹಣ್ಣುಗಳು, ತರಕಾರಿಗಳು, ಪ್ರಾಣಿ–ಪಕ್ಷಿಗಳುನ್ನು ಇನ್ನೂ ಮುಂತಾದ ವಿವಿಧ ರೀತಿಯ ಕಲಾಕೃತಿಗಳನ್ನು ತಯಾರಿಸುತ್ತಾರೆ. ಕಲಾಕೃತಿಗಳ ವರ್ಗೀಕರಣಕ್ಕೆ ತಕ್ಕಂತೆ ಅವುಗಳಿಗೆ ಆಕಾರವನ್ನು ನೀಡಿ ಸುಂದರವಾದ ವಸ್ತುಗಳನ್ನಾಗಿ ತಯಾರಿಸುತ್ತಾರೆ. ಕಾಷ್ಠ ಪ್ರತಿಮೆಗಳನ್ನು ತಯಾರಿಸುವುದರ ಜೊತೆಗೆ ಈಗಿನ ಪೀಳಿಗೆಯವರು

---

೨೩. ಡಾ. ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ, ೨೫೬



ಇಂತಹ ಸುಂದರ ಕಲಾಕೃತಿಗಳನ್ನು ಚೆನ್ನಾಗಿ ತಯಾರಿಸುತ್ತಾರೆ. ಈಗಿರುವ ಕಲಾವಿದರ ಪೂರ್ವಜರು ಕಾಷ್ಠದಲ್ಲಿ ಪ್ರತಿಮೆಗಳನ್ನು ತಯಾರಿಸುತ್ತಿದ್ದರು.

ಜಾತ್ರೆ, ಉತ್ಸವಗಳಲ್ಲಿ ಉಪಯೋಗಿಸುವ ರಥ, ಪಲ್ಲಕ್ಕಿಗಳಿಗೆ ಅಲಂಕರಕ್ಕಾಗಿ ಸುಂದರವಾದ ಕಾಷ್ಠದ ಗೊಂಬೆಗಳನ್ನು ತಯಾರಿಸಿಕೊಡುತ್ತಿದ್ದರು. ನಂತರದ ದಿನಗಳಲ್ಲಿ ಅವುಗಳಿಗೆ ಬೇಡಿಕೆ ಕಡಿಮೆಯಾದಂತೆ ಯುವಜನತೆಯ ಆಶೋತ್ತರಗಳಿಗೆ ಸ್ಪಂದಿಸುವಂತೆ ಆಧುನಿಕ ಕಲಾಕೃತಿಗಳ ನಿರ್ಮಾಣಕ್ಕೆ ಮುಂದಾದರು. ಕುಟುಂಬದವರ ಸಹಕಾರದಿಂದ ಇಂತಹ ಕಲಾಕೃತಿಯ ತಯಾರಿಕೆಯಲ್ಲಿ ಈಗಲೂ ತಮ್ಮನ್ನೂ ತೊಡಗಿಸಿಕೊಂಡಿದ್ದಾರೆ.

**ಕಲಾಕೃತಿಗಳ ವರ್ಗೀಕರಣ :**

೧. ಹಣ್ಣುಗಳು ೨. ತರಕಾರಿಗಳು ೩. ಪ್ರಾಣಿ–ಪಕ್ಷಿಗಳು ೪. ಮೂರ್ತಿಗಳು ಮತ್ತು ಆಟಿಕೆಯ ವಸ್ತುಗಳು

**೧. ಹಣ್ಣುಗಳು :**

ಪ್ರಕೃತಿಯಲ್ಲಿ ನಮಗೆ ದೊರಕುವ ಹಣ್ಣಗಳು ಈ ಕಾಷ್ಠ ಮಾಧ್ಯಮದಲ್ಲಿ ಮತ್ತೊಮ್ಮೆ ಜೀವ ಪಡೆಯುತ್ತವೆ. ನಿಸರ್ಗದತ್ತವಾಗಿ ಋತುಮಾನ, ಕಲಾಕ್ಕನುಗುಣವಾಗಿ ದೊರೆಯುವ ಹಣ್ಣುಗಳು ಇಲ್ಲಿ ರೂಪತಳೆದು ಯಾವಾಗಲೂ ವರ್ಷಪೂರ್ತಿ ಮಳೆ, ಚಳಿಗಾಳಿಯನ್ನದೇ ನೋಡುಗರನ್ನು ಮನತಣಿಸುತ್ತವೆ. ಹೀಗೆ ಇವುಗಳನ್ನು ನಿರ್ಮಿಸುವಲ್ಲಿ ಅವುಗಳ ಆಕಾರ, ಗಾತ್ರ, ಬಳಕೆ ಇವೆಲ್ಲವುಗಳನ್ನು ಗಮನಕ್ಕೆ ತೆಗೆದುಕೊಂಡು ಬೇಡಿಕೆಗಳಿಗನುಸಾರವಾಗಿ ಇವುಗಳು ರಚನೆಯಾಗುತ್ತವೆ. ಒಂದು ಪೆಟ್ಟಿಗೆಯನ್ನು ತಯಾರಿಸಿಕೊಂಡು ಅದರಲ್ಲಿ ವಿವಿಧ ತರಹದ ಹಣ್ಣಗಳನ್ನು ಜೋಡಿಸಿಡುತ್ತಾರೆ. ಮೊದಲನೆಯದಾಗಿ ಪ್ರಕೃತಿ ನಿರ್ಮಿತ ವಸ್ತುಗಳ ವಸ್ತುವಿಷಯಕ್ಕೆ ಹತ್ತಿರವಾಗಿ ನೈಜತೆ ಮೂಡುವಂತೆ ಅವುಗಳನ್ನು ವಿಂಗಡಿಸಲಾಗುತ್ತದೆ. ಬಗೆ ಬಗೆಯ ಹಣ್ಣುಗಳ ಪ್ರತಿಕೃತಿಗಳನ್ನು ತಯಾರಿಸಿಕೊಳ್ಳುತ್ತಾರೆ. ಅವುಗಳೆಂದರೆ ದ್ರಾಕ್ಷಿ, ಸೇಬು, ಬಳೆಹಣ್ಣು, ಗೊಡಂಬಿ, ಕಿತ್ತಳೆ, ಮೊಸಂಬಿ, ಪೇರುಹಣ್ಣು, ಕಲ್ಲಂಗಡಿ ಹಣ್ಣು, ನಿಂಬೆ, ಗಜನಿಂಬೆ, ಸೀತಾಫಲ ಇನ್ನೂ ಮುಂತಾದವುಗಳು.

ಈ ವರ್ಗದಲ್ಲಿ ಬರುವ ವಸ್ತುಗಳ ಪಟ್ಟಿಯನ್ನು ಮಾಡಿಕೊಂಡು ನಂತರ ಕ್ರಮವಾಗಿ ಹಣ್ಣುಗಳ ಆಕಾರ, ಗಾತ್ರ, ಬಣ್ಣ ಇವುಗಳ ಮೇಲೆ ನಿರ್ಧರಿಸಿ ವಸ್ತುಗಳನ್ನು ಆಯ್ಕೆ ಮಾಡಿಕೊಂಡು ಕಲಾವಿದರು ಕಾಷ್ಠ ಮಾಧ್ಯಮದಲ್ಲಿ ಅವುಗಳಿಗೆ ರೂಪು ಕೊಡುತ್ತಾರೆ. ಅವುಗಳು ಕಟ್ಟಿಗೆಯಿಂದ ಮಾಡಿದವುಗಳೆಂದು ಗುರುತಿಸಲು ಸಾಧ್ಯವಾಗುವುದಿಲ್ಲ. ಏಕೆಂದರೆ ಅವು ಅಷ್ಟೊಂದು ನೈಜತೆಯಿಂದ ಕೂಡಿರುತ್ತವೆ. ಇಲ್ಲಿಯ ವರ್ಣವಿನ್ಯಾಸ ಪರಿಣಿತಿ, ಬಣ್ಣಗಳ ಮಿಶ್ರಣದ ರೀತಿಗಳು ಈ ಜನಪದ ಕಲಾವಿದರ ಪ್ರತಿಭೆಯನ್ನು ಮನಗೆ ತಿಳಿಸಿಕೊಡುತ್ತವೆ.











ಸಿದ್ಧಗೊಳ್ಳುತ್ತಿರುವ ಹಣ್ಣುಗಳು







ಉಡುಗೊರೆಗೆ ಸಿದ್ದಗೊಂಡಿರುವ ಹಣ್ಣು ಮತ್ತು ತರಕಾರಿಗಳು



ಇವರ ಅದ್ಭುತ ಕಲಾ ಸೃಷ್ಟಿ ನೋಡುಗರನ್ನು ಮೂಕವಿಸ್ಮಿತರನ್ನಾಗಿಸುತ್ತವೆ.

**೨. ತರಕಾರಿಗಳು :**

ನಿಸರ್ಗದಲ್ಲಿ ದೊರೆಯುವ ಖನಿಜ, ಪೋಷಕಾಂಶಗಳಿಂದ ಕೂಡಿರುವ ತರಕಾರಿಗಳನ್ನು ವರ್ಗೀಕರಿಸಿಕೊಳ್ಳುತ್ತಾರೆ. ಅಲ್ಲದೇ ಅವುಗಳ ವಸ್ತುವಿಷಯಕ್ಕೆ ಅನುಗುಣವಾಗಿ ಅವುಗಳ ಗಾತ್ರ, ಬಣ್ಣ, ಆಕಾರ ಇವೆಲ್ಲವುಗಳನ್ನು ಗಣನೆಗೆ ತೆಗೆದುಕೊಂಡು ತರಕಾರಿಗಳ ಪ್ರತಿಕೃತಿಗಳನ್ನು ನಿರ್ಮಾಣ ಮಾಡುತ್ತಾರೆ. ದೂರದಿಂದ ನೋಡಿದಾಗ ನೋಡುಗನಿಗೆ ತಕ್ಷಣ ಚಿತ್ತಭ್ರಮೆಯುಂಟು ಮಾಡುವಂತೆ ಕಾಷ್ಠ ಮಾಧ್ಯಮದಲ್ಲಿ ತರಕಾರಿಗಳು ರೂಪುಗೊಳ್ಳುತ್ತವೆ. ಉದಾಹರಣೆಗೆ ಬೆಂಡೆಕಾಯಿ, ಬದನೆಕಾಯಿ, ಹೀರೆಕಾಯಿ, ಈರುಳ್ಳಿ, ಮೂಲಂಗಿ, ನುಗ್ಗೆಕಾಯಿ, ಗಜ್ರೆ, ಟೋಮೆಟೋ ಇನ್ನೂ ಮುಂತಾದವುಗಳನ್ನು ರಚಿಸಲ್ಪಟ್ಟಿವೆ. ಇವುಗಳಲ್ಲಿ ಕಲಾವಿದನ ಪ್ರೌಢಿಮೆಯು ಎದ್ದುಕಾಣುತ್ತದೆ.

**೩. ಪ್ರಾಣಿ–ಪಕ್ಷಿಗಳು :**

ಪ್ರಾಣಿ–ಪಕ್ಷಿಗಳನ್ನು ಅವುಗಳ ಆಕಾರ, ಗಾತ್ರ, ಬಣ್ಣಕ್ಕೆ ಅನುಗುಣವಾಗಿ ವರ್ಗೀಕರಿಸಿಕೊಂಡು ಕಾಷ್ಠ ಮಾಧ್ಯಮದಲ್ಲಿ ರಚಿಸಲಾಗುತ್ತದೆ. ಕಲಾವಿದನ ಆಶಯಕ್ಕೆ ತಕ್ಕಂತೆ ರೂಪುಗೊಳ್ಳುವ ಈ ಕಲಾಕೃತಿಗಳು ನೋಡುಗನ ಮನಸ್ಸಿನಲ್ಲಿ ಅಚ್ಚಳಿಯದ ಪ್ರಭಾವವನ್ನು ಉಂಟುಮಾಡುವಲ್ಲಿ ಸಂಶಯವೇ ಇಲ್ಲ. ನಿಸರ್ಗದಲ್ಲಿ ಪ್ರಸ್ತುತ ಲಭ್ಯವಿರುವ ಪ್ರಾಣಿ–ಪಕ್ಷಿಗಳ ಪ್ರತಿಕೃತಿಗಳನ್ನು ತಯಾರಿಸುವಲ್ಲಿ ಇಲ್ಲಿನ ಕಲಾವಿದರು ತಮ್ಮ ಕೈಚಳಕವನ್ನು ತೋರಿಸಿದ್ದಾರೆ. ಉದಾಹರಣೆಗೆ ಕೋಳಿ, ಪಾರಿವಾಳ, ಗಿಳಿ, ಬಾತುಕೋಳಿ, ಪ್ರಾಣಿಗಳಲ್ಲಿ ಕುದುರೆ, ಸಿಂಹ, ಆನೆ ಇನ್ನೂ ಮುಂತಾದವುಗಳನ್ನು ಈ ಕಲಾಕೃತಿಗಳಲ್ಲಿ ಕಾಣಬಹುದಾಗಿದೆ.

**೪. ಮೂರ್ತಿಗಳು ಮತ್ತು ಆಟಿಕೆಗಳು :**

ವಸ್ತುಗಳ ವಿಂಗಡಣೆ ವಿಷಯದ ಆಧಾರದ ಮೇಲೆ ನಿರ್ಣಯಿಸುವಾಗ ಅವುಗಳ ಲಭ್ಯತೆ, ಗಾತ್ರ, ಬಣ್ಣ, ಆಕಾರಗಳಿಗೆ ಅನುಗುಣವಾಗಿ ಇಲ್ಲಿ ರೂಪಗಳನ್ನು ನಿರ್ಮಿಸಲಾಗುತ್ತದೆ. ಕಾಷ್ಠ ಮಾಧ್ಯಮದಲ್ಲಿ ಮೂರ್ತಿಗಳು, ಆಟಿಕೆಗಳು ಈ ರೀತಿಯಾಗಿ ವರ್ಗೀಕರಿಸಿಕೊಂಡು ವಸ್ತುಗಳನ್ನು ನಿರ್ಮಾಣ ಮಾಡಲಾಗುತ್ತದೆ. ದೇವಸ್ಥಾನಗಳಲ್ಲಿ ಜಾತ್ರೆ, ಉತ್ಸವಗಳ ಸಂದರ್ಭಗಳಲ್ಲಿ ಕಾಷ್ಠದಿಂದ ಕೆತ್ತಲ್ಪಟ್ಟ ದೇವರ ಸಣ್ಣ ಸಣ್ಣ ಮೂರ್ತಿಗಳನ್ನು ಪಲ್ಲಕ್ಕಿಯ ಸುತ್ತಲೂ ಕೆತ್ತುತ್ತಾರೆ. ಅಲ್ಲದೇ ಸುಂದರ ವಿನ್ಯಾಸಗಳನ್ನು ನಿರ್ಮಾಣ ಮಾಡುತ್ತಾರೆ. ಹಾಗೂ ಮಕ್ಕಳ ಆಟಿಕೆಗಳನ್ನು ಸುಂದರವಾಗಿ ನಿರ್ಮಿಸಲಾಗುತ್ತದೆ. ಆಟಿಕೆಗಳಲ್ಲಿಯೂ ಜೀವಸೆಲೆಯನ್ನು ತುಂಬುವಂತೆ ಇಲ್ಲಿನ ಕಲಾವಿದರು ಶ್ರಮಿಸುತ್ತಾರೆ. ತಮ್ಮ ನಿರೀಕ್ಷೆಗೆ ತಕ್ಕಂತೆ ವಸ್ತುಗಳನ್ನು ನಿರ್ಮಿಸುವರು. ಕೃತಕವಾದರು ಅವುಗಳಲ್ಲಿ ಜೀವಂತಿಕೆಯನ್ನು ತುಂಬುದು ಸುಲಭಸಾಧ್ಯವಾಗದ ಮಾತು



# ಗೋಕಾಕ್ ಕಾಷ್ಠ ಕಲೆ





ಪಕ್ಷಿಗಳು





ಹಣ್ಣು ಮತ್ತು ತರಕಾರಿಗಳು



ಗೋಕಾಕ್ ಚಿತ್ರಗಾರ ಸಹಕಾರಿ ಉತ್ಪಾದಕ ಸಂಘದ ಕಲಾವಿದರು



ಆದರೂ ಇದಕ್ಕೆ ಅಪವಾದವೆಂಬಂತೆ ಇಲ್ಲಿನ ಕಲಾವಿದರ ಕಲಾಪ್ರತಿಭೆಯು ಅತ್ಯಂತ ಅದ್ಭುತವಾಗಿದೆ.

ಪ್ರಮಾಣ ಬದ್ಧವಾದ ಮೂರ್ತಿಗಳ, ಆಕೃತಿಗಳ ನಿರ್ಮಾಣಕ್ಕೆ ಹೆಸರುವಾಸಿಯಾಗಿರುವ ಗೋಕಾಕ್ ಕಲಾವಿದರು ತಮ್ಮ ಕಲಾಪ್ರೌಢಿಮೆಯನ್ನು ಕಲಾಕೃತಿಗಳ ಮೂಲಕ ಹೊರ ಜಗತ್ತಿಗೆ ಪರಿಚಯಿಸುತ್ತಿದ್ದಾರೆ. ನಿಸರ್ಗಕ್ಕೆ ಮಾನವ ಎಂದೂ ಸಾಟಿಯಾಗಲಾರ ಆದರೂ ಗೋಕಾಕ್‌ನ ಕಲಾವಿದರು ತಮ್ಮ ಕಲಾಕೌಶಲ್ಯದಿಂದ ನಿಸರ್ಗಕ್ಕೆ ತುಂಬ ಹತ್ತಿರವಾಗಿದ್ದಾರೆ. ಕಲಾವಿದನಿಗಿರುವ ಸೂಕ್ಷ್ಮ ಕುಶಲತೆ, ಗ್ರಹಿಸುವಿಕೆ ಇವರಲ್ಲಿ ರಕ್ತಗತವಾಗಿ ಬಂದ ಗುಣ. ಹೀಗಾಗಿ ಇಂದು ನಿಸರ್ಗ ನಿರ್ಮಿತ ವಸ್ತುಗಳ ಪ್ರತಿಕೃತಿ ತಯಾರಿಸುವುದರಲ್ಲಿ ಗೋಕಾಕ್ ಕಲಾವಿದರು ಸಿದ್ಧಹಸ್ತರು.

**ಕಲಾಕೃತಿಗಳ ರಚನೆಯ ಪರಿಕರಗಳು :**

ಈ ಗೋಕಾಕ್ ಕಲೆಯ ಕಲಾಕೃತಿಗಳನ್ನು ರಚಿಸಲು ತೀರಾ ಹಗುರವಾಗಿರುವ ಹಾರಿವಾಳ (ಹಲವಾಣ) ಎಂಬ ಮರದ ಕಟ್ಟಿಗೆಯನ್ನು ಬಳಸುತ್ತಾರೆ. ಈ ಕಲಾಕೃತಿಗಳನ್ನು ರಚಿಸಲು ಇಲ್ಲಿ ಹಾರಿವಾಳದ ಮರವನ್ನೇ ಹೆಚ್ಚಾಗಿ ಬಳಸುತ್ತಾರೆ. ಎಲೆ ತೋಟಗಳಲ್ಲಿ ಎಲೆಯ ಬಳ್ಳಿಯ ಆಧಾರಕ್ಕಾಗಿ ಈ ಮರಗಳನ್ನು ಬೆಳೆಸಿರುತ್ತಾರೆ. ಈ ಮರದಿಂದ ಕಲಾಕೃತಿಗಳನ್ನು ತಯಾರಿಸಲು ಬಳಸುವ ಇನ್ನೂಳಿದ ಪರಿಕರಗಳೆಂದರೆ ಉಳಿ, ಸುತ್ತಿಗೆ, ಅರ, ರಂಧ್ರ ಮಾಡಲು ಚಿಕ್ಕ ತುದಿ ಅಥವಾ ಮೊನೆಯಿರುವ ಮೊಳೆಗಳು, ಪಾಲಿಶ್ ಕಾಗದಗಳು, ಅಂಟುವಾಳದ ಕಾಯಿಂದ ಸೋಸಿದ ನೀರು, ಅಂಟು, ಚಾಕ್‌ಪೌಡರ್, ಬಣ್ಣಗಳು ಹಾಗೂ ಕುಂಚಗಳು ಹೀಗೆ ಇಂತಹ ಕಲಾಪರಿಕರಗಳನ್ನು ಗೋಕಾಕ್ ಕಾಷ್ಠ ವಸ್ತುಗಳ ತಯಾರಿಕೆಗೆ ಬಳಸಲಾಗುತ್ತದೆ.

**ಸಿದ್ಧತಾ ವಿಧಿ-ವಿಧಾನ :**

ಕಲಾಕೃತಿಗಳನ್ನು ರಚನೆ ಮಾಡುವ ಮೊದಲು ಹಾರಿವಾಳದ ಮರವನ್ನು ಕಡಿದು ಕಟ್ಟಿಗೆಯನ್ನು ಬಿಸಿಲಿನಲ್ಲಿ ಪೂರ್ತಿಯಾಗಿ ಒಣಗಿಸುತ್ತಾರೆ. ನಂತರ ಅದರ ಮೈಮೇಲಿನ ಮುಳ್ಳುತೊಗಟೆಯನ್ನೆಲ್ಲ ತೆಗೆಯುತ್ತಾರೆ. ವಸ್ತುಗಳ ವಿಷಯಕ್ಕೆ ಅನುಗುಣವಾಗಿ ವರ್ಗೀಕರಿಸಿಕೊಂಡು ಕಟ್ಟಿಗೆಯನ್ನು ಆ ವಸ್ತುವಿಷಯಕ್ಕೆ ತಕ್ಕಂತೆ ಆಕಾರ ಬರುವ ಹಾಗೆ ಕೊರೆದುಕೊಳ್ಳುತ್ತಾರೆ. ಇದು ಕಲಾವಿದನ ಜಾಣ್ಮೆಯ ಪರೀಕ್ಷೆಯ ಮೊದಲ ಹೆಜ್ಜೆಯಾಗಿರುತ್ತದೆ. ತದನಂತರ ಕೊರೆದುಕೊಂಡ ಆ ಆಕೃತಿಯ ಮರದ ತುಂಡಿಗೆ ಚಾಕ್‌ಪೌಡರ್‌ನ್ನು ಹಚ್ಚುತ್ತಾರೆ. ಒಣಗಿದ ನಂತರ ಪಾಲಿಶ್ ಪೇಪರನಿಂದ ಉಜ್ಜುತ್ತಾರೆ. ಆಕೃತಿಯ ಮೇಲ್ಮೈಯನ್ನು ಚೆನ್ನಾಗಿ ಸವರುತ್ತಾರೆ. ಹೀಗೆ ಈ ಪ್ರಕ್ರಿಯೆ ನಾಲ್ಕೈದು ಬಾರಿ ನಡೆಯುತ್ತದೆ. ಹೀಗೆ ಮಾಡಿದಾಗ ಆ



# ಗೋಕಾಕ್ ಕಾಷ್ಠ ಕಲೆಗೆ ಬಳಸುವಂತಹ ಪರಿಕರಗಳು



ಹಾರವಾಳ ಕಟ್ಟಿಗೆ



ಉಡುಗೊರೆಯ ಪೆಟ್ಟಿಗೆಗಳು



ಸ್ಟೀಲಿನ ಪಾತ್ರೆ



ಕೃತಿಯ ಮೇಲ್ಮೈ ನುಣುಪಾಗುತ್ತದೆ. ಇದನ್ನು ಹಚ್ಚಿದ ನಂತರ ಅಂಟವಾಳ ಕಾಯಿಯನ್ನು ನೀರಿನಲ್ಲಿ ಚೆನ್ನಾಗಿ ನೆನೆಸಿಟ್ಟು ಎರಡು ಮೂರು ದಿವಸ ಬಿಡುತ್ತಾರೆ. ಇದಾದ ನಂತರ ಆ ನೀರನ್ನು ಒಂದು ಬಾಟಲಿನಲ್ಲಿ ಸೋಸಿ ತೆಗೆದು ಇಡುತ್ತಾರೆ. ಒಂದು ದಿವಸ ಬಿಟ್ಟು ಮರುದಿನವೇ ಆರಿಸಿದ ಅಂಟುವಾಳದ ನೀರನ್ನು ಕೊರೆದಿಟ್ಟ ವಸ್ತುಗಳಿಗೆ ಚೆನ್ನಾಗಿ ಲೇಪನ ಮಾಡುತ್ತಾರೆ.

ಹೀಗೆ ಈ ಪ್ರಕ್ರಿಯೆಯನ್ನು ಎರಡು ಮೂರು ಬಾರಿ ಮಾಡಲಾಗುತ್ತದೆ. ಕಟ್ಟಿಗೆಯಲ್ಲಿರುವ ಬಿರುಕು, ತಗ್ಗುಗಳನ್ನು ಲಾಂಬಿಯಿಂದ ತುಂಬಿಕೊಂಡು ಆರಲು ಬಿಡುತ್ತಾರೆ. ನಂತರ ಅದನ್ನು ಪುಡಿ ಬಣ್ಣವನ್ನು ನೀರಿನಲ್ಲಿ ಮಿಶ್ರಣಗೊಳಿಸಿ, ಲೇಪಿಸಿದ ನಂತರ ಆಕೃತಿಗಳ ಮೇಲೆ ಕ್ಲಿಯರ್ ವಾರ್ನಿಸ್‌ನಿಂದ ಲೇಪನ ಮಾಡಲಾಗುತ್ತದೆ. ಆಯಾ ವಸ್ತುವಿನ ಗುಣ, ಬಣ್ಣಕ್ಕನುಗುಣವಾಗಿ ಬಣ್ಣವನ್ನು ತಿಳಿಯಾಗಿ ಹಚ್ಚುತ್ತಾರೆ. ಮೂರ್ನಾಲ್ಕು ಬಾರಿ ವರ್ಣಲೇಪನದಿಂದ ಬೆಳಕು ನೆರಳುಗಳ ಛಾಯೆಯನ್ನು ವರ್ಣಗಳಲ್ಲಿ ಮೂಡಿಸುತ್ತಾರೆ.

**ವರ್ಣಗಳ ಬಳಕೆ :**

ಇಲ್ಲಿ ತಯಾರುಗುವ ಕಲಾಕೃತಿಗಳ ರಚನೆಯಲ್ಲಿ ವರ್ಣಗಳನ್ನು ಉಪಯೋಗಿಸುವ ಮತ್ತು ಬಳಕೆಯಲ್ಲಿಯು ಒಂದು ವಿಧವಿದೆ. ಸ್ಥಳೀಯ ಕಲಾವಿದರು ಬಣ್ಣ ತಯಾರು ಮಾಡುವ ದೇಸಿ ರೀತಿಯನ್ನು ಅನುಸರಿಸುತ್ತಾರೆ. ಹಿಂದೆ ಬಳಸುತ್ತಿದ್ದಂತಹ ಬಳಪದ ಮಣ್ಣುಕಲ್ಲು, ಹಳದಿ ಮಣ್ಣುಕಲ್ಲು, ಕೆಂಪು ಮಣ್ಣುಕಲ್ಲು ಇವುಗಳು ಇಂದಿಗೂ ಪೇಟೆಯಲ್ಲಿ ಲಭ್ಯವಾಗುತ್ತವೆ. ಅವುಗಳನ್ನು ಅರೆದು ಪುಡಿಮಾಡಿ ಪ್ರಮಾಣಬದ್ಧವಾಗಿ ಅದಕ್ಕೆ ಅಂಟು ಹಾಕಿ ಉಜ್ಜಿ ಸೋಸಿ ಬಣ್ಣವನ್ನು ತಯಾರಿಸಲಾಗುತ್ತದೆ. ಅಂಟುನ್ನು ಹಾಕುವದರಿಂದ ಬಣ್ಣವು ಜಿಗುಟಾಗಿರಲು ಹಾಗೂ ಕೈಗೆ ಹತ್ತಬಾರದೆಂಬ ಉದ್ದೇಶವಾಗಿದೆ.

ಈಗ ಮಾರುಕಟ್ಟೆಯಲ್ಲಿ ವಿವಿಧ ಬಗೆಯ ಸಿದ್ಧ ಬಣ್ಣಗಳು ಲಭಿಸುತ್ತವೆ. ಆದರೆ ಅವುಗಳ ಆಯುಷ್ಯ ಕಡಿಮೆಯೆಂದು ಕಲಾವಿದರ ಅಭಿಪ್ರಾಯವಾಗಿದೆ. ದೇಸಿ ಪದ್ಧತಿಯ ಬಣ್ಣದ ಬಳಕೆಯ ಮಾಡುವುದರಿಂದ ಆ ಕಲಾಕೃತಿಗಳು ಹಲವಾರು ವರ್ಷಗಳ ಕಾಲ ಬಾಳಿಕೆ ಬರುತ್ತವೆ. ಅಲ್ಲದೇ ದೇಸಿ ಬಣ್ಣಗಳಿಂದ ರಚಿತವಾದ ಆಕೃತಿಗಳು ಬಳಕೆಯಾದಂತೆಲ್ಲ ತಮ್ಮ ಹೊಳಪು ಹೆಚ್ಚುತ್ತದೆ ಹೊರತು ಹೊಳಪು ಕಳೆದುಕೊಳ್ಳುವುದಿಲ್ಲ. ಇಲ್ಲಿನ ಕಲಾವಿದರ ಪ್ರಕಾರ ದೇಸಿ ಬಣ್ಣಕ್ಕೆ ಸುಮಾರು ನೂರು ವರ್ಷಗಳ ಕಾಲ ಆಯುಷ್ಯವಿದೆ ಎನ್ನುತ್ತಾರೆ.

**ಕಲಾ ಸಮುದಾಯ :**

ಒಂದು ಕಾಲಕ್ಕೆ ಸುಮಾರು ೧೫೦-೨೦೦ ಜನ ಈ ಕಲೆಯಲ್ಲಿ ತೊಡಗಿರುತ್ತಿದ್ದರು. ಆದರೆ ಕ್ರಮೇಣ ಈ ಕಲೆಗೆ ಬೇಡಿಕೆ ಇಲ್ಲವಾಗಿದೆ. ಈ ಮನೆತನದವರು ಬೇರೆ ಉದ್ಯೋಗಗಳಿಗೆ



# ಗೋಕಾಕ್ ಕಾಷ್ಠ ಕಲೆಗೆ ಬಳಸುವಂತಹ ಪರಿಕರಗಳು







ಸಂಗ್ರಹಿಸಿದ ಮರದ ಅಂಟು

ಶೇಕರಿಸಿದ ಅಂಟು





ಬಣ್ಣ ಮತ್ತು ಕುಂಚಗಳು



ಉಳಿ, ಕರಗಸ, ಅರಣ ಇತ್ಯಾದಿಗಳು



ಸಹಜವಾಗಿ ಅಂಟಿಕೊಂಡಿದ್ದಾರೆ. ಈಗ ಈ ಕಲೆಗಾರಿಕೆ ಮಾಡುವವರು ೨೦ ರಿಂದ ೨೫ ಜನ ಇರುವುದು ಕಂಡುಬರುತ್ತದೆ. ಈಗಿರುವ ಅತ್ಯಂತ ಪ್ರಸಿದ್ಧ ಕಲಾವಿದರೆಂದರೆ ಆನಂದರಾವ್, ವಾಸುದೇವ್ ರಾವ್, ಅಪ್ಪಾರಾವ್, ಮಾರುತಿರಾವ್ ಮತ್ತು ಸಿದ್ದಪ್ಪ ಬಳವಂತ ಇಗವೆ ಇವರು ಈಗಲೂ ಜಿನಗಾರಿಕೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಇವರ ಗುರುಗಳು ಹಾಲಪ್ಪ ಸಿದ್ದಲಿಂಗಪ್ಪ ಬೆಳಗಾವೆ ಇವರ ತಂದೆಯ ಕಾಲದಿಂದಲೂ ಜಿನಗಾರಿಕೆಯನ್ನು ಮಾಡಿಕೊಂಡು ಬಂದಿದ್ದಾರೆ. ಇವರ ತಂದೆಯ ಹೆಸರು ಬಳವಂತರಾವ್ ತಾಯಿ ವಿಮಲಾಬಾಯಿ. ಇವರ ಮಗ ಸಿದ್ದಪ್ಪ ಇಗವೆ. ಇವರು ಹುಟ್ಟಿದ್ದು ಗೋಕಾಕ್‌ನಲ್ಲಿ, ಅವರ ವಿದ್ಯಾಭ್ಯಾಸವು ಇಲ್ಲಿಯೇ ನಡೆಯಿತು. ಮೆಟ್ರಿಕ್ ವರೆಗು ನಡೆದ ವಿದ್ಯಾಭ್ಯಾಸವು ಆರ್ಥಿಕ ಸಮ್ಮಸ್ಯೆಯಿಂದ ಮುಂದುವರೆಸಲು ಆಗಲಿಲ್ಲ. ಇವರಿಗೆ ಕರಕುಶಲ ಕಲೆಯಲ್ಲಿ ತುಂಬ ಆಸಕ್ತಿ ಇದ್ದು, ಕಲೆಗಾಗಿ ಜೀವಿಸುವ ವ್ಯಕ್ತಿಯಾಗಿದ್ದಾರೆ. ಈ ಕಲೆಯು ಅವರ ಮನೆತನದಿಂದ ಬಂದಂತಹ ಕಲೆಯಾಗಿದೆ. ಈ ಜಿನಗಾರಿಕೆಯ ಕೆಲಸಕ್ಕೆ ತುಂಬಾ ಗೌರವವನ್ನು ನೀಡುತ್ತಾರೆ.

ಹವ್ಯಾಸಕ್ಕಾಗಿ ಈ ಕಲೆಯನ್ನು ಮುಂದುವರೆಸಿಕೊಂಡು ಬಂದಂತೆ ಇದರಲ್ಲಿ ಆಸಕ್ತಿ ಹುಟ್ಟಿ ಇದನ್ನೇ ಕ್ರಮೇಣ ಉದ್ಯೋಗವನ್ನಾಗಿಸಿಕೊಂಡ ಹಲವಾರು ಕಲಾವಿದರಲ್ಲಿ ಲಕ್ಷ್ಮಣ ಸುಬ್ಬರಾವ್ ನೇರವಾಡಿ ಇವರೂ ಒಬ್ಬರು. ಇವರು ಹುಟ್ಟಿದ್ದು ೧೯೬೨ ರಲ್ಲಿ ಗೋಕಾಕ್‌ನಲ್ಲಿ ಜನಿಸಿದ ಇವರು ಮಟ್ರಿಕ್ ವರೆಗು ತಮ್ಮ ವಿದ್ಯಾಭ್ಯಾಸವನ್ನು ಮಾಡಿದ್ದಾರೆ. ಇವರ ಕುಟುಂಬವು ಕೂಡ ಈ ಕರಕುಶಲ ಕೈಗಾರಿಕೆಯನ್ನು ಮಾಡುತ್ತ ಬಂದಿದ್ದಾರೆ. ಗೋಕಾಕ್‌ನಲ್ಲಿ ಇವರು ಗೋಕಾಕ್ ಚಿತ್ರಗಾರ ಸಹಕಾರಿ ಸಂಘದ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. (೧೯೯೬ ರಿಂದ ೨೦೦೫ರ ವರೆಗೆ) ಇದಕ್ಕೆ ಮುಂಚೆ ೧೯೯೩ ರಲ್ಲಿ ಸಂಘದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ಒಟ್ಟಿನಲ್ಲಿ ಇವರು ಗೋಕಾಕ್‌ನಲ್ಲಿ ಬಣ್ಣಗಾರರು, ಜಿನಗಾರರು, ಚಿತ್ರಗಾರರು ಎಂಬ ಹೆಸರುಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದಾರೆ.

ಅದೇ ರೀತಿ ಇನ್ನೂ ಅನೇಕ ಕಲಾವಿದರುಗಳಾದ ಸಂಬಾಜಿ, ಶಂಕರ, ಶಶಿಕಾಂತ ಚಿತ್ತಾಳೆ, ಆನಂದ ತುಕಾರಾಮ, ಜೋಶಿ, ಶಿವಾಜಿ, ಸಂತ್ರಾನ್ ಕಾಗಿಯನ್‌ಕರ್ ಹೀಗೆ ಹಲವಾರು ಕಲಾವಿದರು ಈ ಕಲೆಯನ್ನು ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಈ ವೃತ್ತಿಯೇ ಇವರ ಜೀವನಕ್ಕೆ ಆಧಾರವಾಗಿದೆ. ಇವರ ಬದುಕೇ ಬಣ್ಣದ ಬದುಕು ಎಂದು ಹೇಳಬಹುದು. ಈ ಕಲೆಯಲ್ಲಿ ಸಾಕಷ್ಟು ಅನುಭವವನ್ನು ಗಳಸಿದ ಪ್ರಸ್ತುತ ಹಿರಿಯ ಕಲಾವಿದರೆಂದರೆ ಗುರುನಾಥ ಚಿತಾರೆ, ದತ್ತಾತ್ರೇಯ ಚಪ್ಪಾಣ, ಚೂಡಾಮಣಿ ಹಾಗೂ ವಾಗಲೇಯವರು.

ತರಬೇತಿ ಶಾಲೆಯಲ್ಲಿ ಕಲಿತ ಗುರುಸಾತಯ್ಯ ಕೆಳಗಿನಮಠ ಎನ್ನುವವರು ಅತ್ಯಂತ ಪ್ರಸಿದ್ಧ ಕಲಾವಿದರಾಗಿದ್ದು, ಇತ್ತೀಚೆಗೆ ತೀರಿಕೊಂಡರು. ಇವರ ಅಣ್ಣಂದಿರು ಕೂಡ ತರಬೇತಿಯನ್ನು ಪಡೆದುಕೊಂಡವರಾಗಿದ್ದಾರೆ. ಗುರುನಾಥ ಚಿತ್ತಾರೆ ಎಂಬ ಮತ್ತೊಬ್ಬ



# ಗೋಕಾಕ್ ಕಾಷ್ಠ ಕಲೆಯ ಕಲಾವಿದರು



ದಿ. ಹಾಲಪ್ಪ ಶಿದ್ಲಿಂಗಪ್ಪಾ ಬೆಳಗಾಂವ
(ಗೋಕಾಕ್ ಕಲೆಯ ಜನಕ)



ವೃತ್ತಿಯಲ್ಲಿ ನಿರತ ಕುಟುಂಬ



ಸಿದ್ದಪ್ಪ ಬಳವಂತ ಇಗವೆ



ಲಕ್ಷ್ಮಣ ಸುಬ್ಬರಾವ್ ನೇರೆವಾಡಿ



ಸಂಭಾಜಿ ಶಂಕರ ರಣಸು



ಗೋಕಾಕ್ ಚಿತ್ರಗಾರ ಸಹಕಾರಿ ಉತ್ಪಾದಕ ಸಂಘದ ಕಲಾವಿದರು



ಕಲಾವಿದನು ಬಣ್ಣಗಾರಿಕೆಯಲ್ಲಿ ತುಂಬ ನೈಪುಣ್ಯತೆಯನ್ನು ಸಾಧಿಸಿದ್ದಾರೆ. ಶಿವ, ರಾಮ, ಕೃಷ್ಣ, ವೀರಭದ್ರ, ದುರುಗವ್ವ ಮತ್ತು ದ್ಯಾಮವ್ವ ಹೀಗೆ ಅನೇಕ ಮೂರ್ತಿಗಳಿಗೆ ಒಪ್ಪುವ ಬಣ್ಣವನ್ನು ಇವರು ಲೇಪಿಸುತ್ತಿದ್ದರು. ಈತನು ಹಳೆಯ ಮೂರ್ತಿಗಳನ್ನು ತನ್ನ ವರ್ಣವಿನ್ಯಾಸ ಕೌಶಲ್ಯದಿಂದ ಹೊಸತನದ ಭಾವನೆಯನ್ನು ತುಂಬುತ್ತಿದ್ದನು. ಗೋಕಾಕ್ ನಗರವು ಬಣ್ಣಗಾರಿಕೆಯ ಅನೇಕ ಕುಟುಂಬಗಳಿಗೆ ಜೀವನೋಪಾಯದ ಮಾರ್ಗವಾಗಿದೆ. ಪುರುಷರಷ್ಟೇ ಅಲ್ಲದೆ ಕುಟುಂಬದ ಸ್ತ್ರೀಯರು ಈ ಕೆಲಸದಲ್ಲಿ ಭಾಗಿಯಾಗುತ್ತಿರುವುದು ಶ್ಲಾಘನೀಯ. ಕುಟುಂಬದ ವರಮಾನವನ್ನು ಹೆಚ್ಚಿಸುವಲ್ಲಿ ಸ್ತ್ರೀ-ಪುರುಷರೆನ್ನದೆ ಎಲ್ಲರೂ ದುಡಿಯುತ್ತಾರೆ. ಹೀಗೆ ಕಷ್ಟ-ನಷ್ಟದ ಮಧ್ಯದಲ್ಲೂ ಅನೇಕ ವೃತ್ತಿನಿರತ ಈ ಕಲಾವಿದರ ಕುಟುಂಬಗಳು ಇನ್ನೂ ಈ ಕಲೆಯ ಉಳಿಯುವಿಕೆಗಾಗಿ ಶ್ರಮಿಸುತ್ತಿದ್ದಾರೆ.

ಈ ಗೋಕಾಕ್ ಕಲೆಯನ್ನು ಉಳಿಸಿ ಬೆಳೆಸಿ, ಸಂರಕ್ಷಣೆಯ ದೃಷ್ಟಿಯಿಂದಾಗಿ ಒಂದು ಸಂಘ ಅಸ್ತಿತ್ವದಲ್ಲಿದೆ. ಈ ಗೋಕಾಕ್ ಚಿತ್ರಗಾರರ ಸಹಕಾರಿ ಸಂಘವನ್ನು ಎಲ್ಲ ಕಲಾವಿದರು ಸೇರಿ ರಚಿಸಿಕೊಂಡಿದ್ದಾರೆ. ಈ ಸಂಘದ ವತಿಯಿಂದ ಕಲಾಕೃತಿಗಳ ಮಾರಾಟಕ್ಕಾಗಿ ಹಾಗೂ ಪ್ರಚಾರಕ್ಕಾಗಿ ಮಾರಾಟ ಮಳಿಗೆಯನ್ನು ಸ್ಥಾಪಿಸಿದ್ದಾರೆ. ಈ ರೀತಿಯ ಸಂಘವನ್ನು ರಚಿಸಿಕೊಳ್ಳುವ ಕಾರಣವೇನೆಂದರೆ ಸರ್ಕಾರದ ವತಿಯಿಂದ ಯಾವುದೇ ಸೌಲಭ್ಯಗಳು ಇಲ್ಲಿನ ಕಲಾವಿದರಿಗೆ ದೊರಕಿಲ್ಲ. ಹಾಗಾಗಿ ತಮ್ಮ ಕುಂದು ಕೊರತೆಗಳನ್ನು ಪರಿಹರಿಸಿಕೊಳ್ಳಲು ಈ ಸಂಘವನ್ನು ಅಸ್ತಿತ್ವಕ್ಕೆ ತಂದಿದ್ದಾರೆ.

**೨. ಬೈಲಹೊಂಗಲದ ಕರಕುಶಲಕಲೆ :**

ಮಾನವನು ಇಂದಿನ ಆಧುನಿಕ ಹಂತಕ್ಕೆ ಬರುವಲ್ಲಿ ಬುದ್ಧಿಯ ಪಾತ್ರ ದೊಡ್ಡದಿದೆ. ಹೇಗೆ ಬೇಕೋ ಹಾಗೆ ಬದುಕು ನಡೆಸುತ್ತ ಬಂದಂತೆ, ಹುಟ್ಟು-ಸಾವಿನ ಮಧ್ಯದ ಸಮಯ ಅಮೂಲ್ಯವಾಗತೊಡಗಿತು. ತನ್ನೊಳಗಿನ ಭಾವನೆಗಳು ಕಲಾತ್ಮಕವಾಗಿ ಹೊರಹೊಮ್ಮುವುದರೊಂದಿಗೆ ಬದುಕಿರುವತನಕ ತನ್ನ ವಿಕಾಸದ ಚಟುವಟಿಕೆಗಳು ಆನಂದ ನೀಡಬೇಕೆಂಬ ಬಯಕೆ ಗರಿಗಟ್ಟತೊಡಗಿತು. ಈ ಪರಿಣಾಮದಿಂದಾಗಿ ಕಾಲಕ್ರಮದಲ್ಲಿ ತಾನು ಕಂಡ, ಅನುಭವಿಸುವ ಪರಿಕರಗಳಲ್ಲಿ ಸೌಂದರ್ಯದ ಪ್ರಜ್ಞೆ ಪ್ರವೇಶ ಮಾಡತೊಡಗಿತು. ವ್ಯಕ್ತಿ, ಕುಟುಂಬ, ಸಂಘಸಂಸ್ಥೆ, ಸಮಾಜವಾಗಿ ಬದಲಾಗುತ್ತ ನಡೆದ ಮಾನವಜೀವಿ ಒಂದೆಡೆ ನೆಲೆನಿಲ್ಲಲು ಅವಶ್ಯಕ ಸಾಮಗ್ರಿಗಳನ್ನು ಕಲೆ ಹಾಕಲು ಯತ್ನಿಸಿ ಆ ಮೂಲಕ ಆನಂದಮಯ ಜೀವನ ನಡೆಸತೊಡಗಿದನು.[೨೪]

ಕಲೆಯನ್ನೇ ವೃತ್ತಿಯನ್ನಾಗಿಸಿಕೊಂಡು ನಡೆಸುವ ನಾಡಿನ ಹಲವಾರು ಕಲಾ ಕುಟುಂಬಗಳು ಉತ್ತರ ಕರ್ನಾಟಕದ ಉದ್ದಗಲಕ್ಕೂ ದೀಪಗಳಂತೆ ಬೆಳಗುತ್ತ ನಿಂತಿವೆ.

೨೪. ಡಾ. ಎಸ್.ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ, ೨೫೪



ಹೀಗೆ ದೀಪವಾಗಿ ನಾಡಿಗೆ ಬೆಳಕು ನೀಡುತ್ತಿರುವ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ನಗರವು ಕೂಡ ಒಂದಾಗಿದೆ. ಬೈಲಹೊಂಗಲವು ಚಿತ್ರಕಲೆಗೆ ತನ್ನದೇ ಆದ ವಿಶಿಷ್ಟವಾದ ಕೊಡುಗೆಯನ್ನು ನೀಡಿದೆ. ಚಿತ್ರಕಲೆಯಲ್ಲಿ ವಿಶೇಷವಾಗಿ ರಂಗಭೂಮಿಯ ಪರದೆಯ ಚಿತ್ರಗಳ ತಯಾರಿಕೆಗೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ರಂಗಭೂಮಿಯಲ್ಲಿ ಚಿತ್ರಗಳ ಪರದೆಯು ಬಯಲಾಟ ಮತ್ತು ನಾಟಕಗಳ ಕೇಂದ್ರಬಿಂದುವಾಗಿರುತ್ತದೆ. ಬೈಲಹೊಂಗಲದಲ್ಲಿ ಚಿತ್ರಗಾರರ ಎರಡು ಮನೆತನವು ವಂಶಪರಂಪರೆಯಾಗಿ ಚಿತ್ರಕಲೆಯನ್ನು ಕೆಲವೊಂದು ಬದಲಾವಣೆಗಳೊಂದಿಗೆ ಜೀವಂತವಾಗಿರಿಸಿಕೊಂಡಿದ್ದಾರೆ. ಈ ಚಿತ್ರಗಾರರು ಮೂಲತಹ ಬೈಲಹೊಂಗಲ ತಾಲೂಕಿನ ಇಂಚಲ ಗ್ರಾಮದವರು. ಇವರು ಬೈಲಹೊಂಗಲಕ್ಕೆ ಸುಮಾರು ನಾಲವತ್ತು ವರ್ಷಗಳ ಹಿಂದೆಯೇ ಬಂದು ನೆಲೆಸಿದ್ದಾರೆ.

ಈ ಮನೆತನದ ದಿ. ಶ್ರೀ. ಗಂಗಪ್ಪಾ ಚಿತ್ರಗಾರ ಎಂಬುವವರು ಪ್ರಸಿದ್ಧ ಕಲಾವಿದರಾಗಿದ್ದರು. ಇವರು ರಚಿಸುತ್ತಿರುವಂತ ಕಲಾಕೃತಿಗಳಲ್ಲಿ ರಂಗಭೂಮಿಯ ಚಿತ್ರಪರದೆಗಳು ಪ್ರಮುಖವಾಗಿದ್ದವು. ಬೈಲಹೊಂಗಲದಲ್ಲಿರುವ ಕಲಾವಿದರ ರಚಿಸಿದಂತಹ ಪರದೆಯ ಕಲಾಕೃತಿಗಳಲ್ಲಿ ನಿಸರ್ಗ, ಧಾರ್ಮಿಕ, ಪೌರಾಣಿಕ ಹಾಗೂ ಸಾಮಾಜಿಕ ಚಿತ್ರಗಳನ್ನು ರಚಿಸುತ್ತಿದ್ದರು. ಈ ಮಾಹಿತಿಯನ್ನು ಸ್ಥಳೀಯರ ಮತ್ತು ಕಲಾವಿದ ಕುಟುಂಬ ವರ್ಗದವರಿಂದ ತಿಳಿದುಕೊಳ್ಳಬಹುದೇ ಹೊರತು ಪ್ರಸ್ತುತ ಕಾಣಲಾಗುವುದಿಲ್ಲ. ಕಾರಣ ಪೂರ್ವಜರು ರಂಗಪರದೆಯ ಚಿತ್ರಗಳನ್ನು ರಚಿಸಿರುವ ಕುರಿತು ಮೌಕಿಕ ಆಧಾರಗಳು ದೊರಕಿವೆ. ಅಲ್ಲದೇ ಮರ ಮತ್ತು ಮಣ್ಣು ಮಾಧ್ಯಮದ ಗ್ರಾಮದೇವತೆಯ ಶಿಲ್ಪಗಳನ್ನು ರಚಿಸಿ ಅವುಗಳಿಗೆ ಸುಂದರವಾದ ವರ್ಣವಿನ್ಯಾಸವನ್ನು ಮಾಡುತ್ತಿದ್ದರು. ಆ ಶಿಲ್ಪಗಳ ಹಿಂಬದಿಯ ಪ್ರಭಾವಳಿಯ ಮೇಲೆ ದೇವಾನುದೇವತೆಯ ಚಿತ್ರಗಳನ್ನು ರಚಿಸಿ ಅವುಗಳಿಗೆ ವರ್ಣಸಂಯೋಜನೆಯಿಂದ ಅಲಂಕರಣಗೊಳಿಸುತ್ತಿದ್ದರು. ಇಷ್ಟೇ ಅಲ್ಲದೇ ಬೇರೂರಿನಲ್ಲಿರುವಂತ ಗ್ರಾಮದೇವತೆಯ ಶಿಲ್ಪಗಳಿಗೂ ಕೂಡ ವರ್ಣವಿನ್ಯಾಸವನ್ನು ಮಾಡುತ್ತಿದ್ದರು.

ದಿವಂಗತ: ಶ್ರೀ. ಗಂಗಪ್ಪಾ ಚಿತ್ರಗಾರರ ಕಲಾವಂತಿಕೆಯನ್ನು ಮೆಚ್ಚಿದ ಚಚಡಿ ಸಂಸ್ಥಾನದ ದೇಶಗತಿಯವರಿಂದ ೧೨ ಕೂರಿಗೆ ಹೊಲ ಹಾಗೂ ಬ್ರಿಟಿಷರಿಂದ ಬಂಗಾರದ ಪದಕವನ್ನು ಬಹುಮಾನವಾಗಿ ಪಡೆದಿರುವರು. ಇವರ ವಂಶಜರು ನಾಡಿನುದ್ದಕ್ಕೂ ತಮ್ಮ ಚಿತ್ರಕಲೆಯನ್ನು ಹರಡುತ್ತಿದ್ದಾರೆ.[೨೫] ದಿವಂಗತ: ಶ್ರೀ ಗಂಗಪ್ಪಾ ಚಿತ್ರಗಾರ ಅವರ ಜೀವಿತಾವಧಿಯಲ್ಲಿಯೇ ರಂಗಪರದೆಯ ಚಿತ್ರಕಲೆಯ ರಚನೆಯು ಬೈಲಹೊಂಗಲದಲ್ಲಿ ಕುಂಟಿತಗೊಂಡಿತು. ಮುಂದೆ ಕಲಾಂತರದಲ್ಲಿ ಈ ಕಲಾವಿದನ ಮರಣದ ನಂತರ ಈ ಕಲೆಯನ್ನು ಅವರ ಮಗನಾದ

---

೨೫. ಶ್ರೀ ವೀರಯ್ಯ ಸ್ವಾಮಿಗಳು : ಗುರುದೇವ, ಷಷ್ಟ್ಯಬ್ದಿ ಮಹೋತ್ಸವದ ಸವಿನೆನಪಿನ ಸ್ಮರಣ ಸಂಚಿಕೆ. ಪುಟ, ೨೧



## ಬೈಲಹೊಂಗಲದ ಮರ ಮಾಧ್ಯಮ ಕಲಾಕೃತಿಗಳು









ಪೂರ್ಣಗೊಂಡ ಗ್ರಾಮದೇವಿಯ ಕಲಾಕೃತಿಗಳು



ಗೋಪಾಳ ಗಂಗಪ್ಪ ಚಿತ್ರಗಾರ ಅವರು ಮುಂದುವರೆಸಿಕೊಂಡು ಬಂದರು. ಆದರೆ ಕಲಾಂತರದಲ್ಲಿ ಚಲನಚಿತ್ರದ ಹಾವಳಿಯಿಂದ ನಾಟಕಗಳು ಕಡಿಮೆಯಾದವು. ಹಾಗಾಗಿ ನಾಟಕಗಳ ಪರದೆಯ ಚಿತ್ರಕಲೆಯ ರಚನೆಯ ಪ್ರಮಾಣವು ಕುಂಟಿತಗೊಂಡವು. ನಂತರ ಈ ಪರದೆಯ ಚಿತ್ರ ಕಲಾವಿದರು ವಾಣಿಜ್ಯ ಕಲೆಯತ್ತ ಗಮನಹರಿಸತೊಡಗಿದರು. ಮುಂದೆ ಬೈಲಹೊಂಗಲದ ಈ ರಂಗಪರದೆಯ ಚಿತ್ರಗಳು ಸಂಪೂರ್ಣವಾಗಿ ಕಣ್ಮರೆಯಾದವು. ಆದರೆ ರಂಗಪರದೆಯನ್ನು ಹೊರತುಪಡಿಸಿ ಇನ್ನೂಳಿದ ಕಲೆಗಳ ಜೊತೆ ವಾಣಿಜ್ಯ ಕಲೆಗಳನ್ನು ಬೆಳೆಸಿಕೊಂಡು ಬಂದರು. ಉದಾಹರಣೆಗೆ ಗಣೇಶ ಚತುರ್ಥಿಯ ಸಂದರ್ಭದಲ್ಲಿ ಗಣೇಶನ, ಮಣ್ಣು ಮತ್ತು ಪ್ಲಾಸ್ಟರ್ ಆಫ್ ಪ್ಯಾರಿಸ್ ಎಂಬ ರಾಸಾಯನಿಕ ವಸ್ತುಗಳ ಮಾಧ್ಯಮದ ಕಲಾಕೃತಿಗಳು ರಚಿಸುತ್ತಾರೆ. ಹಾಗೂ ಬೇರೆ ಬೇರೆ ಹಬ್ಬಗಳ ಸಂದರ್ಭಗಳಿಗೆ ಅನುಸಾರವಾಗಿ ಕಲಾಕೃತಿಗಳನ್ನು ತಯಾರಿಸುತ್ತಾರೆ ಹಾಗೂ ಮಾರಾಟವನ್ನೂ ಮಾಡುತ್ತಾರೆ.

ಗೋಪಾಳ ಗಂಗಪ್ಪ ಚಿತ್ರಗಾರ ಇವರು ತಮ್ಮ ತಂದೆಯ ಕಲೆಯಿಂದ ಪ್ರೇರಿತಗೊಂಡು ಚಿತ್ರಕಲೆಯನ್ನು ಮುಂದುವರೆಸಿಕೊಂಡು ಬಂದರು. ಹಾಗೂ ಗೋಪಾಳ ಇವರ ಪತ್ನಿಯಾದ ಪ್ರೇಮಾ ಚಿತ್ರಗಾರ, ಇವರು ಗೋಕಾಕ್‌ನ ಜಿನಗಾರ ಮನೆತನದಿಂದ ಬಂದಿದ್ದಾರೆ. ಹಾಗಾಗಿ ಈ ಚಿತ್ರಗಾರ ಮನೆತನದಲ್ಲಿ ಕಲೆಯು ಸಮೃದ್ಧಿಗೊಂಡಿದೆ. ಅಷ್ಟೆ ಅಲ್ಲದೇ ಇವರು ತಮ್ಮ ಮಕ್ಕಳಿಗೂ ಸಹ ಕಲೆಯ ಬಗ್ಗೆ ಆಸಕ್ತಿಯನ್ನು ಬೆಳಸಿದ್ದಾರೆ. ಹೇಗೆಂದರೆ ತಮ್ಮ ಮಕ್ಕಳಿಗೆ ಕಲಾಶಿಕ್ಷಣವನ್ನು ಕೊಡಿಸಿ ಕಲಾವಿದರನ್ನಾಗಿ ಮಾಡಿದ್ದಾರೆ. ಇವರ ಒಬ್ಬ ಮಗ ಅಶೋಕ ಎಂಬುವವರು ಕಲಾಶಿಕ್ಷಕನಾಗಿ (ಆನಿಗೋಳ ಬೈಲಹೊಂಗಲ ತಾಲೂಕು) ಕಾರ್ಯ ನಿರ್ವಹಿಸುತ್ತಿದ್ದಾರೆ. ಜೊತೆ ಜೊತೆಗೆ ತಮ್ಮ ವಂಶವೃತ್ತಿಯ ಕಲೆಗೆ ಹೊಸ ಮೆರಗನ್ನು ನೀಡುತ್ತಿದ್ದಾರೆ.

ಗೋಪಾಳ ಗಂಗಪ್ಪ ಚಿತ್ರಗಾರ ಅವರ ಇನ್ನೊಬ್ಬ ಮಗ ಕಾಶಿನಾಥ ಎಂಬುವವರು ತಂದೆಯ ಜೊತೆ ತಮ್ಮ ವಂಶವೃತ್ತಿಯಾದ ಜನಪದ ಶಿಲ್ಪಗಳಲ್ಲಿ ಚಿತ್ರಕಲೆಯನ್ನು ಮುಂದುವರೆಸಿದ್ದಾರೆ. ಇವರು ಹೆಚ್ಚಾಗಿ ಮರ ಮಾಧ್ಯಮದ ಕಲಾಕೃತಿಗಳನ್ನು ರಚನೆ ಮಾಡುತ್ತಾರೆ. ಅವುಗಳಲ್ಲಿ ಗ್ರಾಮದೇವತೆಗಳಾದ ದ್ಯಾಮವ್ವ, ದುರ್ಗವ್ವಾ ಅಥವಾ ಶಕ್ತಿ ದೇವತೆಗಳು ಮತ್ತು ಕಾಮ ರತಿಯಂತಹ ಕಟ್ಟಿಗೆಯ ಗೊಂಬೆಗಳನ್ನು ತಯಾರಿಸುತ್ತಾರೆ. ಅಲ್ಲದೇ ಈ ದೇವತೆಯ ಹಿಂಬದಿಯಲ್ಲಿರುವ ಪ್ರಭಾವಳಿಯ ಮೇಲೆ ಸುಂದರವಾದ ದೇವಾನು ದೇವತೆಯರ ಚಿತ್ರಗಳನ್ನು ರಚಿಸುತ್ತಾರೆ. ಹಾಗೂ ವಿಷ್ಣುವಿನ ದಶಾವತಾರಗಳು ಹೀಗೆ ಇನ್ನೂ ಮುಂತಾದ ಚಿತ್ರಗಳನ್ನು ತಮ್ಮ ಕೌಶಲದಿಂದ ವರ್ಣ ಸಂಯೋಜನೆ ಮಾಡುತ್ತಾರೆ.

**ಕಲಾಕೃತಿಯ ರಚನಾ ಪರಿಕರಗಳು :**

ಈ ಬೈಲಹೊಂಗಲದ ಕರಕುಶಲ ಕಲಾಕೃತಿಯ ತಯಾರಿಕೆಗಾಗಿ ಇವರು ಬಳಸುವಂತಹ



# ಬೈಲಹೊಂಗಲದ ಮರ ಮಾಧ್ಯಮ ಕಲಾಕೃತಿಗಳು













ಪ್ರಭಾಬವಳಿ ಮತ್ತು ಅವುಗಳಲ್ಲಿಯ ದೈವ ಸಂಬಂಧಿ ಚಿತ್ರಗಳು



# ಬೈಲಹೊಂಗಲದ ಮರ ಮಾಧ್ಯಮ ಕಲಾಕೃತಿಗಳು



ಮನ್ಮಥ ಮತ್ತು ರತಿಯ ಕಲಾಕೃತಿಗಳು





ದೇವತೆಯ ಕಲಾಕೃತಿಗಳು



# ಬೈಲಹೊಂಗಲದ ಮಣ್ಣು ಮಾಧ್ಯಮ ಕಲಾಕೃತಿಗಳು



ವೈಷ್ಣವಿ





ಗಣೇಶನ ಕಲಾಕೃತಿಗಳು



ಪರಿಕರಗಳಲ್ಲಿ ಐದು ಬಗೆಯ ಕಟ್ಟಿಗೆಗಳನ್ನು ಬಳಸುತ್ತಾರೆ. ಅವುಗಳು ಶಿವಾನಿ ಕಟ್ಟಿಗೆ, ಸಾಗವಾನಿ ಕಟ್ಟಗೆ, ಅತ್ತಿಕಟ್ಟಿಗೆ ಮತ್ತು ರಕ್ತಹೊಣ್ಣಿ ಕಟ್ಟಿಗೆ. ಈ ಕಟ್ಟಿಗೆಗಳಿಂದ ಕಲಾಕೃತಿಗಳನ್ನು ತಯಾರಿಸಲು ಬಳಸುವ ಇನ್ನೂಳಿದ ಪರಿಕರಗಳೆಂದರೆ ಉಳಿ, ಕೊಡತಿ, ಅರಣ, ಪಾಲಿಶ್ ಕಾಗದಗಳು, ಅಂಟು, ಲಾಂಬಿ, ಚಾಕ್‌ಪೌಡರ್, ಬಣ್ಣಗಳು ಹಾಗೂ ಕುಂಚಗಳು ಹೀಗೆ ಇಂತಹ ಕಲಾಪರಿಕರಗಳನ್ನು ಬೈಲಹೊಂಗಲದ ಕರಕುಶಲ ಕಲಾಕೃತಿಯ ತಯಾರಿಕೆಗೆ ಬಳಸಲಾಗುತ್ತದೆ.

**ಸಿದ್ಧತಾ ವಿಧಿ–ವಿಧಾನ :**

ಈ ಮರಗಳ ಕಟ್ಟಿಗೆಗಳನ್ನು ಮೊದಲು ಚೆನ್ನಾಗಿ ಒಣಗಿಸುಕೊಂಡು ವಸ್ತುಗಳ ವಿಷಯಕ್ಕೆ ಅನುಗುಣವಾಗಿ ವರ್ಗೀಕರಿಸಿಕೊಂಡು ಕಟ್ಟಿಗೆಯನ್ನು ಆ ವಸ್ತುವಿಷಯಕ್ಕೆ ತಕ್ಕಂತೆ ಆಕಾರ ಬರುವ ಹಾಗೆ ಕೊರೆದುಕೊಳ್ಳುತ್ತಾರೆ. ನಂತರ ಆ ಕಟ್ಟಿಗೆಯನ್ನು ಬಾಚಿ ಅಥವಾ ಉಚಕೊಡ್ಡ ಎಂಬ ಸಾಧನದಿಂದ ನಯಗೊಳಿಸುತ್ತಾರೆ. ನಯಗೊಳಿಸಿದ ಕಟ್ಟಿಗೆಯ ತುಂಡನ್ನು ಉಳಿ ಮತ್ತು ಕೊಡತಿ ಎಂಬ ಉಪಕರಣದಿಂದ ಆಕೃತಿಯನ್ನು ಸಿದ್ಧಪಡಿಸುತ್ತಾರೆ. ಈ ಸಿದ್ಧಪಡಿಸಿದ ಆಕೃತಿಗಳ ಪಾಲಿಶ್ ಕಾಗದದಿಂದ ಉಜ್ಜಿ ನುಣುಪುಗೊಳಿಸುತ್ತಾರೆ. ಒಟ್ಟಾರೆ ಹೇಳುವುದಾದರೆ ಈ ಕೃತಿಯು ಪೂರ್ಣ ಪ್ರಮಾಣದ್ದಾಗಿರುವುದಿಲ್ಲ. ಎಲ್ಲ ಅಂಗಾಗಗಳು ಬೇರೆ ಬೇರೆಯಾಗಿರುತ್ತವೆ. ಉದಾಹರಣೆಗೆ ಕೈ, ಕಾಲು, ಮುಖ, ಪೀಠ ಮುಂತಾದ ವಿಧಗಳಲ್ಲಿ ತಯಾರಿಸಲಾಗುತ್ತದೆ. ಹೀಗೆ ಬೇರೆ ಬೇರೆಯಾದ ಆಕೃತಿಯ ಭಾಗಗಳಲ್ಲಿರುವ ಬಿರುಕು, ತಗ್ಗುಗಳನ್ನು ಲಾಂಬಿಯಿಂದ ತುಂಬಿಕೊಂಡು ಆರಲು ಬಿಡುತ್ತಾರೆ. ಆರಿದ ಆಕೃತಿಗಳ ಭಾಗಗಳಿಗೆ ನೀರಿನಲ್ಲಿ ಮಿಶ್ರಣಗೊಳಿಸಿಕೊಂಡ ಪುಡಿಬಣ್ಣದಲ್ಲಿ ಅಂಟನ್ನು ಬೆರೆಸುತ್ತಾರೆ.

ಈ ಆಕೃತಿಗಳ ಅನುಗುಣವಾಗಿ ಬಣ್ಣಗಳ ಬಳಕೆಯನ್ನು ಮಾಡುತ್ತಾರೆ. ನಂತರ ಲೇಪನ ಮಾಡಿದ ಬಣ್ಣಗಳ ಮೇಲೆ ಕ್ಲಿಯರ್ ವಾರ್ನಿಸ್ ಹಚ್ಚುತ್ತಾರೆ. ಈ ಕ್ಲಿಯರ್ ವಾರ್ನಿಸ್ ಲೇಪಿಸುವುದರಿಂದ ಆಕೃತಿಗಳಲ್ಲಿ ಹೊಳಪು ಬರುತ್ತದೆ. ಹಾಗೂ ಇವರು ರಚಿಸುವಂತಹ ಕಲಾಕೃತಿಗಳು ದೈವಶಿಲ್ಪಗಳಾಗಿರುವುದರಿಂದ ಇವುಗಳಿಗೆ ಬಂಗಾರ ಮತ್ತು ಬೆಳ್ಳಿ ಬಣ್ಣಗಳನ್ನು ಬಳಸುವುದು ಸಹಜ. ಅದಕ್ಕಾಗಿ ಬೆಳ್ಳಿ ಮತ್ತು ಬಂಗಾರಕ್ಕೆ ತವರ ಬಳಸುತ್ತಾರೆ. ಈ ತವರ ಎನ್ನುವುದನ್ನು ಮರಾಠಿ ಭಾಷೆಯಲ್ಲಿ ಕತಿಲು ಎಂದು ಕರೆಯುವರು. ಆದರೆ ಪ್ರಸ್ತುತದಲ್ಲಿ ಆದಾಯದ ಅಭಾವದಿಂದ ಈ ಮೇಲೆ ಹೇಳಿದ ಬಣ್ಣಗಳ ಬದಲಾಗಿ ಮಾರುಕಟ್ಟೆಯಲ್ಲಿ ಲಭ್ಯವಿರುವ ರಾಸಾಯನಿಕ ಬಣ್ಣಗಳನ್ನು ಬಳಸುತ್ತಿದ್ದಾರೆ. ಚಿತ್ರಗಾರ ಕುಟುಂಬದ ಹಿರಿಯ ಕಲಾವಿದರಾದ ಗೋಪಾಳ ಗಂಗಪ್ಪ ಚಿತ್ರಗಾರ ರವರು ಹೇಳಿಕೆಯಂತೆ, ಇವರು ರಚಿಸುತ್ತಿದ್ದಂತಹ ಮರ ಮಾಧ್ಯಮದ ಗ್ರಾಮದೇವತೆಯ ಶಿಲ್ಪ ಮತ್ತು ಮಣ್ಣು ಮಾಧ್ಯಮದ ಶಿಲ್ಪಗಳಲ್ಲಿ ಆಧುನಿಕತೆಯ ಪ್ರಭಾವದಿಂದ ಹಾಗೂ ಆದಾಯದ ಅಭಾವದಿಂದ



# ಬೈಲಹೊಂಗಲದ ಕಲಾವಿದ ಕುಟುಂಬ



ಗೋಪಾಳ, ಚಿತ್ರಗಾರ ಮತ್ತು ಅವರ ಧರ್ಮ ಪತ್ನಿ ಪ್ರೇಮಾ



ಪ್ಲಾಷ್ಟರ್ ಆಫ್ ಪ್ಯಾರೆಸ್ ಮಾಧ್ಯಮದ ಗಣೇಶನ ಮೂರ್ತಿಗಳು



ಮಣ್ಣು ಮಾಧ್ಯಮದ ಗಣೇಶನ ಮೂರ್ತಿಗಳು



ಅವುಗಳಿಗೆ ಬಳಸುತ್ತಿದ್ದ ವರ್ಣಗಳಲ್ಲಿ ಕೊಂಚ ಬದಲಾವಣೆ ಮಾಡಿಕೊಂಡಿದ್ದಾರೆ.

ತಯಾರಾದ ಶಿಲ್ಪದ ಬಿಡಿ ಭಾಗಗಳನ್ನು ಆಕೃತಿಗೆ ಅನುಗುಣವಾಗಿ ಜೋಡಿಸಿ ಪೂರ್ಣ ರೂಪವನ್ನು ನೀಡುತ್ತಾರೆ. ರಚನೆಗೊಂಡ ಶಿಲ್ಪದ ಹಿಂಭಾಗದಲ್ಲಿ ಪ್ರಭಾವಳಿಯನ್ನು ರಚಿಸಿ, ಪ್ರಭಾವಳಿಯ ಸುತ್ತಲೂ ದೈವ ಸಂಬಂಧಿ ಚಿತ್ರಗಳನ್ನು ಚಿತ್ರಿಸಲಾಗುತ್ತದೆ. ಉದಾಹರಣೆಗೆ ವಿಷ್ಣುವಿನ ವರಹಾವತಾರ ದೃಶ್ಯಗಳು, ಸರಸ್ವತಿ, ಲಕ್ಷ್ಮೀ, ಇನ್ನೂ ಮುಂತಾದ ದೃಶ್ಯಗಳನ್ನು ಈ ಪ್ರಭಾವಳಿಗಳಲ್ಲಿ ರಚಿಸಲಾಗುತ್ತದೆ. ಇಲ್ಲಿರುವ ಕಲಾವಿದರು ಮರ ಮಾಧ್ಯಮವಲ್ಲದೇ ಮಣ್ಣು ಮಾಧ್ಯಮದಲ್ಲೂ ಶಿಲ್ಪಗಳನ್ನು ರಚಿಸುತ್ತಾರೆ. ಉದಾಹರಣೆಗೆ ಗಣೇಶ, ಗೌರಿ, ಶಿವ ಹಾಗೂ ವೈಷ್ಣವಿ ಇವುಗಳಲ್ಲಿಯೂ ಸಹ ತಮ್ಮ ವರ್ಣ ಸಂಯೋಜನೆಯ ಕೌಶಲ್ಯತೆಯು ಗಮನಾರ್ಹವಾದುದು. ಹಾಗೂ ಇವರು ಸುತ್ತಮೂತ್ತಲಿನ ಹಳ್ಳಿಗಳಲ್ಲಿರುವ ಗ್ರಾಮದೇವತೆಯ ಶಿಲ್ಪಗಳಿಗೆ ವರ್ಣಸಂಯೋಜನೆಯನ್ನು ಮಾಡುತ್ತಾರೆ. ಏಕೆಂದರೆ ಈ ಕಲಾವಿದರು ವರ್ಣ ಲೇಪನದಲ್ಲಿ ಬಹಳಷ್ಟು ಪರಿಣಿತರು, ಅನುಭವಿಗಳಾಗಿರುವುದರಿಂದ ಸುತ್ತ ಮುತ್ತಲಿನ ಗ್ರಾಮಗಳಲ್ಲಿ ಬೇಡಿಕೆ ಇರುವುದು ಕಂಡುಬರುತ್ತದೆ. ಇನ್ನೂಳಿದ ಕಲಾವಿದರುಗಳಾದ ಅಶೋಕ ಚಿತ್ರಗಾರ, ಕಾಶಿನಾಥ ಚಿತ್ರಗಾರ, ಗೋವಿಂದ ಅಣ್ಣಪ್ಪ ಚಿತ್ರಗಾರ, ಅಣ್ಣಪ್ಪ ಚಿತ್ರಗಾರ, ಶಿವಪ್ಪ ಚಿತ್ರಾಗಾರ, ರಾಮಪ್ಪ ಚಿತ್ರಗಾರ ಮತ್ತು ಮಹಾದೇವ ಚಿತ್ರಗಾರ ಇವರೆಲ್ಲರೂ ಚಿತ್ರಕಲೆಯಲ್ಲಿ ತೊಡಗಿರುತ್ತಾರೆ. ಇದೇ ಮನೆತನದ ಕಲಾವಿದರು ಬೆಳಗಾವಿ ಜಿಲ್ಲೆಯ ಪಾಶ್ಚಾಪೂರದಲ್ಲಿ ಪ್ರಸ್ತುತದಲ್ಲಿ ದುರುಗಮುರಗಿ ಪೆಟ್ಟಿಗೆಯ ಮೇಲೆ ಚಿತ್ರಗಳನ್ನು ರಚಿಸುವ ಕಲೆಯನ್ನು ಹುಟ್ಟುಹಾಕಿದ್ದಾರೆ.

**೩. ಪಾಶ್ಚಾಪುರ ಜನಪದ ಚಿತ್ರಕಲೆ :**

ಬೆಳಗಾವಿ ಜಿಲ್ಲೆಯ ಗೋಕಾಕ್ ಕಾಷ್ಠಕಲೆ, ಬೈಲಹೊಂಗಲ ಜನಪದ ಶಿಲ್ಪಗಳ ಮೇಲೆ ಚಿತ್ರಕಲೆ ಹಾಗೆಯೇ ಗೋಕಾಕ್ ತಾಲೂಕಿನ ಪಾಶ್ಚಾಪುರ ಇದು ಕೂಡ ಚಿತ್ರಕಲೆಗೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಈ ಊರಿನಲ್ಲಿ ಇದೊಂದೇ ಮನೆಯಲ್ಲಿ ಇಂತಹ ಚಿತ್ರಗಳು ಕಂಡುಬರುತ್ತವೆ. ಪಾಶ್ಚಾಪುರದ ಮಹಾದೇವ ರಾಮಚಂದ್ರ ಚಿತ್ರಗಾರಚಿತ್ರಗಾರ ಎಂಬುವವರು ಪ್ರಮುಖ ಕಲಾವಿದರಾಗಿದ್ದಾರೆ. ಇವರು ಚಿತ್ರಗಾರರ ವಂಶದವರಾಗಿದ್ದು, ಜನಪದ ಚಿತ್ರಕಲೆಯಲ್ಲಿ ಸಾಕಷ್ಟು ಪರಿಣಿತಿಯನ್ನು ಪಡೆದಿದ್ದಾರೆ. ಇವರು ಜನಪದ ಶಿಲ್ಪಗಳಾದ ಗುರ್ಗವ್ವಾ, ದ್ಯಾಮವ್ವಾ ಇನ್ನೂ ಮುಂತಾದ ಗ್ರಾಮದೇವತೆಗಳ ವರ್ಣಸಂಯೋಜನೆಯ ವೃತ್ತಿಯನ್ನು ಮಾಡುತ್ತಾ ಬಂದಿದ್ದಾರೆ. ಮುಂದೆ ಕಲಾಂತರದಲ್ಲಿ ಹಾಗೂ ಜನರ ಬೇಡಿಕೆಗನುಸಾರವಾಗಿ ದುರುಗಮುರಗಿ ಪೆಟ್ಟಿಗೆಯ ಮೇಲೆ ಚಿತ್ರಗಳನ್ನು ಮತ್ತು ಕೆಲವೊಮ್ಮೆ ದೇವರ ಪಲ್ಲಕ್ಕಿಯ ಮೇಲೆ ಚಿತ್ರಗಳನ್ನು ರಚಿಸುವುದು ಪ್ರಸ್ತುತದಲ್ಲಿ ಕಂಡುಬರುತ್ತದೆ.

ದುರುಗಮುರಗಿ ಪೆಟ್ಟಿಗೆಯ ಚಿತ್ರಗಳು ಹಾಗೂ ಪಲ್ಲಕ್ಕಿಯ ಮೇಲೆ ಚಿತ್ರಗಳು ಹೆಸರುವಾಸಿಯಾದವು. ಇವರು ಇವೇ ಚಿತ್ರಗಳು ಹೆಚ್ಚಿನ ಪ್ರಮಾಣದಲ್ಲಿ ರಚಿಸಲಾರಂಭಿಸಿದರು.



ಈ ಪೆಟ್ಟಿಗೆಯನ್ನು ದುರುಗಮುರಗಿಯ ಗುಡಿ ಎಂದು ಸಹ ಕರೆಯುತ್ತಾರೆ. ಇಲ್ಲಿರುವ ಕಲಾವಿದರು ಬಹುಮುಖ ಪ್ರತಿಭೆಯುಳ್ಳವರಾಗಿದ್ದಾರೆ. ಅಂದವಾದ, ಆಕರ್ಷಕವಾದ ಇವರು ರಚಿಸಿದ ಚಿತ್ರಗಳು ಜನಮನವನ್ನು ಗೆದ್ದಿವೆ.

ಪಾಶ್ಚಾಪುರದ ಕಲಾವಿದರು ದುರುಗಮುರಗಿ ಗುಡಿಯ ಬಣ್ಣ ತಯಾರಿಕೆಗೆ ಪ್ರಸಿದ್ಧಿ ಮಾತ್ರವಲ್ಲದೇ, ಗುಡಿಯನ್ನು ಇಡಿಯಾಗಿ ವರ್ಣವಿನ್ಯಾಸಗೊಳಿಸುತ್ತಾರೆ. ಈ ಗುಡಿಯ ಸುತ್ತಲೂ ಸ್ವರ್ಗ, ನರಕದ ಚಿತ್ರ, ಯಮಲೋಕ, ನರಕಲೋಕದಲ್ಲಿ ಕೊಡುವ ಉಗ್ರ ಶಿಕ್ಷೆಯ ಚಿತ್ರಗಳು, ಸ್ವರ್ಗ ಲೋಕದ ಸುಂದರ ಚಿತ್ರಗಳು ಕಂಡುಬರುತ್ತವೆ. ಇನ್ನೂ ಕೆಲವು ಸಲ ದೇವಿಯ, ಸ್ಥಳೀಯ ದೇವರು, ರಾಮಾಯಣ, ಮಹಾಭಾರತ ಹಾಗೂ ದಶಾವತಾರದ ಚಿತ್ರಗಳು ಅಧಿಕವಾಗಿ ಚಿತ್ರಿಸಲ್ಪಟ್ಟಿರುತ್ತದೆ. ಇವು ಗುಡಿಯ ಸುತ್ತಲೂ ಚಿತ್ರಕಲೆಯನ್ನು ರಚಿಸುವಾಗ ಬಳಸುವಂತಹ ವಸ್ತುವಿಷಯಗಳಾಗಿವೆ.

**ಕಲಾಕೃತಿ ರಚನಾ ಪರಿಕರಗಳು ಮತ್ತು ವಿಧಾನ :**

ಈ ಪಾಶ್ಚಾಪುರದ ಕಲಾವಿದರು ಕಲಾಕೃತಿಯ ರಚನೆಯಲ್ಲಿ ಬಳಸುವಂತಹ ಪರಿಕರಗಳೆಂದರೆ ಅವುಗಳಲ್ಲಿ, ಕಟ್ಟಿಗೆ, ಲೋಹ, ಬಣ್ಣ, ಕುಂಚಗಳು, ಅರಿದಾಳಕಾಯಿಯ ಅಂಟು, ಅಗಸಿಎಣ್ಣೆ, ಬಿಳಿಯರಾಳ ಹಾಗೂ ಕೆಂಪುರಾಳ ಹೀಗೆ ಇವೆಲ್ಲವನ್ನು ಸಂಗ್ರಹಿಸಿಕೊಳ್ಳುತ್ತಿದ್ದರು ಎಂಬುದು ತಿಳಿದುಬರುತ್ತದೆ. ಇವರು ಅಗಸಿಎಣ್ಣೆ, ಬಿಳಿರಾಳ, ಕೆಂಪುರಾಳ ಸಂಮಿಶ್ರಣದಿಂದ ತಯಾರಿಸಿದ ಬಣ್ಣಕ್ಕೆ ಗೋಳಿ ಎನ್ನುತ್ತಾರೆ. ಇನ್ನು ಕೆಲವು ಸಲ ಬಣ್ಣದ ಹುಡಿಯಲ್ಲಿ ಅಂಟು ಸೇರಿಸಿ, ನೀರಿನಲ್ಲಿ ಮಿಶ್ರಣ ಮಾಡಿಯೂ ಬಣ್ಣವನ್ನು ತಯಾರಿಸುತ್ತಾರೆ. ಎಲ್ಲವನ್ನು ಬಳಸಿಕೊಂಡು ಈ ಯಮಲೋಕ, ನರಕ, ಸ್ವರ್ಗ, ರಾಮಾಯಣ, ಮಹಾಭಾರತ ಹೀಗೆ ಇನ್ನೂ ಮುಂತಾದ ಚಿತ್ರಗಳನ್ನು ಕುಟುಂಬದ ಸದಸ್ಯರೆಲ್ಲರೂ ಸೇರಿಕೊಂಡು ಈ ವೃತ್ತಿಯನ್ನು ಮಾಡುತ್ತಾರೆ.

ಒಟ್ಟಾರೆ ಬೆಳಗಾವಿ ಜಿಲ್ಲೆಯ ಕರಕುಶಲ, ಜನಪದ ಚಿತ್ರ ಮತ್ತು ಶಿಲ್ಪ ಕಲಾವಿದರು ಎಲ್ಲರೂ ಒಂದೇ ಮನೆತನದವರಾಗಿದ್ದಾರೆ. ಹೇಗೆಂದರೆ ಇವರೆಲ್ಲರೂ ಒಂದು ಮನೆಯಿಂದ ಇನ್ನೊಂದು ಮನೆಗೆ ಸಂಬಂಧವನ್ನು ಬೆಳೆಸಿಕೊಂಡಿರುವರಾಗಿದ್ದಾರೆ. ಉದಾಹರಣೆಗೆ ಗೋಕಾಕ್ ಜಿನಗಾರ ಮನೆಯ ಹೆಣ್ಣುಮಗಳು ಪ್ರೇಮಾ ಎಂಬುವವರು, ಬೈಲಹೊಂಗಲದ ಚಿತ್ರಗಾರ ಮನೆಯ ಗೋಪಾಳ ಗಂಗಾಧರ ಚಿತ್ರಗಾರ ಅವರ ಮಡದಿಯಾಗಿ ಬಂದಿದ್ದಾರೆ. ಅಲ್ಲದೇ ಬೈಲಹೊಂಗಲದ ಗೋಪಾಳ ಅವರಿಗೆ, ಪಾಶ್ಚಾಪುರದ ಮಹಾದೇವ ಅವರು ಸೋದರ ಸಂಬಂಧಿಯಾಗುತ್ತಾರೆ. ಹಾಗಾಗಿ ಎಲ್ಲರೂ ಒಂದೇ ಮನೆತನದವರಾಗಿದ್ದು, ಪೂರ್ವಜರು ನೀಡಿದ ಕಲೆಯ ಕೊಡುಗೆಯನ್ನೂ ಮುಂದುವರೆಸಿಕೊಂಡು ಪ್ರಸ್ತುತದಲ್ಲಿ ಈ ಎಲ್ಲ ಮನೆತನದ ಕಲಾವಿದರು ಉಳಿಸಿಕೊಂಡು ಬಂದಿರುವುದು ಪ್ರಸಂಶನೀಯ.



ಪ್ರಾಗೈತಿಹಾಸಿಕ ಕಾಲದಿಂದ ಜನಪದರ ಕಲೆಯಾಗಿ ಚಿತ್ರಕಲೆ ಬೆಳೆದು ಬಂದಿರುವುದನ್ನು ಮನಗಾಣಬಹುದು. ಈ ಜನಪದ ಚಿತ್ರಕಲೆಯ ಮುಂದಿನ ಬೆಳವಣಿಗೆಯಾದ ಕರಕುಶಲ ಕಲೆಯನ್ನು ಬೆಳಗಾವಿ ಜಿಲ್ಲೆಯ ಗೋಕಾಕ್, ಪಾಶ್ಚಾಪುರ, ಬೈಲಹೊಂಗಲ, ದೇಶನೂರ, ನೇಸರಗಿ, ವಣ್ಣೂರ, ಕಡಬಿ ಶಿವಾಪುರ, ಹೂಲಿ, ಇವು ಜನಪದ ಚಿತ್ರಕಲೆಯ ಹಿನ್ನೆಲೆಯ ಕರಕುಶಲ ಕಲೆಯ ಪ್ರಮುಖ ಕೇಂದ್ರಗಳಾಗಿವೆ. ಇವುಗಳು ಅಲ್ಲದೇ ಇನ್ನೂ ಮುಂತಾದ ಸ್ಥಳಗಳಲ್ಲಿ ಕಿಟ್ಟದ ಗೊಂಬೆಗಳನ್ನು, ಹಚ್ಚೆ, ಕಸೂತಿ, ಮದರಂಗಿ, ಕೌದಿ, ತೊಗಲು ಗೊಂಬೆ, ಶೀಗಿ ಚಿತ್ರಕಲೆ ಇಂತಹ ಜನಪದ ಚಿತ್ರಕಲೆಯನ್ನು ಪ್ರಸ್ತುತದಲ್ಲಿರುವುದನ್ನು ಕಾಣಬಹುದು. ಆದರೆ ಕಿಟ್ಟದ ಗೊಂಬೆಗಳನ್ನು, ರಂಗಪರದೆಯ ಚಿತ್ರಗಳು, ತೊಗಲು ಗೊಂಬೆಯ ಚಿತ್ರಗಳನ್ನು ತಯಾರಿಸುವಂತಹ ಕಲೆ ಇಂದು ಕುಂಟಿತಗೊಳ್ಳುತ್ತ ಸಾಗುತ್ತಿರುವುದು ಶೋಚನೀಯ.

* * * * *



ಭಿತ್ತಿಚಿತ್ರವನ್ನು ಆಂಗ್ಲಭಾಷೆಯಲ್ಲಿ "Mural Painting" ಎಂದು ಕರೆಯಲಾಗಿದೆ. ಈ Mural ಶಬ್ದವು ಲ್ಯಾಟಿನ್ ಭಾಷೆಯ 'Murus' ದಿಂದ ಬಂದಿದೆ. Murus ದ ಅರ್ಥವು ಗೋಡೆ ಎಂದರ್ಥ. ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಗೋಡೆಯ ಮೇಲೆ ಗಾರೆಯ, ಸಿಮೇಂಟಿನ ಉಬ್ಬು ಶಿಲ್ಪಾಕೃತಿಗಳು ಹೀಗೆ ಇತರ ಯಾವುದೇ ವಿಧಾನದಿಂದ ಗೋಡೆಯ ಮೇಲೆ ರೂಪಿಸಿದ ಚಿತ್ರಗಳು Mural ವ್ಯಾಪ್ತಿಯಲ್ಲಿ ಬರುತ್ತದೆ ಎಂದು ಕ್ಯಾಂಬ್ರಿಜ್ ವಿಶ್ವಕೋಶ ತಿಳಿಸುತ್ತದೆ. ಗೋಡೆ ಮತ್ತು ಮೇಲ್ಛಾಣಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು ಆಕ್ಸಫರ್ಡ ಶಬ್ಧಕೋಶದಲ್ಲಿ ಹೇಳಲಾಗಿದೆ. ಗೋಡೆಗಳು, ಮೇಲ್ಛಾವಣಿಗಳು ಮತ್ತು ಗುಹೆಗಳನ್ನು ಪ್ರೆಸ್ಕೊ, ಸೆಸ್ಕೋ, ತೈಲವರ್ಣ, ಟೆಂಪರಾ, ಇಲ್ಲವೆ ಎನ್‌ಕ್ಯಾಸ್ಟಕ್ ವಿಧಾನಗಳಿಂದ ಚಿತ್ರ ರಚಿಸಿ ಅಲಂಕರಿಸುವ ವಿಧಾನವನ್ನು ಸಹ ಭಿತ್ತಿಚಿತ್ರಕಲೆ ಎಂದು ವಬ್‌ಸ್ಟರ್ಸ್ ನ್ಯೂ ವರ್ಲ್ಡಸೈಕೋಪಿಡಿಯಾ ಪರಿಗಣಿಸಿದೆ. ಗೋಡೆ ಮತ್ತು ಮೇಲ್ಛಾವಣಿಗಳ ಮೇಲೆ ವರ್ಣದಿಂದ ರಚಿಸಿದ ಚಿತ್ರಗಳು ಮತ್ತು ಬಣ್ಣದ ಕಲ್ಲಿನ ತುಂಡುಗಳನ್ನು (ಸೂಡುಬಿಲ್ಲೆ) ಅಂಟಿಸಿದ ಮೊಸಾಯಿಕ್ ಚಿತ್ರಗಳು ಕೂಡ ಭಿತ್ತಿಚಿತ್ರಗಳ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತವೆ ಎಂದು ಬ್ರಿಟಾನಿಕಾ ಎನ್‌ಸೈಕ್ಲೋಪಿಡಿಯಾ ಹೇಳುತ್ತದೆ.[೧]

---

೧. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕ ಭಿತ್ತಿ ಚಿತ್ರಕಲೆ, ಪಿಹೆಚ್.ಡಿ. ಮ.ಪ್ರ. ಪು. ೨೫



ಕನ್ನಡ ಜಾನಪದ ವಿಶ್ವಕೋಶವು ಭಿತ್ತಿಚಿತ್ರ ಎಂದರೆ ಗೋಡೆಯ ಮೇಲೆ ಬರೆದಿರುವ ಚಿತ್ರವೆಂದು ಹೇಳಿ, ಭಿತ್ತಿ ಎಂಬುದಕ್ಕೆ ಗೋಡೆ, ಕುಡ್ಯ, ಮೂಲ, ತಳ, ಹಿನ್ನೆಲೆ ಚಿತ್ರವನ್ನು ಬರೆಯುವ ಮೂಲಾಧಾರಗಳಾದ ಬಟ್ಟೆ, ಗೋಡೆ ಮೊದಲಾದ ಸಾಧನಗಳು ಎಂಬ ಅರ್ಥಗಳನ್ನು ಕೊಟ್ಟಿದೆ.[೧] ಭಾರತೀಯ ಪ್ರಾಚೀನ ಶಿಲ್ಪಶಾಸ್ತ್ರಗಳು ಚಿತ್ರ ಬರೆಯಲಾಗುವ ಮೂಲಾಧಾರವಾದ ಗೋಡೆ, ಚಿತ್ರಿಕರಣಕ್ಕಾಗಿ ಆಧಾರದ ಮೇಲೆ ಲೇಪಿಸಲಾಗುವ ಗಾರೆ ಲೇಪನ ಎರಡಕ್ಕೂ ಭಿತ್ತಿ ಎಂದೇ ಕರೆಯಲಾಗಿದೆ.[೩] ಗೋಡೆಯ ಮೇಲೆ ಲೇಪಿಸಲಾಗುವ ಗಾರೆ ಲೇಪನವನ್ನು ಭಿತ್ತಿ ಎಂದು ಪರಿಗಣಿಸಿದಾಗ ಗಾರೆ ಲೇಪನದ ಮೇಲೆ ರಚನೆಗೊಂಡ ಚಿತ್ರಗಳು 'ಭಿತ್ತಿಚಿತ್ರ' ಎಂದು ಹೇಳಬೇಕಾಗುವುದು. ವಿಶಾಲಾರ್ಥದಲ್ಲಿ ಈ ಲೇಪನವನ್ನು ಗೋಡೆಯ ಮೇಲೆ ಲೇಪಿಸಲಾಗುವ ಗಾರೆ ಮಿಶ್ರಣಕ್ಕೆ ಸೀಮಿತಗೊಳಿಸದೆ ಚಿತ್ರರಚನೆಯ ಪೂರ್ವದ ಯಾವುದೇ ಹಿನ್ನೆಲೆಯ ಲೇಪನಕ್ಕೂ ಅನ್ವಯಿಸಬಹುದಾಗಿದೆ.

ಕೆಲವು ಸಾಹಿತ್ಯ ಕೃತಿಗಳಲ್ಲಿ ಭಿತ್ತಿಚಿತ್ರಗಳ ಬಗ್ಗೆ ಪ್ರಾಸಂಗಿಕ ವಿವರಗಳಿರುವುದನ್ನು ಇಲ್ಲಿ ಕಾಣಬಹುದು.

'ಭಿತ್ತಿ ಇಲ್ಲದೇ ಬರೆಯಬಹುದೆ ಚಿತ್ತಾರವ,
ಭಿತ್ತಿಯೊಂದಿಲ್ಲದಿದ್ದರೆ ಚಿತ್ರವೆಂತಿರಲಾರದು
ಚಿತ್ರವಿಲ್ಲದೆ ಭಿತ್ತಿ ಸೊಗಸಹುದೆಂತು'[೪]
ದಿನೇಶ್ವರನಸೂತನ ರೂಪವು ಚಿತ್ರಂ ಬರೆದಂತಿರ್ಪುದು
ಚಿತ್ರ ಭಿತ್ತಿಯೊಳೆನ್ನಾ[೫]

ಎಂಬಂತ ಸಾಲುಗಳು ಭಿತ್ತಿ ಮತ್ತು ಭಿತ್ತಿಚಿತ್ರಗಳ ಬಗೆಗೆ ತಿಳಿಸುತ್ತದೆ. ಇವುಗಳ ಒಟ್ಟಾರೆ ಅರ್ಥ ಭಿತ್ತಿ ಎಂದರೆ ಚಿತ್ರವನ್ನು ಬರೆಯುವ ಮೂಲಾಧಾರವೆಂದು ಪರಿಗಣಿಸಬಹುದು. ಭಿತ್ತಿಚಿತ್ರವೆಂದರೆ ಗೋಡೆಯ ಮೇಲೆ ಬರೆದ ಚಿತ್ರವೆಂದು ಸಾಮಾನ್ಯವಾದ ತಿಳುವಳಿಕೆ ಇದ್ದರು, ಮೇಲಿನ ಸಾಲುಗಳಲ್ಲಿನ ವಿವರಣೆಯಿಂದ ಭಿತ್ತಿಚಿತ್ರವೆಂದರೆ ಬರೀ ಗೋಡೆಯ ಮೇಲೆ ರಚಿಸಿದ ಚಿತ್ರಗಳಲ್ಲದೆ ಯಾವುದೇ ಆಧಾರದ ಮೇಲೆ ರಚಿಸಿದ ಚಿತ್ರಗಳು ಭಿತ್ತಿಚಿತ್ರಗಳೆನಿಸುತ್ತವೆ.

---

೧. ಡಾ.ಚಂದ್ರಶೇಖರ ಕಂಬಾರ (ಸಂ) : ಜನಪದ ವಿಶ್ವಕೋಶ – ಭಾಗ–೧, ಪುಟ ೧೫೧.

೩. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕ ಭಿತ್ತಿ ಚಿತ್ರಕಲೆ, ಪಿಹೆಚ್.ಡಿ. ಮ.ಪ್ರ. ಪು.೧೫

೪. ಡಾ.ಪಿ.ವ್ಹಿ. ನಾರಾಯಣ : ವಚನ ಸಾಹಿತ್ಯ – ಒಂದು ಅಧ್ಯಯನ, ಪುಟ – ೩೭೯

೫. ಡಾ.ಎಸ್.ಸಿ. ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ – ೪೮



ಬೆಳಗಾವಿ ಜಿಲ್ಲೆಯಲ್ಲಿ ಭಿತ್ತಿಚಿತ್ರಕಲೆಗಳು ಅರಮನೆ, ಮಠ, ಚರ್ಚ್ ಮತ್ತು ಮನೆಗಳಲ್ಲಿ ಕಂಡುಬರುತ್ತವೆ. ಜಿಲ್ಲೆಯಲ್ಲಿ ಕಂಡುಬರುವಂತ ಭಿತ್ತಿಚಿತ್ರಗಳನ್ನು ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಅವುಗಳನ್ನು ಪ್ರಮುಖವಾಗಿ ಈ ಕೆಳಗಿನಂತೆ ವರ್ಗೀಕರಿಸಿ ವಿವೇಚಿಸಲಾಗಿದೆ.

೧. ವಾಡೆಗಳಲ್ಲಿನ ಭಿತ್ತಿಚಿತ್ರಗಳು.

೨. ಮಠಗಳಲ್ಲಿನ ಭಿತ್ತಿಚಿತ್ರಗಳು.

೩. ಚರ್ಚ್‌ಗಳಲ್ಲಿನ ಭಿತ್ತಿಚಿತ್ರಗಳು.

೪. ಮನೆಗಳಲ್ಲಿನ ಭಿತ್ತಿಚಿತ್ರಗಳು.

**೧. ವಾಡೆಗಳಲ್ಲಿನ ಭಿತ್ತಿಚಿತ್ರಗಳು :**

ಅ. ನಿಪ್ಪಾಣಿ ರಾಜವಾಡೆ

ಆ. ಅಥಣಿ ನಿಪ್ಪಾಣಿಕರ್ ವಾಡೆ

ಇ. ರಾಮದುರ್ಗದ ವಾಡೆ**ರಾಮದುರ್ಗದ ವಾಡೆ**

ಮಾನವನು ಬೆಟ್ಟಗುಡ್ಡಗಳಲ್ಲಿನ ಗುಹೆಗಳು, ಶಿಲಾಶ್ರಯಗಳಲ್ಲಿ ವಾಸಿಸುತ್ತಿದ್ದ ಸಂದರ್ಭದ ಭಿತ್ತಿಚಿತ್ರಗಳ ಸ್ವರೂಪ ಒಂದಾದರೆ, ಆತ ವ್ಯವಸಾಯ ಯೋಗ್ಯವಾದ ಬಯಲು ಪ್ರದೇಶಕ್ಕೆ ಬಂದು ನೆಲೆಸಿದ ನಂತರ ಆತ ರಚಿಸುತ್ತದ್ದ ಭಿತ್ತಿಚಿತ್ರಕಲೆಯ ಸ್ವರೂಪ ಬದಲಾಯಿತು. ಏಕೆಂದರೆ ಮಾನವನು ಕಂಡುಕೊಂಡ ಅನುಭವಗಳ ಅಭಿವ್ಯಕ್ತಿಯಾದ ಯಾವುದೇ ಕಲೆಯೂ ಇದ್ದಕ್ಕಿದ್ದಂತೆ ಶಿಷ್ಟ ರೂಪದಲ್ಲಿ ಪ್ರಕಟವಾಗಲಾರದು. ಜನಪದರ ಕಲೆಗಳೇ ಸಂಸ್ಕಾರಗೊಳ್ಳುತ್ತ ಶಿಷ್ಟ ರೂಪಪಡೆಯುತ್ತವೆ. ಹಾಗೆಯೇ ಭಿತ್ತಿ ಚಿತ್ರರಚನೆಯಲ್ಲಿ ನೀತಿ ನಿಯಮಗಳು, ಕಟ್ಟುಪಾಡುಗಳು, ಉದ್ದಗಲಗಳೆಂಬ ಪ್ರಮಾಣಗಳು, ಚಿತ್ರಗಳ ರಚನೆಯ ಶಾಸ್ತ್ರೀಯ ವಿಧಿ ವಿಧಾನಗಳು ರೂಪುತಾಳಿರಬಹುದಾದ ಸಾಧ್ಯತೆಗಳಿವೆ.

ಇಂತಹ ಚಿತ್ರಗಳು ಆ ಕಾಲದ ವಾಸ್ತುರಚನೆಗಳಲ್ಲಿ ಕಂಡುಬಂದಿರುದನ್ನು ತಜ್ಞರು ಗುರುತಿದ್ದಾರೆ. ಹಿಂದೆ ತಾನು ವಾಸಿಸುವ ನೆಲೆಗಳಾದ ಶಿಲಾಶ್ರಯ ತಾಣಗಳು, ಶಿಲಾಗುಹೆಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಿದಂತೆ ಬಯಲು ಪ್ರದೇಶದಲ್ಲಿ ನೆಲೆಸಿದ ಮಾನವನೂ ತನ್ನ ನಿವಾಸಗಳಾದ ಅರಮನೆ, ದೇವಾಲಯ, ಮಠಮಾನ್ಯಗಳು, ಚರ್ಚ್‌ಗಳು, ಮಸೀದಿಗಳು, ಸಮುದಾಯ ಭವನಗಳು ಮತ್ತು ಸಮಾಧಿಗಳು ಇನ್ನೂ ಮುಂತಾದ ಸ್ಥಳಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಿದ್ದನೆಂಬುದಕ್ಕೆ ಆಧಾರಗಳು ದೊರಕುತ್ತವೆ. ಇಂಥ ಶಿಷ್ಟ ಪರಂಪರೆಯ ಭಿತ್ತಿಚಿತ್ರಗಳ ಬೆಳವಣಿಗೆಯನ್ನೂ, ಸಾಮಾನ್ಯವಾಗಿ ಚಾಲುಕ್ಯರ ಭಿತ್ತಿಚಿತ್ರಗಳು ಕ್ರಿ.ಶ. ೭ ಮತ್ತು ೮ನೆಯ ಶತಮಾನದಲ್ಲಿ ರಚನೆಗೊಂಡರೆ ೮ ರಿಂದ ೧೦ನೆಯ ಶತಮಾನದಲ್ಲಿ



ರಾಷ್ಟ್ರಕೂಟರು ತಮ್ಮ ಕಾಲದಲ್ಲಿ ಭಿತ್ತಿಚಿತ್ರಗಳನ್ನು ಎಲ್ಲೋರಾದಲ್ಲಿ ರಚನೆ ಮಾಡಿರುವುದು ಕಂಡುಬರುತ್ತದೆ.[೧] ಈ ಹಿನ್ನೆಲೆಯಲ್ಲಿ ವಾಡೆಗಳಲ್ಲಿನ ಭಿತ್ತಿಚಿತ್ರಗಳನ್ನು ಇಲ್ಲಿ ಒಂದೊಂದಾಗಿ ವಿವರಿಸಲಾಗಿದೆ.

**ಅ. ನಿಪ್ಪಾಣಿ ರಾಜವಾಡೆ :**

ನಿಪ್ಪಾಣಿಯು ಬೆಳಗಾವಿ ಜಿಲ್ಲೆಯಲ್ಲಿದ್ದು ಮಹಾರಾಷ್ಟ್ರದ ಗಡಿಗೆ ಸಮೀಪಿಸುತ್ತದೆ. ಪ್ರಾರಂಭದಲ್ಲಿ ಬೆಳಗಾವಿಯ ಆಡಳಿತವನ್ನು ಗೋವಾದ ಕದಂಬರು ನಡೆಸುತ್ತಿದ್ದರು ಎಂಬುದು ಇತಿಹಾಸದಿಂದ ತಿಳಿಯಲಾಗಿದೆ. ಕ್ರಿ.ಶ.೧೩೩೦ರಲ್ಲಿ ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟ ಬೆಳಗಾವಿ ಜಿಲ್ಲೆಯು ರಾಜಕೀಯವಾಗಿ, ಧಾರ್ಮಿವಾಗಿ, ಸಾಂಸ್ಕೃತಿಕವಾಗಿ ಬೆಳೆಯುತ್ತಿದ್ದಂತೆಯೇ ಕ್ರಿ.ಶ.೧೪೩೦ ರಲ್ಲಿ ಬೆಳಗಾವಿಯು ಬಿಜಾಪುರದ ಆದಿಲ್‌ಷಾಹಿ ಆಡಳಿತಕ್ಕೊಳಪಟ್ಟಿತ್ತು. ನಂತರ ಕ್ರಿ.ಶ.೧೭೪೦ ರಲ್ಲಿ ಧಾರವಾಡ ಮತ್ತು ಬೆಳಗಾವಿ ಪ್ರದೇಶಗಳನ್ನು ಗೆದ್ದುಕೊಂಡು ಪೇಶ್ವೆಗಳು ಆಡಳಿತಕ್ಕೆ ಒಳಪಡಿಸಿಕೊಂಡರು.[೨] ಎಲ್ಲ ಕ್ಷೇತ್ರಗಳಲ್ಲಿ ಬೆಳವಣಿಗೆ ಹೊಂದಿದ್ದ ಈ ಪ್ರದೇಶದ ಮೇಲೆ ಬ್ರಿಟಿಷ್‌ರ ಕಣ್ಣು ಬಿದ್ದಿತು.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಒಂದು ಆಯೋಗವನ್ನು ರಚಿಸಿತು. ಅದರ ವರದಿ ಅನ್ವಯ ಕ್ರಿ.ಶ. ೧೭೯೯ ಜೂನ್ ೨೨ ರಂದು ಕನ್ನಡ ಪ್ರದೇಶಗಳ ವಿಭಜನೆಯಾಯಿತು. ಈ ಕರಾರಿನ ಉದ್ದೇಶ ನಿಜಾಮರು ಮತ್ತು ಮರಾಠರು ಪ್ರಬಲರಾಗದಂತೆ ತಡೆಯುದಾಗಿತ್ತು. ಹಾಗೂ ಮೈಸೂರು ಸಂಸ್ಥಾನದ ಮೇಲೆ ಹಿಡಿತ ಸಾಧಿಸುವ ಉದ್ದೇಶವನ್ನು ಹೊಂದಲಾಗಿದೆ. ಇದರಿಂದಾಗಿ ಕರ್ನಾಟಕದ ಅನೇಕ ಪ್ರದೇಶಗಳು ಮುಂಬೈ ಕರ್ನಾಟಕವನ್ನು ಮರಾಠರ ಅಧೀನಕ್ಕೆ ಒಳಪಟ್ಟವು.

ಹಾಗೆಯೇ ಹೈದ್ರಾಬಾದ ಕರ್ನಾಟಕದಲ್ಲಿಯ ಅನೇಕ ಪ್ರದೇಶಗಳು ನಿಜಾಮರ ಆಡಳಿತಕ್ಕೆ ಒಳಪಟ್ಟವು. ಕ್ರಿ.ಶ. ೧೮೦೦ ರ ಹೊತ್ತಿಗೆ ಬ್ರಿಟಿಷ್‌ರ ಕೈ ಸೇರಿದ ಕನ್ನಡ ಪ್ರದೇಶ (ಉತ್ತರ ಕನ್ನಡ) ಕಾರವಾರವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಕ್ರಿ.ಶ. ೧೮೧೮ ರಲ್ಲಿ ಪೇಶ್ವೆ ಎರಡನೆ ಬಾಜೀರಾಯನನ್ನು ಸೋಲಿಸಿ ಮುಂಬೈ ಕರ್ನಾಟಕದ ಜಿಲ್ಲೆಗಳು ಹಾಗೂ ಸಂಸ್ಥಾನಗಳನ್ನು ವಶಪಡಿಸಿಕೊಂಡರು. ಈ ವೇಳೆಯಲ್ಲಿರುವ ಸಣ್ಣ ಪುಟ್ಟ ಸಂಸ್ಥಾನಗಳು ಬ್ರಿಟಿಷ್‌ರ ವಿರುದ್ಧ ಹೋರಾಟಕ್ಕೆ ಸಿದ್ಧವಾದವು. ಇದೇ ಸಂದರ್ಭದಲ್ಲಿ ಅಂದರೆ ಕ್ರಿ.ಶ. ೧೮೧೮ ರಲ್ಲಿ ಎರಡನೆ ಪೇಶ್ವೆ ಬಾಜೀರಾಯ್ ಅವರ ಜೊತೆ ಕೂಡಿಕೊಂಡು ಬಲಿಷ್ಠ ಬ್ರಿಟಿಷರನ್ನು ಹಿಮ್ಮೆಟ್ಟಿಸಲು ಯುದ್ಧವನ್ನು ಮಾಡಿ ಸೋಲುಂಡರು.[೩] ಆದರೆ ನಿಪ್ಪಾಣಿ

೧. ಪಿ.ಆರ್. ತಿಪ್ಪೇಸ್ವಾಮಿ : ಚಿತ್ರಕಲಾ ಪ್ರಪಂಚ, ಪುಟ ೭೪

೨. ಸಿ. ಚಂದ್ರಪ್ಪ : ಬೆಳಗಾಂವ್ ಇತಿಹಾಸ, ಪುಟ, ೨೭೦

೩. ಪ್ರೊ. ಬಿ.ಷೇಕ್ ಅಲಿ : ಕರ್ನಾಟಕ ಚರಿತ್ರೆ, ಮಾಲೆ-೬



ಸಂಸ್ಥಾನದ ಮೂಲ ಪುರುಷ ಸಿದ್ಧೋಜಿರಾವ್ ನಿಂಬಾಳ್ಕಾರ್ ದೇಸಾಯಿಯವರ ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಆಡಳಿತವನ್ನು ಗಮನಿಸಿದಾಗ ಲಲಿತಕಲೆಗಳಿಗೆ ಅದರಲ್ಲೂ ವಾಸ್ತು ನಿರ್ಮಾಣ ಮತ್ತು ಭಿತ್ತಿಚಿತ್ರಗಳಿಗೆ ಕೊಟ್ಟಿರುವ ಪ್ರೋತ್ಸಾಹವು ಗಮನಾರ್ಹವಾದುದಾಗಿದೆ.

**ನಿಪ್ಪಾಣಿ ರಾಜವಾಡೆಯ ರಚನೆ :**

ನಿಪ್ಪಾಣಿ ನಗರದ ಮಧ್ಯದಲ್ಲಿ ನಿಂಬಾಳ್ಕರ್ ರಾಜವಾಡೆ ಇದೆ. ವಾಡೆ ಎಂದರೆ ಅರಮನೆ ಎಂದರ್ಥ. ಈ ಭವ್ಯವಾದ ಅರಮನೆಯು ಸುಮಾರು ೧೪ ಗುಂಟೆ ಸುತ್ತಳತೆಯಿಂದ ಕೂಡಿದೆ. ಈ ವಾಡೆಗೆ ಬಹು ಎತ್ತರವಾದ ಮಹಾದ್ವಾರವಿದ್ದು, ಅಲ್ಲಿಂದ ಮುಂದೆ ಬಂದರೆ ಕಲ್ಲಿನ ಮಹಾದ್ವಾರ ಕಂಡುಬರುತ್ತದೆ. ಅಲ್ಲಿ ನಿಂತುಕೊಂಡು ನೋಡಿದರೆ ಭವ್ಯವಾದ ಹಾಗೂ ಸುಂದರವಾದ ಅರಮನೆಯ ಮೇಲ್ಗಡೆಯಲ್ಲಿರುವ ದರ್ಬಾರ್ ಹಾಲ್ (ಸಭಾಂಗಣ) ಇದರ ಮುಂಭಾಗದಲ್ಲಿ ವಿಶಾಲವಾದ ಅಂಗಳವಿದೆ. ಅಂಗಳದ ಮಧ್ಯದಲ್ಲಿ ನೀರಿನ ಕಾರಂಜಿ, ಅರಮನೆಯ ಒಳಗಡೆ ಚೌಕಾಕಾರದಲ್ಲಿರುವ ಅಂಗಳ, ಸುತ್ತಲೂ ಪಡಸಾಲೆ, ಎದುರಿನ ಪಡಸಾಲೆಯ ಮಧ್ಯದಲ್ಲಿ ಸಿದ್ಧೋಜಿರಾವ್ ನಿಂಬಾಳ್ಕರ್ ಅವರ ಮನೆಯ ದೇವರ ಕೋಣೆಯಿದ್ದದ್ದು ಕಂಡುಬರುತ್ತದೆ.[೯]

ಸುಮಾರು ಎರಡನೂರ ಮೂವತ್ತೂರು ವರ್ಷಗಳ ಹಿಂದೆ ನಿಪ್ಪಾಣಿನಗರವನ್ನು ಸುಮಾರು ಎರಡನೂರ ಮೂವತ್ತೂರು ವರ್ಷಗಳ ಹಿಂದೆ ನಿಪ್ಪಾಣಿನಗರವನ್ನು ಸ್ಥಾಪಿಸಿದ ಸರ್ದಾರ್ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ತಮಗೆ ವಾಸಿಸಲು ಒಂದು ಅರಮನೆ (ವಾಡೆ) ಯೊಂದನ್ನು ಕಟ್ಟಿಸಿದ್ದು, ಈ ಅರಮನೆಯನ್ನು ಕಟ್ಟುವವರಿಗೆ ಅಂದರೆ ಬಂಡಿಗೇರರು, ಅಕ್ಕಸಾಗರು, ಪೂಜಾರಿಗಳು, ನೃತ್ಯಗಾರರು, ಚಿತ್ರ ಕಲಾವಿದರು ಈ ಅರಮನೆಯ ಕಾರ್ಯದಲ್ಲಿ ತೊಡಗಿದರು ಇವರೆಲ್ಲರಿಗೂ ನೂರಾರು ಎಕರೆ ಭೂಮಿಯನ್ನು ದಾನವಾಗಿ ನೀಡಿರುವುದು ತಿಳಿದು ಬರುತ್ತದೆ. ಈ ಅರಮನೆಯು ಸುಂದರವಾಗಿಯೂ, ಭವ್ಯವಾಗಿಯೂ ರಚನೆಗೊಂಡಿದ್ದು, ಮರದ ಕೆತ್ತನೆಯಾಗಲಿ, ನೀರಿನ ವ್ಯವಸ್ಥೆಯಾಗಲಿ, ಈ ಅರಮನೆಯ ಹಿಂಭಾಗದ ಮಹಡಿಯಲ್ಲಿ ಈಜುಕೊಳವೊಂದಿದೆ. ಅಲ್ಲಿಗೆ ನೀರು ಸಾಗಿಸುವ ವ್ಯವಸ್ಥೆಯಿದೆ. ಅಲ್ಲಿನ ಕಲಾತ್ಮಕವಾದ ಎಂಜಿನೀಯರ್ ಮತ್ತು ತಂತ್ರಜ್ಞರ ರಚನಾ ಕೌಶಲ್ಯವನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗದಿರಲಾರದು.

ಈ ಅರಮನೆ "ದರ್ಬಾರ್ ಹಾಲ್" (ಸಭಾ ಮಂದಿರ) "ಪಾಹಾರಾ ಹಾಲ್" (ಕಾವಲುಗಾರನ ಕೋಣೆ)ಗಳಂತಹ ವಿಭಾಗಗಳನ್ನು ಮಾಡಿಕೊಂಡು, ನೂರಾರು ಕೋಣೆಗಳುಳ್ಳ ಭವ್ಯವಾದ ಅರಮನೆಯು ವಿಶಾಲವಾದ ಅಂಗಳ (ಕೈಸಾಲೆ) ಪಡಸಾಲೆಗಳು ಗಾಳಿ ಬೆಳಕುಗಳಿಂದ

---

೯. ಪಿ.ಆರ್. ತಿಪ್ಪೇಸ್ವಾಮಿ : ಕಲಾವಿದನ ನೆನಪುಗಳು, ಪುಟ, ೧೪೯



# ರಾಜ ವಾಡೆ ನಿಪ್ಪಾಣಿ



ವಾಡೆಯ ದರ್ಬಾರ್ ಹಾಲ್



ವಾಡೆಯ ಮುಂಭಾಗ



ಸಂಪೂರ್ಣ ಅರಮನೆಯು ಸುಂದರವಾಗಿ ಮೂಡಿ ಬಂದಿದೆ. ಈ ಅರಮನೆಯ ಅಂದವನ್ನು ಇಮ್ಮಡಿಗೊಳಿಸಿದರಿವರು. ಇವೆಲ್ಲ ಐತಿಹಾಸಿಕ ಮಹತ್ವವನ್ನು ಸಾರುವ ಇಂದಿನ ತಂತ್ರಜ್ಞರಿಗೂ ಸವಾಲಾಗಿರುವ ಅಂಶಗಳನ್ನು ಮನಗಾಣಬಹುದಾಗಿದೆ. ನಿಪ್ಪಾಣಿ ನಗರ ರಚನೆ ಮತ್ತು ನಿಂಬಾಳಕರ್ ವಾಡೆಯ ನಿರ್ಮಾತೃಧಾರ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿ ಅವರ ಪ್ರಾಂತದಲ್ಲಿ ಸುಮಾರು ಅರವತ್ತು ಹಳ್ಳಿಗಳು ಸೇರ್ಪಡೆಗೊಂಡಿದ್ದು, ಸ್ವತಃ ಸಿದ್ಧೋಜಿರಾವ್ ನಿಂಬಾಳಕರ್ ಅವರೇ ೩.೫೦೦ ಎಕರೆ ಭೂಮಿಯನ್ನು ಹೊಂದಿದ್ದರೆಂದೂ ತಿಳಿದುಬರುತ್ತದೆ.

**ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ನೆಲೆಗಳು :**

ಎರಡು ಅಂತಸ್ತುಗಳುಳ್ಳ ಈ ವಾಡೆ ಭವ್ಯವಾದುದಾಗಿದೆ. ಎದುರಿನಲ್ಲಿ ವಿಶಾಲವಾದ ಪಡಸಾಲೆ (ಕೈಸಾಲೆ) ಅದರ ಬೆನ್ನಿಗೆ (ಹಿಂದುಗಡೆ) ನಾಲ್ಕೂ ಕಡೆಗಳಲ್ಲಿ ಪಡೆಸಾಲೆ. ಈ ಪಡಸಾಲೆಯಲ್ಲಿ ಹಲವಾರು ಕೋಣೆಗಳು, ಪಡಸಾಲೆ ಮತ್ತು ಕೋಣೆಗಳ ಮೇಲೆ ಅದೇ ರೀತಿಯಲ್ಲಿರುವ ಮತ್ತೊಂದು ಅಂತಸ್ತು ಅದು ಕೆಳಗಿನ ಕಟ್ಟಡದ ಪ್ರತಿರೂಪದಂತಿದೆ. ಹೀಗೆ ಎರಡು ಅಂತಸ್ತುಗಳನ್ನು ಹೊಂದಿದ ಭವ್ಯವಾದ ಕಟ್ಟಡವಾಗಿರುವ ಈ ವಾಡೆ ಮಧ್ಯದಲ್ಲಿ ತೆರೆದ ಅಂಗಳವನ್ನು ಹೊಂದಿದ್ದು, ಗಾಳಿ, ಬಿಸಿಲು, ಬೆಳಕುಗಳು ಬರುವಂತಾಗಿ ವಾಡೆಯ ಅಂದವನ್ನು ಹೆಚ್ಚಿಸಿದೆ. ಈ ಅಂಗಳದ ಮಧ್ಯದಲ್ಲಿ ಈ ಮನೆತನದ ಕುಲದೇತೆಯಾದ ಅಂಬಾಭವಾನಿಯ ಮಂಟಪವನ್ನು ರಚಿಸಿದ್ದಾರೆ. ವಾಡೆಯ ಕೆಳಅಂಸ್ತುಗಳಲ್ಲಿ ಯಾವುದೇ ಚಿತ್ರಗಳಿಲ್ಲ. ಎಲ್ಲಾ ಚಿತ್ರಗಳು ಮೇಲಂತಸ್ಥಿನ "ದರ್ಬಾರ್ ಹಾಲ್" ಮತ್ತು "ಪಹಾರಾ ಹಾಲ್"ದಲ್ಲಿವೆ.

**ಭಿತ್ತಿಚಿತ್ರಗಳು :**

ಈ ವಾಡೆಯ ಎರಡನೆಯ ಅಂತಸ್ತಿನ ಮುಂಭಾಗಕ್ಕೆ ದರ್ಬಾರ್ ಹಾಲ್ ಅಥವಾ ಸಭಾಂಗಣ, ರಂಗಮಹಲ್ ಸಭಾಭವನವೆಂದೂ ಕರೆಯುತ್ತಾರೆ. ಇದು ಸರ್ದಾರರ ಓಲಗಶಾಲೆಯಾಗಿರಬಹುದು. ಸುಮಾರು ನೂರಿನ್ನೂರು ಜನ ಕುಳಿತುಕೊಳ್ಳಬಹುದಾದ ಸಭಾಂಗಣವಾಗಿದ್ದು, ಅದಕ್ಕೆ ಮೂರು ಕಡೆಗಳಲ್ಲಿ ಗೋಡೆಗಳಿದ್ದು ಮುಂಭಾಗ ತರವಾಗಿದೆ. ಗೋಡೆಗಳ ತಳದಿಂದ ನಾಲ್ಕೈದು ಅಡಿಗಳಷ್ಟು ಎತ್ತರದಲ್ಲಿ ಮಾಡುಗಳನ್ನು ನಿರ್ಮಿಸಿದ್ದಾರೆ. ಈ ಮಾಡುಗಳನ್ನು ಮಣ್ಣಿನ ಗಾರೆಯಿಂದ ರಚಿಸಿದ್ದು, ಇವುಗಳಿಗೆ ಅಲಂಕಾರಿಕ ಚೌಕಟ್ಟುಗಳನ್ನು ರಚಿಸಲಾಗಿದೆ. ಸಭಾಂಗಣದ ಹಿಂದಿನ ಗೋಡೆಗೆ ಹೊಂದಿಕೊಂಡು ಪಹಾರಾ ಹಾಲ್ (ಕಾವಲುಗಾರನ ಕೋಣೆ) ಇದೆ. ಈ ಕಾವಲುಗಾರನ ಕೋಣೆಗೆ ಹೊಂದಿಕೊಂಡಿರುವ ಗೋಡೆಯಲ್ಲಿಯ ಮಾಡುಗಳಲ್ಲಿ ಮಾತ್ರ ಈಗ ಚಿತ್ರಗಳು ಉಳಿದುಕೊಂಡಿವೆ. ಸಭಾಂಗಣದ ಎಡ ಮತ್ತು ಬಲ ಗೋಡೆಗಳಲ್ಲಿಯ ಮಾಡುಗಳಲ್ಲಿರುವ ಚಿತ್ರಗಳು ನಾಶವಾಗಿವೆ.



ಸಭಾಂಗಣದ ಗೋಡೆಗಳಲ್ಲಿ ಪ್ರಮುಖವಾದ ಮಾಡುಗಳು ೫೫"x೬೦" ಅಳತೆಯನ್ನು ಹೊಂದಿದ್ದು, ಚಿತ್ರರಚನೆಗೊಂಡ ಒಳಭಾಗವು ೩೪"x೨೨" ಅಳತೆಯಲ್ಲಿದೆ. ಇಂತಹ ಒಟ್ಟು ೨೩ ಮಾಡುಗಳು ಇದ್ದು, ಪೂರ್ವದಿಕ್ಕಿನ ಗೋಡೆಯಲ್ಲಿ ೮ ಮತ್ತು ಪಶ್ಚಿಮದಿಕ್ಕಿನ ಗೋಡೆಯಲ್ಲಿ ೮ ಮಾಡುಗಳಿದ್ದರೆ, ದಕ್ಷಿಣದ ದಿಕ್ಕಿನ ಗೋಡೆಯಲ್ಲಿ ೭ ಮಾಡುಗಳು ಇರುವವು. ಈಗ ದಕ್ಷಿಣದ ೭ ಮಾಡುಗಳಲ್ಲಿ ಮಾತ್ರ ಭಿತ್ತಿಚಿತ್ರಗಳು ಉಳಿದುಕೊಂಡಿವೆ. ಈ ಮಾಡುಗಳ ಎಡಗಡೆ ಮತ್ತು ಬಲಗಡೆಯಲ್ಲಿ ೮"x೧೬" ಅಳತೆಯ ಮಾಡುಗಳಿದ್ದು, ಇವುಗಳ ಮೇಲಿನ ಭಾಗದಲ್ಲಿ ಅಡ್ಡವಾದ ೭"x೨೨" ಅಳತೆಯ ಮಾಡುಗಳಾಗಿವೆ. ಅಲ್ಲದೇ ೮"x೧೨" ಅಳತೆಯ ತ್ರಿಕೋನಾಕಾರದ ಮಾಡುಗಳನ್ನು ರೂಪಿಸಿ ಅವುಗಳಲ್ಲಿ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಒಟ್ಟು ಕಲಾಕೃತಿಗಳ ಹೊರಗಿನ ಅಂಚಿನಲ್ಲಿ ಉಬ್ಬುಗೆತ್ತನೆಯ ನಕ್ಷೆಗಳನ್ನು ಮತ್ತು ಮಾಡುಗಳಿಗೆ ಕಮಾನುಗಳನ್ನು, ಕಂಬಗಳನ್ನು ಹಾಗೂ ನಕ್ಷೆಗಳನ್ನು ಸುಣ್ಣದ ಗಾರೆಯಿಂದ, ೮"x೮" ಅಳತೆಯಲ್ಲಿ ಹೂವಿನ ನಕ್ಷೆಗಳನ್ನು ಕಲಾಕೃತಿಯಗಳ ಎಡಬಲಭಾಗಗಳಲ್ಲಿ ರಚನೆಮಾಡಲಾಗಿದೆ. ಚೌರಸ, ಆಯತ, ತ್ರಿಕೋನ ಹೀಗೆ ವಿವಿಧ ಆಕಾರಗಳಲ್ಲಿ ರಚನೆಗೊಂಡಿರುವ ಮಾಡುಗಳಲ್ಲಿ ಚಿಕ್ಕ ಪ್ರಮಾಣದ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಹಾಗೂ ಅವುಗಳಿಗೆ ಅತೀ ಸೂಕ್ಷ್ಮವಾಗಿ ವರ್ಣ ಲೇಪನ ಮಾಡಲಾಗಿದೆ. ಆದರೆ ಪ್ರಸ್ತುತದಲ್ಲಿ ಕೆಲವೇ ಭಿತ್ತಿಚಿತ್ರಗಳು ಉಳಿದುಕೊಂಡಿವೆ.

ಒಳಕೋಣೆಗಳಲ್ಲಿ ಸಮತಟ್ಟಾದ ಗೋಡೆಗಳಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಹೊರಗಿನ ಚಾವಡಿಯ ಗೋಡೆಗಳಲ್ಲಿ ಮಾಡುಗಳನ್ನು ರಚಿಸಿ ಆ ಮಾಡುಗಳಲ್ಲಿಯೂ ಚಿತ್ರಗಳನ್ನು ರಚಿಸಲಾಗಿದೆ. ಈ ಮಾಡುಗಳು ಚಿಕ್ಕ ಮತ್ತು ದೊಡ್ಡ ಹೀಗೆ ವಿವಿಧ ಅಳತೆಗಳನ್ನು ಹೊಂದುವುದಲ್ಲದೇ, ವಿವಿಧ ಶೈಲಿ, ವಿನ್ಯಾಸಗಳನ್ನು ಪಡೆದುಕೊಂಡಿವೆ. ಸಭಾಂಗಣದ ಗೋಡೆಯಲ್ಲಿ ಅಲಂಕಾರಿಕವಾಗಿರುವ ಮಾಡುಗಳು ೫೫"x೬೦"ಹೊರಳತೆಯನ್ನು ಹೊಂದಿದ್ದು, ಮಾಡಿನ ಒಳಗಡೆಯ ಚಿತ್ರಿತ ಭಾಗವು ೩೪"x೨೨" ಅಳತೆಯನ್ನು ಹೊಂದಿದೆ. ಈ ಚಿತ್ರಗಳ ವಸ್ತು, ವಿಷಯ, ವೈಶಿಷ್ಟ್ಯತೆಯನ್ನು ಕೆಳಗಿನಂತೆ ವಿವರಿಸಲಾಗಿದೆ.

**ಅ. ಬಕಪಕ್ಷಿ ಮತ್ತು ಶ್ರೀಕೃಷ್ಣ :**

ಶ್ರೀಕೃಷ್ಣ ಮತ್ತು ಬಲರಾಮ ಇಬ್ಬರು ಉದ್ಯಾವನದಲ್ಲಿ ಕಂಡ ಕಂಸನು, ಕೃಷ್ಣನನ್ನು ಹೇಗಾದರೂ ಮಾಡಿ ಕೊಲ್ಲಿಸಬೇಕೆಂದು ರಾಕ್ಷಸರನ್ನು ವಿವಿಧ ವೇಷಗಳಲ್ಲಿ ಕಳಿಸತೊಡಗಿದನು. ಅದರಲ್ಲಿಯ ಒಂದು ಸನ್ನಿವೇಶ ಇದಾಗಿದ್ದು, ನೋಡಲು ತುಂಬಾ ಆಕರ್ಷಕವಾಗಿದೆ. ಶ್ರೀಕೃಷ್ಣನು ದನಕಾಯುವ ಹುಡುಗರೊಂದಿಗೆ ಗೋವುಗಳನ್ನು ಮೇಯಿಸುತ್ತ ಯಮುನಾ ನದಿಯ ದಡದಲ್ಲಿರುವಾಗ ಬಕನೆಂಬ ರಾಕ್ಷಸನು ಪಕ್ಷಿಯವೇಷದಲ್ಲಿ ಬಂದು ತನ್ನ ಕೊಕ್ಕಿನಿಂದ ಗೋವುಗಳನ್ನು ಮತ್ತು ಗೋಪಾಲಕರನ್ನು ಕುಕ್ಕಿ ಕೊಲ್ಲತೊಡಗಿದನು. ಇದನ್ನು ಕಂಡು ಕೃಷ್ಣನು ಈ ಬಕಪಕ್ಷಿಯೊಡನೆ ಹೋರಾಡಿ ಆ ಪಕ್ಷಿಗಳ ಕೊಕ್ಕೆಗಳನ್ನು ಮುರಿದು ಬಿಸಾಕುವ



ದೃಶ್ಯವಿದಾಗಿದೆ. ಈ ದೃಶ್ಯವನ್ನು ಗೋಪಾಲಕರು ಗಾಭರಿಯಾಗಿ ನೋಡುತ್ತ ನಿಂತಂತೆ ಚಿತ್ರಿಸಲಾಗಿದೆ. ಈ ಕಲಾಕೃತಿಯಲ್ಲಿ ನೀಲಿ ವರ್ಣದ ಕೃಷ್ಣನು ಕೀರಿಟವನ್ನು ಧರಿಸಿದ್ದು, ಭುಜದ ಮೇಲೆ ಹಳದಿ ವರ್ಣದ ಶಾಲು ಹಾಕಿಕೊಂಡಿದ್ದಾನೆ.

ನಾಲ್ಕು ಜನ ಗೋಪಾಲಕರು ತಲೆಯ ಮೇಲಿನಿಂದ ಪಾದದವರೆಗೂ ಕಂಬಳಿಯನ್ನು ಹೊದ್ದುಕೊಂಡು, ಕೈಯಲ್ಲಿ ಉದ್ದವಾದ ಕೋಲುಗಳನ್ನು ಹಿಡಿದುಕೊಂಡಿದ್ದು ಗರಿ ಚಡ್ಡಿಯನ್ನು ಮಾತ್ರ ಧರಿಸಿರುವರು. ಈ ಗೋಪಾಲಕರ ಎದುರಿನಲ್ಲಿ ದನಗಳ ಗುಂಪೊಂದು ಕಂಡುಬರುತ್ತದೆ. ದೂರದ ಹಿನ್ನೆಲೆಯನ್ನು ಹೊಂದಿದ ಈ ಚಿತ್ರ ನೀಲಿ ಆಕಾಶ, ಹಸಿರು ಬಣ್ಣದ ಗಿಡಮರಗಳು ಹಾಗೂ ಚಿತ್ರದಲ್ಲಿ ರೇಖೆಗಳು ಶಕ್ತಿಯುತವಾಗಿ ಹಾಗೂ ಜೀವಂತವಾಗಿ ಮೂಡಿಬಂದಿವೆ. ಚಿತ್ರದ ಮುಂಭಾಗದಲ್ಲಿ ನದಿಯನ್ನು ತೆಳುವಾದ ನೀಲಿಯ ಬಣ್ಣದಲ್ಲಿ ತೋರಿಸಿದ್ದು ನೀರಿನ ಅಲೆಗಳು, ಮೀನುಗಳನ್ನು ತೋರಿಸಿರುವ ರೀತಿ ತುಂಬಾ ಸೊಗಸಾಗಿ ಮೂಡಿಬಂದಿದೆ. ಈ ಚಿತ್ರದಲ್ಲಿ ದೂರಾಂತರನುಭವವು ಪ್ರಮುಖವಾಗಿ ಕಂಡುಬಂದಿದ್ದು, ಜೊತೆಗೆ ಒಟ್ಟು ಚಿತ್ರದಲ್ಲಿ ಆಕೃತಿಗಳ ಸಂಯೋಜನಾ ವಿನ್ಯಾಸ, ವರ್ಣ ಸಂಯೋಜನೆ ಹಾಗೂ ಸೂಕ್ತ ಸ್ಥಳಾವಕಾಶದ ಬಳಕೆ ತುಂಬಾ ಆಕರ್ಷಕವಾಗಿ ಮೂಡಿಬಂದಿದೆ.

**ಆ. ತುಳುಜಾಭವಾನಿ :**

ಈ ಚಿತ್ರದಲ್ಲಿ ಕಮಲದ ಹೂವಿನ ಮೇಲೆ ಕುಳಿತಿರುವ ಆರು ಕೈಗಳನ್ನು ಹೊಂದಿದ ತುಳುಜಾಭವಾನಿಯ ಚಿತ್ರವಾಗಿದೆ. ಈ ಚಿತ್ರದಲ್ಲಿ ತುಳುಜಾಭವಾನಿಯು ಜ್ಯಾನ ಮಾಡುತ್ತಿರುವುದು ಕಂಡುಬರುತ್ತದೆ. ಈ ದೃಶ್ಯವು ೭"x೨೨" ಅಳತೆಯ ಆಯಾತಾಕಾರದ ಮಾಡಿನಲ್ಲಿ ರಚನೆಗೊಂಡಿದೆ. ಆರು ಕೈಯಲ್ಲಿ ಒಂದೊಂದು ಆಯುಧವನ್ನು ಹಿಡಿದಿದ್ದು, ಜಪಮಾಲೆಯನ್ನು ಹಿಡಿದು ಪದ್ಮಾಸನದಲ್ಲಿ ಕುಳಿತಿದ್ದಾಳೆ. ತುಳುಜಾಭವಾನಿಯು ನಿಪ್ಪಾಣಿಯ ಸಂಸ್ಥಾನದ ಕುಲದೇವತೆಯಾಗಿದ್ದಳು. ಎಡ ಮತ್ತು ಬಲಗಡೆಯಲ್ಲಿ ೮"x೮" ಅಳತೆಯ ಚೌಕಾಕಾರದ ಮಾಡುಗಳನ್ನು ರೂಪಿಸಲಾಗಿದ್ದು, ಅವುಗಳಲ್ಲಿ ಒಂದೊಂದು ಹೂವುಗಳನ್ನು ರಚಿಸಲಾಗಿದೆ. ಅಲ್ಲದೇ ಮಾಡುಗಳು ವಿವಿಧ ಬಗೆಯ ಅಲಂಕಾರಿಕ ಹೂವುಗಳಿಂದ ಕಂಗೊಳಿಸುವಂತೆ ಚಿತ್ರಿಸಲಾಗಿದೆ.

ಈ ತುಳುಜಾಭವಾನಿಯ ಕಲಾಕೃತಿಯಲ್ಲಿ ದೇವಿಯ ಅರೆತೆರೆದ ಕಣ್ಣುಗಳು, ನೀಳ ಮೂಗು ಹೊಂದಿದ ಈ ಚಿತ್ರವು ನೋಡುಗರಿಗೆ ಭಕ್ತಿಯ ಭಾವನೆಯನ್ನು ಮೂಡಿಸವಂತಿದೆ. ಕಲಾಕೃತಿಯಲ್ಲಿ ವರ್ಣಗಳ ಸಂಯೋಜನೆ ಹಾಗೂ ರೇಖಾವಿನ್ಯಾಸ ಒಟ್ಟಾರೆ ಈ ಕಲಾಕೃತಿಯು ಸೊಗಸಾಗಿ ಮೂಡಿಬಂದಿದೆ.



## ದೇವಾಲಯಗಳು



ಶಿವಾಲಯ



ತುಳುಜಾಭವಾನಿ ದೇವಸ್ಥಾನ



# ದರ್ಬಾರ್ ಹಾಲ್‌ನಲ್ಲಿರುವ ಭಿತ್ತಿಚಿತ್ರಗಳು





ರಾರಲೀಲೆಯಲ್ಲಿ ಶ್ರೀ ಕೃಷ್ಣ



ತಪೋನಿರತ ತುಳುಜಾಭವಾನಿ



**ಇ. ರಾಸಲೀಲೆಯಲ್ಲಿ ಕೃಷ್ಣ :**

ಪ್ರಮುಖ ಮಾಡಿನ ಎಡಬದಿಯಲ್ಲಿ ೮"x೧೬" ಅಳತೆಯಯಲ್ಲಿರುವ ಚಿಕ್ಕ ಮಾಡಿನಲ್ಲಿ ರಚನೆಗೊಂಡಿರುವ ಚಿತ್ರ ಇದಾಗಿದೆ. ಈ ಚಿತ್ರದಲ್ಲಿ ಕೃಷ್ಣನು ತನ್ನ ಸಖಿಯೊಂದಿಗೆ ಸರಸದಲ್ಲಿ ತೊಡಗಿದ್ದಾನೆ. ಮನೆಯ ಒಳಾಂಗಣದಲ್ಲಿರುವ ಪಲ್ಲಂಗದ ಮೇಲೆ ಕೃಷ್ಣನು ತನ್ನ ಬಲಗಾಲನ್ನು ಚಾಚಿದ್ದು ಎಡಗಾಲನ್ನು ಮಡಚಿಕೊಂಡಿದ್ದಾನೆ. ಸಖಿಯನ್ನು ತನ್ನ ತೊಡೆಯ ಮೇಲೆ ಕುರಿಸಿಕೊಂಡು ಎರಡೂ ಕೈಯಿಂದ ಆಕೆಯನ್ನು ತಬ್ಬಿಕೊಂಡು ಅದರಕ್ಕೆ ಮುತ್ತು ಕೊಡುವ ಚಿತ್ರವಿದಾಗಿದೆ. ಕಿರೀಟವನ್ನು ಧರಿಸಿರುವ ಕೃಷ್ಣನು ಹಳದಿ ವರ್ಣದ ಶಾಲನ್ನು ಹೊದ್ದುಕೊಂಡು ಹಾಗೂ ಹಳದಿ ವರ್ಣದ ಪಂಚೆಯನ್ನು ತೊಟ್ಟಿದ್ದಾನೆ. ಆತನ ಸಖಿಯು ಕೆಂಪು ರೇಷ್ಮೆ ಸೀರೆಯನ್ನು ಮತ್ತು ಹಳದಿ ವರ್ಣದ ರವಿಕೆ ತೊಟ್ಟಿದ್ದಾಳೆ.

ಇವರ ಪಲ್ಲಂಗದ ಸಮೀಪದಲ್ಲಿಯೇ ಒಂದು ಪಾತ್ರೆಯಲ್ಲಿ ಹಣ್ಣುಹಂಪಲಗಳಿದ್ದು, ಹೂಜಿಯಲ್ಲಿ ನೀರು ಮತ್ತು ಗ್ಲಾಸುಗಳಿವೆ. ಹಿನ್ನೆಲೆಗೆ ಕೆಂಪುವರ್ಣ, ಆಕಾಶವನ್ನು ಹಳದಿವರ್ಣವನ್ನು ಬಳಸಿ ಹಾಗೂ ಮೋಡಗಳನ್ನು ಸಹ ತೋರಿಸಲಾಗಿದೆ. ಚಿತ್ರದ ಹೊರ ರೇಖೆಗಳನ್ನು ಕಪ್ಪು ವರ್ಣದಿಂದ ಬರೆಯಲಾಗಿದೆ. ಒಟ್ಟಾರೆಯಾಗಿ ಈ ಚಿತ್ರವು ಶ್ರೀಮಂತ ವರ್ಣಗಳ ಬಳಕೆಯಾಗಿದ್ದು, ಪ್ರೀತಿ, ಪ್ರೇಮ, ಪ್ರಣಯದ ಸಂಕೇತವಾಗಿ ಬರುವ ಹಳದಿ, ಕೆಂಪು ವರ್ಣಗಳು ಆಕೃತಿಯಲ್ಲಿ ಚಲನಶೀಲತೆಯನ್ನು ಮೂಡಿಸಿದೆ. ಹಾಗೂ ಮುಖದಲ್ಲಿ ಶೃಂಗಾರದ ಭಾವನೆಗಳನ್ನು ಹೊರಹೊಮ್ಮಿ ಸಂಯೋಜನಾ ದೃಷ್ಟಿಯಿಂದಲೂ ಈ ಕಲಾಕೃತಿ ಉತ್ತಮವಾಗಿ ರಚನೆಗೊಂಡಿದೆ.

**ಈ. ಗೋಪಿಕಾ ಸ್ತ್ರೀಯರ ಜೊತೆ ಶ್ರೀಕೃಷ್ಣ :**

ವಿವಿಧ ಭಂಗಿಗಳಲ್ಲಿರುವ ಹಲವಾರು ಸನ್ನಿವೇಶಗಳನ್ನೊಳಗೊಂಡ ಸುಮಾರು ೨೨ ಜನ ಗೋಪಿಕಾ ಸ್ತ್ರೀಯರೊಂದಿಗೆ ಶ್ರೀಕೃಷ್ಣನು ಇರುವ ಚಿತ್ರ ಇದಾಗಿದೆ. ಈ ಕಲಾಕೃತಿಯಲ್ಲಿ ನರ್ಮದಾ ನದಿಯ ದಡದಲ್ಲಿಯ ಹೂವಿನ ತೋಟ ಇರುವುದನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ. ಈ ಕಲಾಕೃತಿಯಲ್ಲಿ ಕೃಷ್ಣನು ಗೋಪಿಕಾ ಸ್ತ್ರೀಯರೊಂದಿಗೆ ಸಂಭಾಷಣೆಯಲ್ಲಿ ತೊಡಗಿರುವನು. ಈ ಚಿತ್ರ ಸಂಯೋಜನೆಯು ದೊಡ್ಡ ಮಾಡಿನಲ್ಲಿ ३೪"x೨೨" ಅಳತೆಯಲ್ಲಿ ಕಲಾತ್ಮಕವಾಗಿ ರಚನೆಗೊಂಡಿದೆ.

ಗೋಪಿಕಾ ಸ್ತ್ರೀಯರು ಹಲವು ಬಗೆಯ ವರ್ಣಗಳ ರವಿಕೆ, ಸೀರೆ ಹಾಗೂ ಲಂಗಾ ದಾವಣಿಯೊಂದಿಗೆ ಕಂಗೊಳಿಸಿದ್ದು, ಕೃಷ್ಣನು ಕಿರೀಟ ಧರಿಸಿದ್ದು, ಭುಜದ ಮೇಲಿನ ಶಾಲು ಹಾಗೂ ಪಂಚೆಯನ್ನು ಕೆಂಪು, ಹಳದಿ, ಬಿಳಿ ವರ್ಣಗಳಲ್ಲಿ ರಚಿಸಲಾಗಿದೆ. ಆದರೆ ಮೈಬಣ್ಣ ಮಾತ್ರ ನೀಲಿ ವರ್ಣದಲ್ಲಿಯೇ ಚಿತ್ರಿಸಿರುವುದು ವಿಶೇಷವಾಗಿದೆ. ನೆಲವು ಹಸಿರು ಹುಲ್ಲಿನಿಂದ



# ಪಹಾರಾ ಹಾಲ್‌ನಲ್ಲಿರುವ ಭಿತ್ತಿಚಿತ್ರಗಳು





ಪ್ರಣಯ ನಿರತ ಕೃಷ್ಣನನ್ನು ಕಂಡು ವಿಸ್ಮಯಳಾದ ರಾಧೆ



ರಾಸಲೀಲೆಯಲ್ಲಿ ಕೃಷ್ಣ



ಯುದ್ಧಕ್ಕೆ ಸಿದ್ಧನಾದ ಕೃಷ್ಣ



ತುಂಬಿದೆ. ಈ ಚಿತ್ರವನ್ನು ಗಮನಿಸಿದರೆ ದೂರಾಂತರನುಭವವು ತುಂಬಾ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತದೆ. ಅಲ್ಲದೇ ವರ್ಣಗಳ ಸಂಯೋಜನೆ, ಶಕ್ತಿಯುತವಾದ ರೇಖೆಗಳು, ಸೂಕ್ತ ಸ್ಥಳಾವಕಾಶದ ಬಳಕೆಯನ್ನು ತುಂಬಾ ಎಚ್ಚರಿಕೆಯೊಂದಿಗೆ ರಚಿಸಲಾಗಿದೆ.

**ರಾಜಕುಮಾರಿಯರ ಚಿತ್ರಗಳು**

**ಕಲ್ಪನಾ ಲೋಕದಲ್ಲಿರುವ ರಾಧೆ :**

ಈ ಕಲಾಕೃತಿಯು ರಾಧೆ ಕೃಷ್ಣನ ಆಗಮನದ ಕುರಿತು ಕಲ್ಪನಾ ಲೋಕದಲ್ಲಿದ್ದಾಳೆ ಎಂಬುದು ತಿಳಿದುಬರುತ್ತದೆ. ರಾಧೆಯ ಪಕ್ಕದಲ್ಲಿರುವ ಜಿಂಕೆಯು ರಾಧೆಯ ಮುಖವನ್ನು ನೋಡುತ್ತಿರುವ ದೃಶ್ಯ ಸುಂದರವಾಗಿ ಮೂಡಿಬಂದಿದೆ. ರಾಧೆಯ ಮುಖದಲ್ಲಿ ಚಿಂತಿಸುತ್ತಿರುವ ಭಾವನೆ ಮತ್ತು ರಾಧೆಯನ್ನು ಹೊರಳಿ ನೋಡುತ್ತಿರುವ ಜಿಂಕೆಯ ಭಾವನೆಗಳು ಅದ್ಭುತವಾಗಿ ಚಿತ್ರಿತಗೊಂಡಿವೆ. ಆಕೆಯು ಧರಿಸಿದ ಕೆಂಪುವರ್ಣದ ಲಂಗಾ ಅದರಲ್ಲಿ ಕಾಣುವ ನೆರಿಗೆಗಳು ವಿಶೇಷವಾಗಿ ಕಾಣಿಸುತ್ತಿದ್ದು, ಹಸಿರು ವರ್ಣದ ರವಿಕೆ ಮೇಲುಡುಗೆಯು ಪಾರದರ್ಶಕವಾಗಿದೆ. ಇವುಗಳೆಲ್ಲವು ರಾಧೆಯ ಸೌಂದರ್ಯವನ್ನು ವೃದ್ಧಿಸುತ್ತಿದೆ. ಈ ಕೃತಿಯಲ್ಲಿ ಆಭರಣಗಳು, ಬಟ್ಟೆಯ ಅಂಚು ಹಾಗೂ ದಡಿಗಳಲ್ಲಿ ಬಂಗಾರದ ವರ್ಣವನ್ನು ಲೇಪಿಸಿರುವುದು ಕಂಡುಬರುತ್ತದೆ. ಹಿನ್ನೆಲೆಯು ಕೆಂಪು ವರ್ಣದಲ್ಲಿದ್ದು, ಕಲಾಕೃತಿಯು ಸುಂದರವಾಗಿ ರಚಿಸಲಾಗಿದೆ.

ಈ ಮೇಲಿನ ಚಿತ್ರಗಳು ಮಾತ್ರವಲ್ಲದೇ ನಿಪ್ಪಾಣಿಯ ವಾಡೆಯಲ್ಲಿ ಸ್ಥಳೀಯರ ಪ್ರಭಾವದಿಂದ ರಚನೆಗೊಂಡಂಥ ಚಿತ್ರಗಳನ್ನು ಹೇಳುವುದಾದರೆ ಬಿಂಗರಿ ಆಡಿಸುತ್ತಿರುವ ರಾಧೆ, ಆರತಿಯನ್ನು ಹಿಡಿದಿರುವ ರುಕ್ಮಿಣಿ, ಕೃಷ್ಣನ ಸಾಕುತಾಯಿ ಯಶೋಧೆಯೊಂದಿಗೆ ಬಾಲಕೃಷ್ಣ, ಗೌಳಗಿತ್ತಿಯ ಕಲಾಕೃತಿ, ಹಾಲನ್ನು ಕರೆಯುತ್ತಿರುವ ಸ್ತ್ರೀ ಇವುಗಳಲ್ಲದೇ ಪ್ರಾಂತಿಯ ಸರದಾರರ ಚಿತ್ರಗಳು ಕಂಡುಬರುತ್ತವೆ. ಅವುಗಳಲ್ಲಿ ಮರಾಠಾ ಯೋಧ, ಸುಲ್ತಾನ ಯೋಧ, ರಜಪೂತ ಯೋಧ, ಮೊಗಲ್ ಯೋಧ, ಮೈಸೂರು ಯೋಧ ಹಾಗೂ ದಖ್ಖನ್ ಯೋಧರ ಚಿತ್ರಗಳು ರಚಿತವಾಗಿರುವುದನ್ನು ಇಂದಿಗೂ ಕಾಣಬಹುದು. ಈ ವಾಡೆಯಲ್ಲಿರುವ ತುಳುಜಾಭವಾನಿ ದೇವಸ್ಥಾನದ ಹೆಬ್ಬಾಗಿಲಿನಲ್ಲಿ ರಾಜಕುಮಾರರ ಚಿತ್ರಗಳು, ಸಂಕೀರ್ಣ ಚಿತ್ರಗಳು, ದೇವಾಲಯಗಳ ಚಿತ್ರಗಳು ಹಾಗೂ ಪಹಾರಾ ಹಾಲ್‌ನಲ್ಲಿರುವ ಮೂರನೆಯ ಅಂತಸ್ತಿನಲ್ಲಿರುವ ಅರಮನೆಯಲ್ಲಿರುವ ಚಿತ್ರಗಳನ್ನು ಹೇಳುವುದಾದರೆ ರುಕ್ಮಿಣಿಯೊಂದಿಗೆ ರಾಸಲೀಲೆಯಲ್ಲಿ ಕೃಷ್ಣ, ಹೋರಾಟಕ್ಕೆ ಹೊರಟ ಕೃಷ್ಣನನ್ನು ಬೀಳ್ಕೊಡುತ್ತಿರುವ ರುಕ್ಮಿಣಿ, ಪ್ರಣಯ ನಿರತ ಕೃಷ್ಣನನ್ನು ಕಂಡು ವಿಸ್ಮಯಳಾದ ರಾಧೆ, ಅರಮನೆಯ ಮುಂದೆ ವಸಂತೋತ್ಸವದ ದೃಶ್ಯ, ಬಣ್ಣದೋಕುಳಿಯ ದೃಶ್ಯ, ಕೃಷ್ಣನ ರಾಸಲೀಲೆಯನ್ನು ನೋಡುತ್ತಿರುವ ಸಖಿಯರು, ಯಜ್ಞಯಾಗಾದಿಗಳ ದೃಶ್ಯ ಇನ್ನೂ ಮುಂತಾದ ದೃಶ್ಯಗಳು ಕಂಡುಬರುತ್ತವೆ.



ದರ್ಬಾರ್ ಹಾಲ್‌ನಲ್ಲಿರುವ ಭಿತ್ತಿಚಿತ್ರಗಳು

ಸ್ಥಳೀಯ ಪ್ರಭಾವದ ಚಿತ್ರಗಳು



ಸಾಳ್ವ ಪಕ್ಷಿ ಜೊತೆಗಿರುವ ರಾಜಕುಮಾರಿ



ಜಿಂಕೆಗೆ ಸೊಪ್ಪು ತಿನ್ನಿಸುತ್ತಿರುವ ರಾಜಕುಮಾರಿ



ಯೋಚನಾ ಮಗ್ನಳಾದ ರಾಧೆ



ನೃತ್ಯ ಭಂಗಿಯಲ್ಲಿ ರಾಧೆ



## ದರ್ಬಾರ್ ಹಾಲ್‌ನಲ್ಲಿರುವ ಭಿತ್ತಿಚಿತ್ರಗಳು

### ಪ್ರಾಂತೀಯ ಸರ್ದಾರರು



ರಜಪೂತ ಯೋಧ



ಮೊಘಲ್ ಯೋಧ



ಸುಲ್ತಾನ್ ಯೋಧ



ಮರಾಠಾ ಯೋಧ

ಕೃಪೆ, ಬಿ.ಎಂ.ಪಾಟೀಲ



# ಪಹಾರಾ ಹಾಲ್‌ನಲ್ಲಿರುವ ಭಿತ್ತಿಚಿತ್ರಗಳು



ಅರಮನೆಯ ಮುಂದೆ ಬಯಲು ಗ್ಯಾಲರಿ



ಅರಮನೆಯ ಮೇಲಂತಸ್ತಿನ ಚಿತ್ರ

ವಸಂತೋತ್ಸವ ದೃಶ್ಯ



ನಿಪ್ಪಾಣಿಯ ಕಲೆಯ ಮೇಲೆ ದಖ್ಖನ್, ಮರಾಠಾ, ಸುರಪುರ, ವಿಜಯನಗರ ಶೈಲಿಗಳ ಪ್ರಭಾವ ಕಂಡುಬರುತ್ತದೆ. ಒಟ್ಟಿನಲ್ಲಿ ನಿಪ್ಪಾಣಿ ವಾಡೆಯ ಭಿತ್ತಿಚಿತ್ರಗಳು ಅತ್ಯಂತ ವೈಭವಯುತವು, ಶ್ರೀಮಂತ ಮತ್ತು ಕಲಾಕ್ಷೇತ್ರ ಹೊರಗಿನ ಜಗತ್ತಿಗೆ ತಿಳಿಯದೇ ಹೋಗಿರುವುದು ಹಾಗೂ ಅಲ್ಲಿರುವ ಕಲಾ ಸಂಪತ್ತನ್ನು ರಕ್ಷಿಸುವ ಜವಾಬ್ದಾರಿ ನಾಡಿನ ಸರಕಾರದ ಹೊಣೆಯಾಗಿದ್ದು, ಖಾಸಗಿ ಒಡೆತನದಲ್ಲಿರುವ ಈ ಕಲಾ ಸಂಪತ್ತನ್ನು ನೈಸರ್ಗಿಕ ವೈಪರಿತ್ಯದಿಂದ ಹಾಳಾಗದಂತೆ ರಕ್ಷಿಸಬೇಕಾಗಿದೆ. ಅಲ್ಲಿರುವ ಚಿತ್ರಗಳನ್ನು ಕುರಿತು ಛಾಯಾಚಿತ್ರಣಗಳನ್ನು ಮಾತ್ರವಲ್ಲದೇ ವಿಡಿಯೋ ಚಿತ್ರಣವನ್ನು ಮಾಡಿ, ಇದನ್ನು ಕಾಯ್ದಿಡುವುದರಿಂದ ಮುಂದಿನ ಪಿಳಿಗೆಗಾಗಿ ಒಂದು ಕೊಡುಗೆಯನ್ನು ನೀಡಿದಂತಾಗುದಲ್ಲದೇ, ಕಲೆಯ ಸಂರಕ್ಷಣೆ ಕೂಡ ಆಗುತ್ತದೆ.

**ಆ. ಅಥಣಿ ನಿಪ್ಪಾಣಿಕರ್ ವಾಡೆ :**

ಅಥಣಿ ಇದು ತಾಲೂಕು ಸ್ಥಳವಾಗಿದ್ದು ಬೆಳಗಾವಿಯಿಂದ ೧೪೮ ಕಿಲೊ ಮೀಟರ್ ದೂರದಲ್ಲಿದೆ. ಸುಮಾರು ಎರಡು ಶತಮಾನಗಳ ಹಿಂದೆ ನಿಪ್ಪಾಣಿಯಿಂದ ಅಥಣಿಗೆ ಬಂದು ನೆಲೆಸಿದ ಒಬ್ಬ ಸರ್ದಾರನ ಹಳೆಕಾಲದ ಮನೆಯಾದ ಈ ಕಟ್ಟಡದ ಗೋಡೆಗಳ ಮೇಲೆ ಚಿತ್ರಗಳಿದ್ದುದ್ದಾಗಿ ಡಾ. ಶಿವರಾಮ ಕಾರಂತ ಅವರು ಹೇಳುತ್ತಾರೆ.[೧೦] ಆ ಕಟ್ಟಡದ ಚಾವಡಿ ಗೋಡೆಯು ಸಂಪೂರ್ಣವಾಗಿ ಭಿತ್ತಿಚಿತ್ರಗಳಿದ್ದು ಅವುಗಳ ಮೇಲೆ ನಾಲ್ಕೆಂಟು ಬಾರಿ ಸುಣ್ಣ ಬಳಿಯಲಾಗಿದೆ. ಸುಣ್ಣವು ಪದರು ಪದರಾಗಿ ಬಿಚ್ಚಿಹೋದ ಕಡೆಗೆ ಕೆಲವು ಬಣ್ಣದ ತುಣುಕುಗಳು ಕಂಡುಬರುತ್ತವೆ. ಒಂದು ಕಡೆಗೆ ಸುಣ್ಣದ ಹಾಳೆಗಳನ್ನು ಕೆರೆದು ಎಬ್ಬಿಸಿದಾಗ ತೀರ ಕೆಳಪದರದಲ್ಲಿ ಗ್ರಾಮೀಣ ಶೈಲಿಯ ಚಿತ್ರಗಳ ತುಣುಕೊಂದು ಕಾಣಿಸಿತೆಂದು ವಿವರಣೆ ಕೊಡುತ್ತಾರೆ.[೧೧] ಆದರೆ ಇಂದು ಈ ಚಿತ್ರಗಳಷ್ಟೇ ಅಲ್ಲದೆ ಕಟ್ಟಡ ಮತ್ತು ಕಟ್ಟಡದ ಅವಶೇಷಗಳು ಸಹ ಇಲ್ಲಿ ಕಾಣಿಸುವುದಿಲ್ಲ. ಏಕೆಂದರೆ ಪ್ರಸ್ತುತದಲ್ಲಿ ಆ ಹಳೆಯ ವಾಡೆಯನ್ನು ಸಂಪೂರ್ಣವಾಗಿ ನಾಶಪಡಿಸಿ ಆ ಸ್ಥಳದಲ್ಲಿ ವಾಣಿಜ್ಯ ಸಂಕೀರ್ಣ ಕಟ್ಟಡ ಕಟ್ಟಿರುವುದು ಒಂದು ವಿಷಾದದ ಸಂಗತಿ.

**ಇ. ರಾಮದುರ್ಗದ ವಾಡೆ :**

ಬೆಳಗಾವಿ ಜಿಲ್ಲೆಯ ರಾಮದುರ್ಗವು ತಾಲೂಕಾಸ್ಥಳವಾಗಿದೆ. ನರಗುಂದ ಸಂಸ್ಥಾನಿಕರ ಸೋದರ ಸಂಬಂಧಿ ಸಂಸ್ಥಾನ ಇದಾಗಿದೆ. ಕ್ರಿ.ಶ. ೧೯ನೆಯ ಶತಮಾನದ ಮೊದಲ ಭಾಗದಲ್ಲಿ ಕಟ್ಟಲ್ಪಟ್ಟ ಇಲ್ಲಿನ ರಾಜವಾಡೆ ಒಂದು ಸುಂದರ ರಚನೆಯಾಗಿದೆ. ಈ ಅರಮನೆಯಲ್ಲಿ

---

೧೦. ಡಾ.ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ, ೪೯

೧೧. ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪಿಹೆಚ್.ಡಿ. ಮ.ಪ್ರ. ಪುಟ, ೩೦೯



ನವಿಲು ತೀರ್ಥ : ಆರುಗಂಟಿನ ದ್ವಿರೇಖಾಚಿತ್ರ,

ಕೃಪೆ : ಅ.ಸುಂದರ



ರಾಮದುರ್ಗದ ವಾಡೆ





ಗಾಜಿನ ಮೇಲಿನ ಚಿತ್ರಗಳು

ಕೃಪೆ : ಡಾ.ಯಾದಪ್ಪ ಪರದೇಶಿ



ಭಿತ್ತಿಚಿತ್ರಗಳು ಅತ್ಯಲ್ಪ ಪ್ರಮಾಣದಲ್ಲಿ ಕಂಡುಬರುತ್ತವೆ. ಒಳ ಭಾಗದ ಗೋಡೆಯಲ್ಲಿ ಬಾಗಿಲಿನ ಮೇಲ್ಭಾಗದಲ್ಲಿ ಒಂದು ಕಡೆ ಮಾತ್ರ ಸುಮಾರು ಒಂದು ಅಡಿಯಷ್ಟು ಹೂ ಬಳ್ಳಿಯ ನಕ್ಷಾವಿನ್ಯಾಸವನ್ನು ರಚಿಸಲಾಗಿದೆ. ಬಿಳಿ ಸುಣ್ಣದ ಗೋಡೆಯಲ್ಲಿ ತಿಳಿಗೆಂಪು ವರ್ಣದಿಂದ ರಚಿಸಿದ ಈ ನಕ್ಷೆಗಳನ್ನು ಬಿಟ್ಟರೆ ಒಳಭಾಗದಲ್ಲಿ ಮತ್ತಾವ ಭಿತ್ತಿಚಿತ್ರಗಳು ಕಂಡುಬರುವುದಿಲ್ಲ. ಈ ರಾಜವಾಡೆಯ ಮುಖ್ಯ ದ್ವಾರದ ಮೇಲಿನ ಅಂತಸ್ತಿನಲ್ಲಿ ಹೊರಗಡೆಯ ಚಾಚುಭಾಗಕ್ಕೆ ಅಲಂಕಾರಿಕ ಗಾಜುಗಳನ್ನು ಹೊಂದಿಸಲಾಗಿದೆ. ಈ ಗಾಜುಗಳ ಮೇಲೆ ಮೂರು ಬದಿಯಲ್ಲಿ ಒಂದೇ ತರಹದ ನಕ್ಷಾಚಿತ್ರವನ್ನು ರಚಿಸಲಾಗಿದೆ.

ಅರಮನೆಗಳಲ್ಲಿ ರಚನೆಯಾದ ಭಿತ್ತಿಚಿತ್ರಕಲೆ ಅದರ ರಚನೆಗೆ ಪೋಷಕವಾದ ಅರಸನ ಧರ್ಮಾಭಿಮಾನ, ಸೌಂದರ್ಯೋಪಾಸನಾಗಳಲ್ಲದೇ ಆತನ ಆಸಕ್ತಿ, ಅಭಿರುಚಿ, ಸ್ವಭಾವಗುಣಗಳಿಗೆ ಅನುಸಾರವಾಗಿ ರಚನೆಯಾಗಿರುತ್ತವೆ. ಅಲ್ಲದೇ ಅರಮನೆಯ ವಿವಿಧ ಭಾಗಗಳಲ್ಲಿ ಆಯಾ ಸ್ಥಳಗಳಿಗೆ ಅನುಸಾರವಾಗಿ ಚಿತ್ರಗಳು ರಚನೆಯಾಗಿರುತ್ತವೆ ಎನ್ನಬಹುದು. ಹೆಚ್ಚು ಜನ ಬಂದುಹೋಗುವ ದರ್ಬಾರ್ ಹಾಲ್ ಅಥವಾ ಸಭಾಭವನದಲ್ಲಿ ಯುದ್ಧ ಸಂಬಂಧಿ ಘಟನೆಗಳು, ಉತ್ಸವಗಳು, ಆಚರಣೆಗಳು, ರಾಜರು ಅನುಸರಿಸುತ್ತಿದ್ದ ಧರ್ಮಕ್ಕೆ ಸಂಬಂಧಿಸಿದ ದೇವತಾ ಚಿತ್ರಗಳಿರುವುದು ಕಂಡುಬರುತ್ತವೆ.[೧೨]

ಮೇಲೆ ಹೇಳಿರುವಂತ ವಾಡೆಗಳಲ್ಲಿನ ಲಕ್ಷಣಗಳನ್ನು ಗಮನಿಸಿದಾಗ ಕಂಡುಬರುವ **ಅಂಶಗಳೆನೆಂದರೆ ಭಿತ್ತಿಚಿತ್ರಗಳ ಕುರಿತು ಆಯಾ ರಾಜರ ಆಸಕ್ತಿ, ಅಭಿರುಚಿ, ಧರ್ಮಾಭಿಮಾನ ಮತ್ತು ವೇಷ ಭೂಷಣಗಳಂತಹ ವಿವರಗಳನ್ನು ತಿಳಿದುಕೊಳ್ಳುವಲ್ಲಿ ಸಹಾಯಕವಾಗಿವೆ.**

**೩. ಮಠಗಳಲ್ಲಿನ ಭಿತ್ತಿಚಿತ್ರಗಳು :**

**ಗಚ್ಚಿನ ಮಠ ಅಥಣಿ :**

ತಾಲೂಕಾ ಸ್ಥಳವಾದ ಅಥಣಿಯು ಮಹಾರಾಷ್ಟ್ರದ ಗಡಿಗೆ ಹತ್ತಿರವಾಗಿದೆ. ಎರಡನೆಯ ಅಧ್ಯಾಯದಲ್ಲಿ ಹೇಳಿದಂತೆ ಕರ್ನಾಟಕವು ಧರ್ಮ ಮತ್ತು ಸಂಸ್ಕೃತಿಗೆ ಹೆಚ್ಚಿನ ಮಹತ್ವವನ್ನು ಕೊಡುವಂತಹ ರಾಜ್ಯವಾಗಿದೆ. ಅದಕ್ಕಾಗಿ ಇಲ್ಲಿ ಮಠ ಮಾನ್ಯಗಳು ಹಾಗೂ ಮಂದಿರಗಳು ಈ ಜಿಲ್ಲೆಯಲ್ಲಿ ಅಲ್ಲದೇ ಇಡೀ ರಾಜ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ.

ಸುಮಾರು ಇನ್ನೂರಾಐವತ್ತು ವರ್ಷಗಳಿಗೂ ಹಳೆಯದಾದ ಈ ಮಠವು ತುಂಬಾ ವಿಶಾಲವಾಗಿದೆ. ಅಲ್ಲದೇ ಮಠದಲ್ಲಿ ಸ್ವಾಮಿಗಳು ಕುಳಿತುಕೊಳ್ಳುವ ಕೋಣೆಯಲ್ಲಿ ಮಸುಕಾದ ವರ್ಣಚಿತ್ರಗಳು ಕಂಡುಬರುತ್ತವೆ. ಎಂದು ಡಾ. ಶಿವರಾಮ ಕಾರಂತರು[೧೩] ಮೂವತ್ತು

೧೨. ಡಾ.ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪುಟ, ೩೧೪, ೩೧೫

೧೩. ಡಾ.ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಪುಟ, ೫೯



ವರ್ಷಗಳ ಹಿಂದೆ ಇಲ್ಲಿಗೆ ಭೇಟ್ಟಿ ನೀಡಿ ವರದಿ ಮಾಡಿದ್ದಾರೆ. ಎದುರುಬದುರಾಗಿರುವ ಗೋಡೆಗಳ ಮೇಲೆ ಸುಮಾರು ಐದು ಅಡಿಗಳಿಗಿಂತಲೂ ಮೇಲಿನ ಭಾಗದಲ್ಲಿ ಅಸ್ಪಷ್ಟವಾದ ಹಲವು ಮನುಷ್ಯಾಕೃತಿಗಳು, ಪ್ರಾಣಿಗಳು ಜೊತೆಗೆ ಪೌರಾಣಿಕ ಪ್ರಾಣಿಗಳಾದ ಕಾಮಧೇನು, ಶರಭ, ಕಾಲ್ಪಣಿಕ ವಿಚಿತ್ರ ಪ್ರಾಣಿಗಳು ಇಲ್ಲಿದ್ದವು ಎಂದು ತಿಳಿಸುತ್ತಾರೆ. ಆದರೆ ಇಂದು ಅಲ್ಲಿ ಯಾವ ಚಿತ್ರಗಳೂ ಕಂಡುಬರುವುದಿಲ್ಲ. ಏಕೆಂದರೆ ಚಿತ್ರಗಳಿದ್ದ ಕೋಣೆಯನ್ನು ನವೀಕರಿಸಿ ಕಟ್ಟಲಾಗಿದೆ. ಈ ಮಠದಲ್ಲಿನ ಚಿತ್ರಗಳು ಯೋಗ ಮಂಟಪದಲ್ಲಿ ಇದ್ದುದಾಗಿ ಸ್ಥಳೀಯರು ಹೇಳುತ್ತಾರೆ.[೧೪] ಈ ಯೋಗ ಮಂಟಪವು ಮೂರನೆಯ ಸ್ವಾಮಿಗಳಾಗಿದ್ದ ಶ್ರೀ ಚನ್ನಬಸವಸ್ವಾಮಿಗಳ ಕಾಲದಲ್ಲಿ ಕ್ರಿ.ಶ. ೧೬ನೆಯ ಶತಮಾನದ ಅಂತ್ಯಭಾಗದಲ್ಲಿ ರಚನೆಯಾಗಿದ್ದು, ಚಿತ್ರಗಳೂ ಕೂಡ ಅದೇ ಕಾಲದಲ್ಲಿಯೇ ರಚಿಸಲ್ಪಟ್ಟಿದ್ದವು ಎಂದು ಹೇಳಲಾಗಿದೆ.

**೪. ಚರ್ಚ್‌ಗಳಲ್ಲಿನ ಭಿತ್ತಿಚಿತ್ರಗಳು :**

ಹಿಂದೂ ದೇವಾಲಯ, ಮಠಮಾನ್ಯಗಳಲ್ಲಿ ಮತ್ತು ಮುಸ್ಲಿಂ ಧಾರ್ಮಿಕ ಕಟ್ಟಡಗಳಲ್ಲಿ ಭಿತ್ತಿಚಿತ್ರಗಳು ಮತ್ತು ಹೂಬಳ್ಳಿಯ ಚಿತ್ರವಿನ್ಯಾಸಗಳು ಕಂಡುಬರುತ್ತವೆ. ಮುಸ್ಲಿಮರು ಭಾರತದಲ್ಲಿ ಸ್ಥಳೀಯ ಪ್ರಭಾವದಿಂದ ಭಿತ್ತಿಚಿತ್ರಕಲೆಯನ್ನು ತಮ್ಮ ಕಟ್ಟಡಗಳಲ್ಲಿ ಅಳವಡಿಸಿಕೊಂಡರೆ, ಕ್ರಿಶ್ಚಿಯನ್ನರು ಇಲ್ಲಿನ ಪ್ರಭಾವಕ್ಕೆ ಒಳಗಾಗದೇ ಈ ಮೊದಲೇ ತಮ್ಮ ನಾಡಿನಲ್ಲಿ ಪ್ರಚಲಿತದಲ್ಲಿದ್ದ ಭಿತ್ತಿಚಿತ್ರ ಪರಂಪರೆಯನ್ನು ಇಲ್ಲಿನ ಚರ್ಚ್‌ಗಳಲ್ಲೂ ಅಳವಡಿಸಿದರು. ತಮ್ಮ ನಾಡಿನ ಚರ್ಚ್‌ಗಳಲ್ಲಿ ಯೇಸುವಿನ ಜೀವನದ ಘಟನೆಗಳನ್ನು ಮತ್ತು ಪೂರಕವಾಗಿ ಜ್ಯಾಮಿತಿಕ ರೂಪದ ನಕ್ಷಾಚಿತ್ರಗಳನ್ನು ರಚಿಸುತ್ತಿದ್ದ ಪದ್ಧತಿಯನ್ನು ಇಲ್ಲಿಯೂ ಮುಂದುವರಿಸಿದರು.

ಭಾರತದ ಅನೇಕ ಪ್ರಾಚೀನ ಚರ್ಚ್‌ಗಳಲ್ಲಿ ಭಿತ್ತಿಚಿತ್ರಗಳು ರಚನೆಯಾಗಿವೆ. ಗೋವಾದಲ್ಲಿನ ಬಾಮ್‌ಜೀಸಸ್ ಬೆಸೆಲಿಕಾ, ಸಂತಫ್ರಾನ್ಸಿಸ್ ಚರ್ಚ್ ಸೇಕೆಥೆಡ್ರಿಲ್, ಸಂತಕಚೇತನ ಚರ್ಚ್‌ಗಳಲ್ಲಿ ಕ್ರಿ.ಶ. ೧೫ನೆಯ ಶತಮಾನದ ಭಿತ್ತಿಚಿತ್ರಗಳಿವೆ. ಹಾಗೆಯೇ ಕರ್ನಾಟಕದ ಮಂಗಳೂರಿನ ಸೇಂಟ್ ಅಲಾಯಸೆಸ್ ಚರ್ಚ್, ಕುಲಶೇಖರ ಚಚ್, ಜಪ್ಪೋ ಚರ್ಚ್, ಬಂಟ್ವಾಳದ ಅಗರಾರ್ ಚರ್ಚ್‌ಗಳಲ್ಲಿ ಇಪ್ಪತ್ತನೇಯ ಶತಮಾನದ ಪ್ರಾರಂಭದ ಭಿತ್ತಿಚಿತ್ರಗಳಿವೆ. ಉತ್ತರ ಕರ್ನಾಟಕದಲ್ಲಿ ಬೆಳಗಾವಿಯ ಎರಡು ಪ್ರಾಚೀನ ಚರ್ಚ್‌ಗಳಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು ತಿಳಿದುಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ಅ. ಸೇಂಟ್‌ಮೇರಿ ಚರ್ಚ್, ಬೆಳಗಾವಿ ಆ. ಸೇಂಟ್ ಕ್ಸೇವಿಯರ್ ಚರ್ಚ್, ಬೆಳಗಾವಿ

---

೧೪. ಪಂಡಿತ ಚಂದ್ರಶೇಖರ ಶಾಸ್ತ್ರೀ : ಶ್ರೀಮದ್ ಶಿವಯೋಗಿಶ ಮಹಿಮೆ, ಪುಟ ೭



**ಅ. ಸೇಂಟ್‌ಮೇರಿ ಚರ್ಚ್ :**

ಬೆಳಗಾವಿಯಲ್ಲಿ ಇರುವಂತಹ ಈ ಸೇಂಟ್‌ಮೇರಿ ಚರ್ಚ್ ಕ್ರಿ.ಶ. ೧೮೬೯ರಲ್ಲಿ ನಿರ್ಮಾಣವಾಗಿದ್ದು, ಈ ಭವ್ಯವಾದ ಕಲ್ಲಿನ ಕಟ್ಟಡವನ್ನು ಕೆ. ಫ್ರಾನ್ಸಿಸ್‌ಗೆಲ್ ಎಂಬಾತ ವಿನ್ಯಾಸಗೊಳಿಸಿನು.[೧೫] ಈ ಚರ್ಚ್‌ನ ಬಾಗಿಲು ಮತ್ತು ಕಿಟಕಿಗಳಿಗೆ ಬಣ್ಣದ ಗಾಜುಗಳನ್ನು ಹಾಕಲಾಗಿದೆ. ಅಲ್ಲದೇ ಅದರ ಮೇಲೆ ಅಲ್ಲಲ್ಲಿ ನಕ್ಷೆಗಳನ್ನು ರೂಪಿಸಲಾಗಿದೆ. ಚರ್ಚ್‌ನ ಒಳಗೋಡೆಗಳಲ್ಲಿ ಬಣ್ಣಗಳಿಂದ ಬೈಬಲ್ಲಿನ ಘಟನಾವಳಿಗಳನ್ನು ಚಿತ್ರಿಸಲಾಗಿದೆ. ಎಂದು ವಿವರಗಳು ಸಿಗುತ್ತಿದ್ದರೂ ಇಂದು ಒಳಭಾಗದ ಗೋಡೆಯ ಚಿತ್ರಗಳು ಕಂಡುಬರುವುದಿಲ್ಲ. ಕಿಟಕಿಯ ಬಣ್ಣದ ಗಾಜುಗಳ ಮೇಲೆ ಅಲ್ಲಲ್ಲಿ ನಕ್ಷಾರೂಪಗಳು, ಹೂ ಬಳ್ಳಿಯ ನಕ್ಷಾವಿನ್ಯಾಸಗಳು ಮಾತ್ರ ಕಾಣಸಿಗುತ್ತವೆ.[೧೬] ಎಂದು ಡಾ. ಯಾದಪ್ಪ ಪರದೇಶಿಯವರು ಉಲ್ಲೇಖಿಸಿದ್ದಾರೆ.

ಆದರೆ ಪ್ರಸ್ತುತದಲ್ಲಿಯ ವಿಪರ್ಯಾಸವೆಂದರೆ ಅವುಗಳು ಅಸ್ಪಷ್ಟವಾಗಿ ಉಳಿದುಕೊಂಡಿವೆ. ಅಲ್ಲದೇ ಅವುಗಳನ್ನು ನೋಡಿದರೆ ಇಲ್ಲಿ ಮೊದಲು ಚಿತ್ರಗಳಿರಬಹುದೆಂಬುದನ್ನು ತಿಳಿಯಬಹುದು. ಈ ಸ್ಥಳದಲ್ಲಿ ಖಚಿತವಾಗಿ ಚಿತ್ರಗಳೇ ಇದ್ದವು ಎಂದು ಹೇಳಲು ಕಷ್ಟಸಾಧ್ಯವಾಗುಂತಹ ವಿಚಾರಗಳು ಬರುತ್ತವೆ.

**ಆ. ಸೇಂಟ್ ಕ್ಸೇವಿಯರ್ ಚರ್ಚ್ :**

ಬೆಳಗಾವಿಯ ಸೇಂಟ್ ಕ್ಸೇವಿಯರ್ ಚರ್ಚ್‌ನಲ್ಲಿಯೂ ಚಿತ್ರಗಳಿದ್ದುದಾಗಿ ವಿವರಗಳು ಸಿಗುತ್ತಿದ್ದರೂ[೧೭] ಅಲ್ಲಿ ಇಂದು ಯಾವ ಚಿತ್ರಗಳೂ ಉಳಿದಿಲ್ಲ. ಈ ಚರ್ಚ್‌ನ ಕಿಟಕಿಗಳಲ್ಲಿ ಗಾಜಿನ ಮೇಲೆ ಕ್ರಿಸ್ತನ ಜೀವನದ ಘಟನೆಗಳನ್ನೂ ಚಿತ್ರಿಸಲಾಗಿದೆ ಎಂಬ ವಿವರಣೆಗಳು ದೊರೆಯುತ್ತವೆ. ಆದರೆ ಹಳೆಯದಾದ ಸೇಂಟ್ ಕ್ಸೇವಿಯರ್ ಚರ್ಚ್‌ನ್ನು ಪೂರ್ತಿಯಾಗಿ ನೆಲಸಮಗೊಳಿಸಿ, ಬೇರೆ ಕಡೆಗೆ ನವ್ಯ ರೀತಿಯಲ್ಲಿ ಕಟ್ಟಲಾಗಿದೆ. ಈಗ ಬೆಳಗಾವಿಯಲ್ಲಿ ಪ್ರಾಚೀನ ಚರ್ಚ್‌ಗಳಲ್ಲಿ ಕಂಡುಬರುವ ಭಿತ್ತಿಚಿತ್ರಗಳ ಉದಾರಣೆ ಎಂದರೆ ಸೇಂಟ್ ಮೇರಿ ಚರ್ಚ್‌ನ ಕಿಟಕಿಗಳ ಬಣ್ಣದ ಗಾಜಿನ ಮೇಲೆ ಕಂಡುಬರುವ ನಕ್ಷಾವಿನ್ಯಾಸಗಳಾಗಿವೆ. ಚರ್ಚ್‌ಗಳಲ್ಲಿನ ಭಿತ್ತಿಚಿತ್ರ ಕಲೆಯು ಜ್ಯಾಮಿತಿಕ ರೂಪದ ನಕ್ಷಾವಿನ್ಯಾಸ ಇಲ್ಲವೆ ಕ್ರಿಸ್ತನ ಜೀವನದ ಘಟನೆಗಳನ್ನು ಪ್ರತಿಬಿಂಬಿಸುವಲ್ಲಿ ಸೀಮಿತಗೊಂಡಿದೆ.

ಹಿಂದೂ ದೇವಾಲಯ, ಮಠಮಾನ್ಯಗಳಂತೆ ವೈವಿಧ್ಯ ವಿಷಯ ಸಂಪತ್ತು. ಹಲವು ಉದ್ದೇಶಗಳ ಹಿನ್ನಲೆಯಲ್ಲಿ ಇಲ್ಲಿನ ಭಿತ್ತಿಚಿತ್ರಕಲೆ ರೂಪುಗೊಂಡಿರದೇ,ಕಟ್ಟಡದ ಸೌಂದರ್ಯ

೧೫. ಸೆಬಾಸ್ಟಿಯನ್ ಜೋಸೆಫ್ (ಸಂ) : ಕರ್ನಾಟಕ ಚರಿತ್ರೆ, ಸಂಪುಟ ೬, ಪುಟ, ೨೬೪

೧೬. ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪಿಹೆಚ್.ಡಿ. ಮ.ಪ್ರ. ಪುಟ, ೩೫೪

೧೭. ಹಿಸ್ಟಾರಿಕ್ ಮ್ಯಾಗಿಕ್ : ಟೂರಿಸ್ಟಗೈಡ್ (ನಾರ್ಥ ಕರ್ನಾಟಕ), ಪುಟ ೧



# ಚರ್ಚಗಳಲ್ಲಿ ಭಿತ್ತಿಚಿತ್ರಕಲೆ



ಬೆಳಗಾವಿಯ ಸೇಂಟ್‌ಮೇರಿ ಚರ್ಚ



ಕಿಟಕಿ ಗಾಜಿನ ಮೇಲಿರುವ ನಕ್ಷಾ ಚಿತ್ರಗಳು







ಗಾಜಿನ ಮೇಲಿನ ಚಿತ್ರಗಳು

ಕೃಪೆ : ಡಾ.ಯಾದಪ್ಪ ಪರದೇಶಿ



ಮತ್ತು ಕ್ರೈಸ್ತಧರ್ಮದ ವಿಚಾರಗಳನ್ನು ತಿಳಿಸಲು ಸೀಮಿತಗೊಂಡಂತೆ ಕಂಡುಬರುತ್ತದೆ. ಅನ್ಯ ಪ್ರದೇಶಗಳಲ್ಲಿನ ಚರ್ಚ್‌ಗಳಲ್ಲಿ ರಚನೆಯಾದ ಭಿತ್ತಿಚಿತ್ರಕಲೆಯಲ್ಲಿ ಹಲವು ಉದ್ದೇಶ, ವೈವಿಧ್ಯತೆಗಳು ಇದ್ದಿರಬಹುದಾದರೂ ಉತ್ತರ ಕರ್ನಾಟಕ ಭಾಗದ ಚರ್ಚ್‌ಗಳ ಭಿತ್ತಿಚಿತ್ರಗಳಲ್ಲಿ ಅಂತಹ ವೈವಿಧ್ಯತೆ ಕಂಡುಬರುವುದಿಲ್ಲ.

**೫. ಮನೆಗಳಲ್ಲಿರುವ ಭಿತ್ತಿಚಿತ್ರಕಲೆ:**

ರಾಜರು, ಸಂಸ್ಥಾನಿಕರು ತಮ್ಮ ಅರಮನೆ, ರಾಜವಾಡೆಗಳನ್ನು ಭಿತ್ತಿಚಿತ್ರಕಲೆಯಿಂದ ಅಲಂಕರಿಸಿದಂತೆ, ಅವರ ಕೈಕೆಳಗಿನ ಅಧಿಕಾರಿಗಳು, ನಂತರದಲ್ಲಿ ಗೌಡರು, ಶ್ಯಾನುಭೋಗರು, ದೇಸಾಯಿಗಳಂತಹ ಊರಿನ ಪ್ರತಿಷ್ಠಿತ ಜನರು ಸಹಿತ ತಮ್ಮ ಮನೆಗಳನ್ನು ಭಿತ್ತಿಚಿತ್ರಗಳಿಂದ ಸುಂದರಗೊಳಿಸಿದ್ದಾರೆ. ಶ್ರೀರಂಗಪಟ್ಟಣದ ನವಾಬರ ಬಳಿ ಅಧಿಕಾರಿಯಾಗಿದ್ದ ನಲ್ಲಪ್ಪನೆಂಬುವವನು ಶಿಬಿಯ ನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿ ಅಲ್ಲಿ ಭಿತ್ತಿಚಿತ್ರಗಳನ್ನು ಬರೆಸಿದಂತೆ ತುಮಕೂರಿನಲ್ಲಿರುವ ತನ್ನ ನಿವಾಸದಲ್ಲಿರುವ ತನ್ನ ನಿವಾಸದಲ್ಲಿಯೂ ಭಿತ್ತಿಚಿತ್ರಗಳನ್ನು ರಚಿಸಿ ಅದನ್ನು ಅಲಂಕರಿಸಿದ್ದಾನೆ. ಈ ಜೀರ್ಣವಾದ ಮನೆಯನ್ನು ತುಮಕೂರಿನಲ್ಲಿ ಇಂದಿಗೂ ನೋಡಬಹುದಾಗಿದೆ.

ಉತ್ತರ ಕರ್ನಾಟಕದಲ್ಲಿಯೂ ಪ್ರತಿಷ್ಠಿತರ ಮನೆಯಲ್ಲಿ ಭಿತ್ತಿಚಿತ್ರಗಳು ರಚನೆಯಾಗಿದ್ದು ಕಂಡುಬರುತ್ತದೆ. ಅವುಗಳಲ್ಲಿ ಗುಳೇದಗುಡ್ಡದ ಹೊಸಮನಿಗೌಡರ ಮನೆ, ರಾಯಚೂರಿನ, ಖಾಜಿನಗೌಡರ ಮನೆ ಅಲ್ಲದೇ ಮುಖ್ಯವಾಗಿ ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಬೆಳಗಾವಿ ಜಿಲ್ಲೆಯ ಸಂಕೇಶ್ವರದ ಮಮದಾಪುರ ಹಾಗೂ ಗೋಕಾಕ್ ತಾಲೂಕಿನ ಅರಬಾವಿಯ ಬಂಡಿವಡ್ಡರ ಅವರ ಮನೆಯಲ್ಲಿಯು ಸಹ ಭಿತ್ತಿಚಿತ್ರಗಳು ಇದ್ದದ್ದು ತಿಳಿದುಬರುತ್ತವೆ.

**ಮಮದಾಪುರ ಅವರ ಮನೆ ಸಂಕೇಶ್ವರ :**

ಬೆಳಗಾವಿ ಜಿಲ್ಲೆಯ ಸಂಕೇಶ್ವರದ ವರ್ತಕರೊಬ್ಬರ ಮನೆಯಲ್ಲಿ ಸುಮಾರು ಕ್ರಿ.ಶ. ೧೮೭೦ ರಲ್ಲಿ ರಚನೆಯಾದ ಭಿತ್ತಿಚಿತ್ರಗಳು ಕಂಡುಬರುತ್ತವೆ. ಈ ಮನೆಯ ಗೋಡೆಯ ಮೇಲೆ ಮೊದಲು ಲಕ್ಷ್ಮೀ, ಸರಸ್ವತಿ, ಗಣಪತಿ, ಶಿವ ಹೀಗೆ ದೇವತಾ ಚಿತ್ರಗಳು ಇದ್ದುದಾಗಿ ಹೇಳುತ್ತಾರೆ. ಡಾ. ಯಾದಪ್ಪ ಪರದೇಶಿಯವರು ಹೇಳುವಹಾಗೆ ಆ ಚಿತ್ರಗಳು ಇದ್ದ ಗೋಡೆಯ ಮೇಲೆ ಸುಣ್ಣ, ಬಣ್ಣವನ್ನು ಬಳಿಯಲಾಗಿದೆ. ಆದರೆ ಕೇವಲ ಹೂಬಳ್ಳಿಯ ನಕ್ಷಾವಿನ್ಯಾಸಗಳು ಮಾತ್ರ ಉಳಿದುಕೊಂಡಿವೆ.[೧೮] ಅವುಗಳಲ್ಲಿಯೂ ಸಹ ಕೆಲವೊಂದು ಚಿತ್ರಗಳು ಅಸ್ಪಷ್ಟವಾಗಿ ಕಾಣುತ್ತವೆ. ಇನ್ನು ಕೆಲವು ಕಾಣಿಸುವುದೇ ಇಲ್ಲ. ಮನೆಯ ಎಲ್ಲ ಬದಿಯ ಗೋಡೆಗಳಲ್ಲಿ ಸುಮಾರು ೪ ರಿಂದ ೫ ಅಡಿಗಳ ಎತ್ತರದಲ್ಲಿ ಅಡ್ಡ ಪಟ್ಟಿಯನ್ನು ರಚಿಸಿ

---

೧೮. ಡಾ. ಯಾದಪ್ಪ ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪಿಹೆಚ್.ಡಿ. ಮ.ಪ್ರ. ಪುಟ ೩೮೦



ಅದರಲ್ಲಿ ಹೂಬಳ್ಳಿಯ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ. ಮಾಡುಗಳು, ಕಿಟಕಿ, ಬಾಗಿಲುಗಳು ಇದ್ದಲ್ಲಿ ಅವುಗಳ ಅಂಚುಗಳಿಗೆ ವಿಶೇಷವಾಗಿರುವ ನಕ್ಷಾವಿನ್ಯಾಸಗಳನ್ನು ಮಾಡಲಾಗಿದೆ. ಮನೆಯ ಉದ್ದಕ್ಕೂ ಒಂದೇ ಬಗೆಯ ವಿನ್ಯಾಸವಿದ್ದು ಹೆಚ್ಚಿನ ವೈವಿಧ್ಯತೆ ಕಂಡುಬರುವುದಿಲ್ಲ. ಈ ಚಿತ್ರಗಳು ತೈಲವರ್ಣದಿಂದ ರಚಿಸಲ್ಪಟ್ಟಿವೆ.

ಮನೆಯಲ್ಲಿ ರಚನೆಯಾದ ಭಿತ್ತಿ ಚಿತ್ರಕಲೆಯು ಸಂಪೂರ್ಣವಾಗಿ ವೈಯಕ್ತಿಕ ಭಾವನೆಗಳಿಗೆ ಸಂಬಂಧಿಸಿದಂತೆ ಚಿತ್ರಿಸಲ್ಪಟ್ಟಿರುತ್ತವೆ. ಪೋಷಕನ ಅಭಿರುಚಿ, ಅನಿಸಿಕೆಗಳಿಗೆ ಅನುಸಾರವಾಗಿ ರಚನೆಯಾಗುವ ಈ ಮನೆಯಲ್ಲಿಯ ಭಿತ್ತಿ ಚಿತ್ರಕಲೆಯಲ್ಲಿ ಇಷ್ಟದ ದೇವತೆಗಳು, ಮನೆಯ ವಂಶಸ್ಥರು, ಅವರ ಚಟುವಟಿಕೆಗಳು ಹಾಗೂ ಆಚರಿಸುವ ಧಾರ್ಮಿಕ ವಿಧಿಗಳಂತಹ ಘಟನೆಗಳನ್ನು ರಚಿಸಲಾಗಿದೆ. ಹಾಗೆ ಆಭರಣಗಳು, ವೇಷಭೂಷಣಗಳು ಹಿಂದಿನ ದಿನಗಳಲ್ಲಿ ಈ ಮನೆತನಕ್ಕೆ ಇರುವ ಪ್ರತಿಷ್ಠೆ ಮತ್ತು ಗೌರವಗಳನ್ನು ಅವರ ಸ್ಥಿತಿಗತಿಗಳನ್ನು ನೆನಪಿಸುವ ಕನ್ನಡಿಗಳಾಗಿವೆ.

**ಬಂಡಿವಡ್ಡರ ಮನೆ ಅರಬಾವಿ :**

ಸುಮಾರು ೩೦೦ ವರ್ಷಗಳಿಗಿಂತ ಹೆಚ್ಚಿನ ಇತಿಹಾಸವನ್ನು ಹೊಂದಿರುವ ಈ ಮನೆಯಲ್ಲಿ ಭಿತ್ತಿಚಿತ್ರಗಳು ಕಂಡುಬಂದಿವೆ. ಭವ್ಯವಾದ ಮತ್ತು ಸುಂದರವಾದ ಕಟ್ಟಡವನ್ನು ಹೊಂದಿದ ಈ ಮನೆ ೩ ಅಂತಸ್ಥನ್ನು ಹೊಂದಿದೆ. ಹಾಗೂ ದೊಡ್ಡದಾದ ಬಾಗಿಲು, ಬಾಗಿಲಿನಿಂದ ಒಳಗೆ ಬಂದರೆ ೨೦೦ ಜನರು ಕುಳಿತುಕೊಳ್ಳುವಷ್ಟು ವಿಶಾಲವಾದ ಪಡಸಾಲೆ, ಈ ಪಡಸಾಲೆಗೆ ಹತ್ತಿಕೊಂಡು ೩ ಕೋಣೆಗಳು ಇವೆ. ಈ ಕೋಣೆಯ ಎಡ ಮತ್ತು ಬಲ ಭಾಗಗಳಲ್ಲಿ ಮೇಲಿನ ಅಂತಸ್ಥಿಗೆ ಹೋಗಲು ಮೆಟ್ಟಿಲುಗಳು ಇವೆ. ಮೇಲಿನ ಅಂತಸ್ಥಿನಲ್ಲಿ ೨ ಕೋಣೆಗಳು, ಹಾಗೂ ೩ ನೇಯ ಅಂತಸ್ಥಿನಲ್ಲಿ ೨ ಕೋಣೆಗಳು ಇದ್ದು, ಪ್ರತಿಯೊಂದು ಕೋಣೆಗಳಲ್ಲಿ ಭಿತ್ತಿಚಿತ್ರಗಳು ಇದ್ದವು. ಆದರೆ ಪ್ರಸ್ತುತದಲ್ಲಿ ಒಂದೇ ಒಂದು ಕೋಣೆಯಲ್ಲಿ ಭಿತ್ತಿಚಿತ್ರಗಳು ಉಳಿದುಕೊಂಡಿವೆ.

ಈ ಚಿತ್ರಗಳಲ್ಲಿ ಮುಖ್ಯವಾಗಿ ಸುಂದರವಾದ ಹೂಬಳ್ಳಿಯ ನಕ್ಷಾವಿನ್ಯಾಸಗಳು ಇರುವುದು ಕಂಡುಬರುತ್ತದೆ. ಅಲ್ಲದೇ ಹೂಬಳ್ಳಿಯ ಮೇಲೆ ಕುಳಿತಂಥ ಪಕ್ಷಿಗಳು, ಈ ಪಕ್ಷಿಗಳನ್ನು ನೋಡಿದರೆ ಪ್ರೇಮಿ ಹಕ್ಕಿಗಳಾಗಿ(Love Birds)ರಬಹುದೆಂಬುದು ಭಾಸವಾಗುತ್ತದೆ. ಏಕೆಂದರೆ ಪಕ್ಷಿಗಳು ಸಂಪೂರ್ಣವಾಗಿ ಮೈಮರೆತು ಚಲ್ಲಾಟವಾಡುತ್ತಿದ್ದು, ಒಂದಕ್ಕೊಂದು ಗುಟುಕು ನೀಡುವಂತಹ ದೃಶ್ಯಗಳು ಈ ಚಿತ್ರಗಳಲ್ಲಿ ನೋಡಬಹುದು. ಈ ಗೋಡೆಯ ಎದುರಿನ ಗೋಡೆಯಲ್ಲಿ ದ್ರಾಕ್ಷಿಹಣ್ಣಿನ ಬಳ್ಳಿಯ ಮೇಲೆ ಕುಳಿತು ಹಣ್ಣು ತಿನ್ನುತ್ತಿರುವಂತ ಗಿಳಿಗಳು ಕಂಡುಬರುತ್ತವೆ. ಜೊತೆಗೆ ಹೂವಿನ ಆಸನದ ಮೇಲೆ ಕುಳಿತ ಯುವಕ ವೀಣೆಯನ್ನು ನುಡಿಸುತ್ತಿರುವುದು ಕಾಣಬಹುದು. ಅಲ್ಲದೇ ಕಿಟಕಿ, ಬಾಗಿಲಿನ ಸುತ್ತಲೂ ಸುಂದರವಾದ



# ಅರಬಾವಿ ಬಂಡಿವಡ್ಡರ ಮನೆಯಲ್ಲಿರುವ ಗೋಡೆಯ ಮೇಲಿನ ಚಿತ್ರಗಳು









ಗೋಡೆಯ ಮೇಲಿನ ಚಿತ್ರಗಳು



## ಅರಬಾವಿ ಬಂಡಿವಡ್ಡರ ಅವರ ಮನೆ



ಪಕ್ಷಿಗಳ ಚಿತ್ರಗಳು



ಗೋಡೆಯ ಅಲಂಕರಣ ಚಿತ್ರಗಳು

ಗೋಡೆಯ ಮೇಲಿನ ಪಕ್ಷಿಗಳ ಚಿತ್ರಗಳು



ಹೂಬಳ್ಳಿಯ ನಕ್ಷಾವಿನ್ಯಾಸಗಳನ್ನು ನೋಡಬಹುದು. ಅಲ್ಲದೇ ಗೋಡೆಯ ಅಂಚುಗಳಿಗೆ ಹೂವಿನ ಬೊಕ್ಕೆಗಳನ್ನು ಚಿತ್ರಿಸಲಾಗಿದೆ. ೩೦೦ ವರ್ಷಗಳಿಗಿಂತ ಹೆಚ್ಚಿನ ಇತಿಹಾಸವನ್ನು ಹೊಂದಿರುವ ಈ ಚಿತ್ರಗಳು ಜಲವರ್ಣದಲ್ಲಿ ರಚಿಸಲ್ಪಟ್ಟದ್ದು, ಅಸ್ಪಷ್ಟವಾಗಿ ಉಳಿದುಕೊಂಡಿವೆ.

ಇದೇ ರೀತಿಯ ಭಿತ್ತಿಚಿತ್ರಗಳು ಮನೆಯ ಎಲ್ಲ ಕೋಣೆಗಳಲ್ಲಿ ಇದ್ದವು ಆದರೆ ಅವುಗಳ ಮೇಲೆ ಸುಣ್ಣ, ಬಣ್ಣವನ್ನು ಹಚ್ಚಿದ್ದರಿಂದ ಅವುಗಳು ಕಣ್ಮರೆಯಾಗಿವೆ. ಈ ಮೇಲಿನ ಅಂತಸ್ಥಿನ ಕೋಣೆಯಲ್ಲಿ ಚಿತ್ರಗಳು ಉಳಿದುಕೊಳ್ಳಲು ಕಾರಣವೆನೆಂದರೆ ಈ ಕೋಣೆಯು ಬಳಕೆಯಲ್ಲಿಲ್ಲ, ಜೊತೆಗೆ ಆ ಕೋಣೆಯಲ್ಲಿ ಯಾರು ಇರುವುದಿಲ್ಲ. ಈ ಕೋಣೆಯಲ್ಲಿ ಮನೆಗೆ ಸಂಬಂಧಿಸಿದಂತಹ ಹಳೆಯ ವಸ್ತುಗಳನ್ನು ಕೂಡಿಹಾಕಿದ್ದಾರೆ. ಪ್ರಸ್ತುತದಲ್ಲಿ ಈ ಮನೆಯೇ ವಿನಾಶದ ಅಂಚಿನಲ್ಲಿದೆ. ಏಕೆಂದರೆ ರಸ್ತೆಯ ಅಗಲಿಕರಣಕ್ಕಾಗಿ ಸರ್ಕಾರದವರು ಈ ಮನೆಯನ್ನು ತೆರವುಗೊಳಿಸವ ವಿಚಾರದಲ್ಲಿದ್ದಾರೆ. ಇಂತಹ ಇತಿಹಾಸವನ್ನು ಹೊಂದಿರುವ ಮನೆಗಳನ್ನು ಸರ್ಕಾರದವರು ಸಂರಕ್ಷಿಸಬೇಕು.

ಒಟ್ಟಾರೆಯಾಗಿ ಭಿತ್ತಿಚಿತ್ರಕಲೆಯು ಆಯಾ ಮಾಧ್ಯಮದ, ಆಯಾ ಜನಸಮೂದಾಯದ, ಆಯಾ ಸಂಸ್ಕೃತಿಯ ಅಲ್ಲದೇ ನಾಗರಿಕತೆಯು ಬೆಳದುಬಂದಂತೆ ಅವರವರ ಅವಶ್ಯಕತೆಯ ಹಿನ್ನೆಲೆಯಲ್ಲಿ ಬೇರೆ ಬೇರೆಯಾಗಿ ಬಳಕೆಗೊಂಡಿರುವುದು ತಿಳಿದುಬರುತ್ತದೆ. ಬೆಳಗಾವಿ ಜಿಲ್ಲೆಯಲ್ಲಿ ಇರುವಂತಹ ಭಿತ್ತಿಚಿತ್ರಗಳಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ, ಸೌಂದರ್ಯ ಪ್ರತೀಕ ವಾಗಿರುವಂತಹ ಭಿತ್ತಿಚಿತ್ರಗಳನ್ನು ಹೆಚ್ಚಾಗಿ ಕಾಣಬಹುದು. ಆದರೆ ಇಂತಹ ವೈಭವಯುಕ್ತ ಭಿತ್ತಿಚಿತ್ರಗಳು ನಶಿಸಿ ಹೋಗುವಂತಹ ಸ್ಥಿತಿಯಲ್ಲಿವೆ. ಆದ್ದರಿಂದ ಸರ್ಕಾರ, ಸಂಘ, ಸಂಸ್ಥೆಗಳು ಭಿತ್ತಿಚಿತ್ರಗಳನ್ನು ಸಂರಕ್ಷಿಸಿಸಲು ಅಗತ್ಯ ಕ್ರಮ ಕೈಗೊಂಡರೆ ಮುಂದಿನ ಪಿಳಿಗೆಗೆ ಭಿತ್ತಿಚಿತ್ರಕಲೆಯ ಪರಂಪರೆಯನ್ನು ಉಳಿಸಿಕೊಂಡು ಹೋಗಲು ಸಾಧ್ಯವಾಗಬಹುದು.

* * * * *



ಕಲಾ ಪ್ರಪಂಚದಲ್ಲಿ ಭಾರತೀಯ ಚಿತ್ರಕಲಾ ಕೊಡುಗೆ ಅಪಾರವಾದುದು. ಇಲ್ಲಿಯ ಕಲಾಕೃತಿಗಳ ವಸ್ತುವಿಷಯ ಮತ್ತು ಶೈಲಿಯ ವೈಶಿಷ್ಟ್ಯ ಇವುಗಳ ದೃಷ್ಟಿಯಿಂದ ನಮ್ಮ ಚಿತ್ರಕಲಾ ಪರಂಪರೆಯ ಸಂಪತ್ತು ಅಪೂರ್ವವಾಗಿದೆ. ಭಾರತದಾದ್ಯಂತವೂ ಕಂಡುಬರುವ ಈ ಚಿತ್ರಕಲೆಯ ಅಭಿವ್ಯಕ್ತಿ ತನ್ನ ಆದರ್ಶವನ್ನು ಎಲ್ಲಾ ಕಾಲದಲ್ಲಿ ಉಳಿಸಿಕೊಂಡು ಬಂದಿದೆ. ಇಂತಹ ಅನನ್ಯವಾದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ ಕಲಾಕೃತಿಗಳು ಮತ್ತು ಅವುಗಳ ವಿಮರ್ಶೆ, ಕಲಾ ಇತಿಹಾಸ ಮುಂತಾದ ಅಂಶಗಳು ಹಾಗೂ ಕಲಾವಿದರ ಕುರಿತ ಅಧ್ಯಯನಗಳು ಮಾತ್ರ ಅಷ್ಟೊಂದು ಗಂಭೀರವಾಗಿ ನಮ್ಮ ದೇಶದಲ್ಲಿ ನಡೆದಿಲ್ಲ.[೧] ಆದರೆ ಈ ದಿಸೆಯಲ್ಲಿ ಪ್ರಸ್ತುತವಾಗಿ ಅಧ್ಯಯನಗಳು ದಾಪುಗಾಲು ಹಾಕುತ್ತಾ ಸಾಗಿವೆ.

ಕಲೆ ಎಂಬುದು ಮೂಲತಃ ಸೃಜನಶೀಲ ಸೃಷ್ಟಿಕ್ರಿಯೆ. ಈ ಸೃಷ್ಟಿಕ್ರಿಯೆ ಕಲಾವಿದನೊಬ್ಬನ ಸೃಜನಶೀಲ ದೃಷ್ಟಿಯಿಂದ ಆಗುವಂಥದ್ದು. ಈ ಕ್ರಿಯೆಯ ಹರುವು ಮತ್ತು ಹರಿವು ಒಂದೊಂದು ಮಾಧ್ಯಮದಲ್ಲಿ ಒಂದೊಂದು ಬಗೆಯದಾಗಿರುತ್ತದೆ.[೨] ಕಲಾವಿದನಿಗೆ ಅಭಿವ್ಯಕ್ತಿ ಎಂಬುದು ಸ್ವಯಂ ಪ್ರೇರಿತವಾಗಿ ಬರುವಂಥದ್ದು. ಇದಕ್ಕೆ ಮಾಧ್ಯಮ ಅಡ್ಡಿಯಾಗಲಾರದು. ತನಗೆ ಸಿಕ್ಕ ಅವಕಾಶದಲ್ಲಿ, ಮಾಧ್ಯಮದಲ್ಲಿ ಕಲಾವಿದ ತನ್ನ ಪ್ರತಿಭೆಯನ್ನು ತೋರಿಸುತ್ತಾನೆ. ಹೀಗೆ

೧. ಡಾ. ಲಕ್ಷ್ಮಿದೇವಿ ಗವಾಯಿ, ಕಲಾವಿದ ಎಂ.ಎ. ಚಟ್ಟಿಯವರ ಜೀವನ, ಕಲಾಕೃತಿಗಳು ಒಂದು ಅಧ್ಯಯನ, ಪುಟ, ೩

೨. ಡಾ. ಶಿವಾನಂದ ಬಂಟನೂರ, ಕಲಾ ವಾರ್ತೆ, (ಲೇ), ಸೃಜನಶೀಲ ದೃಷ್ಟಿ, ಸೃಷ್ಟಿ, ಪುಟ, ೬



ಒಬ್ಬ ಕಲಾವಿದ ತನ್ನ ಪ್ರತಿಭೆಯನ್ನು ಯಶಸ್ಸನ್ನು ಪಡೆಯುತ್ತಾನೆ. ಕೆಲವು ಕಲಾವಿರು ಯಾವುದೇ ಪ್ರಶಸ್ತಿ, ಜನಪ್ರಿಯತೆ ಬಯಸದೆ ತಮ್ಮ ಮನಸ್ಸಿನ ತೃಪ್ತಿಗಾಗಿ, ಜನರ ಆನಂದಕ್ಕಾಗಿ ಕಲೆಯಲ್ಲಿ ಮಗ್ನರಾಗಿರುತ್ತಾರೆ. ಕಲೆಯ ಬೆಳವಣಿಗೆಗೆ, ಅದರ ಶ್ರೀಮಂತಿಕೆಯನ್ನು ತೋರಿಸಲು ಅನೇಕ ಹಿರಿಯ ಕಲಾವಿದರು ಬೆಳಗಾವಿ ಜಿಲ್ಲೆಯಲ್ಲಿ ಶ್ರಮಿಸುತ್ತಿದ್ದಾರೆ.

ಬೆಳಗಾವಿ ಜಿಲ್ಲೆ ಕರ್ನಾಟಕದ ವಾಯುವ್ಯ ಗಡಿ ಪ್ರದೇಶವಾಗಿದೆ. ಚಿತ್ರಕಲೆಗೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದು ಮಹಾರಾಷ್ಟ್ರ ಮತ್ತು ಕರ್ನಾಟಕದ ಸಂಸ್ಕೃತಿಗಳನ್ನು ಒಂದುಗೂಡಿಸಿ ಅದು ಹೊಸದೊಂದು ಸೊಬಗನ್ನು ನೀಡಿದೆ. ಇಲ್ಲಿನ ಕಲಾವಿದರು ಗಡಿನಾಡ ಸಂಸ್ಕೃತಿಯನ್ನು ಒಟ್ಟಾಗಿ ತಮ್ಮದೇ ಆದ ಶೈಲಿ, ತಂತ್ರಗಳಿಂದ ಉತ್ಕೃಷ್ಟ ಕಲಾಕೃತಿಯನ್ನು ರಚಿಸಿ ಈ ನಾಡಿಗೆ ಕೊಡುಗೆಯಾಗಿ ನೀಡಿದ್ದಾರೆ. ಬೆಳಗಾವಿ ಜಿಲ್ಲೆಯ ಸಮಕಾಲೀನ ಹಿರಿಯ ಕಲಾವಿದರಲ್ಲಿ ಜಿ.ಎಸ್. ದಂಡಾವತಿಮಠ, ಎಂ.ಎ. ಚಟ್ಟಿ, ಕೆ.ಬಿ. ಕುಲಕರ್ಣಿ, ಚಂದ್ರಕಾಂತ ಕುಸನೂರ, ವ್ಹಿ.ಸಿ. ಮಾಲಗತ್ತಿ, ಮುರಗೋಡ ಭೀಮರಾವ, ಮುರಗೋಡ ಈಶ್ವರಪ್ಪ, ಚಿನ್ನಣ್ಣವರ, ಬಿ.ಕೆ, ಹುಬಳಿ ಇನ್ನೂ ಮುಂತಾದ ಕಲಾವಿದರು ಬೆಳಗಾವಿ ಜಿಲ್ಲೆಯಲ್ಲಿ ಇದ್ದಾರೆ. ಬೆಳಗಾವಿ ಜಿಲ್ಲೆಯ ಕಲಾ ಸಂಪತ್ತು ಸಮೃದ್ಧವಾಗುವಲ್ಲಿ ಈ ಕಲಾವಿದರ ಪಾತ್ರ ಮಹತ್ವದ್ದಾಗಿದೆ.

**ಹಿರಿಯ ಕಲಾವಿದರ ಬದುಕು ಮತ್ತು ಕಲಾಕೃತಿಗಳು :**

**ಜಿ.ಎಸ್. ದಂಡಾವತಿಮಠ :**

ಬೆಳಗಾವಿ ಜಿಲ್ಲೆಯ ಅತ್ಯಂತ ಹಿರಿಯ ಕಲಾವಿದರಲ್ಲಿ ಜಿ.ಎಸ್. ದಂಡಾವತಿಮಠ ಇವರು ಒಬ್ಬರಾಗಿದ್ದಾರೆ. ಜಂಗಮ ಮನೆತನದ ಶಂಕರಯ್ಯ, ಗಂಗವ್ವ ದಂಪತಿಗಳ ಮಗನಾಗಿ ೨೦-೦೮-೧೯೦೦ರಲ್ಲಿ ಗಂಗಾಧರಯ್ಯ .ಎಸ್. ದಂಡಾವತಿಮಠ ಅವರು ಜನಿಸಿದರು. ಇವರು ಬೈಲಹೊಂಗಲದಲ್ಲಿ ಪ್ರಾಥಮಿಕ ಶಿಕ್ಷಣ ಪೂರೈಸಿ, ಮಾಧ್ಯಮಿಕ ಶಿಕ್ಷಣಕ್ಕಾಗಿ ಧಾರವಾಡಕ್ಕೆ ಬಂದರು. ಆದರೆ ರೈತಾಪಿ ಕುಟುಂಬದವರಾದ ಇವರ ಆರ್ಥಿಕ ಅನಾನೂಕೂಲದಿಂದಾಗಿ ಮಾಧ್ಯಮಿಕ ಶಿಕ್ಷಣ ಅರ್ಧಕ್ಕೆ ಕುಂಟಿತಗೊಂಡಿತು.

ನಂತರ ಕುಟುಂಬದ ನಿರ್ವಹಣೆಗಾಗಿ ವ್ಯಾಕ್ಸಿನೇಟರ್ ಹುದ್ದೆಯನ್ನು ಸೇರಿದರು. ಈ ಕೆಲಸದಿಂದ ಒಮ್ಮೊಮ್ಮೆ ಉಂಟಾಗುತ್ತಿದ್ದ ಬೇಸರವನ್ನು ಕಳೆಯಲು ಹಾಳೆ, ಪೆನ್ಸಿಲಗಳ ಒಡನಾಟ ರೂಢಿಸಿಕೊಂಡರು. ತಮ್ಮ ಕಾರ್ಯದ ಜೊತೆ ಜೊತೆಗೆ ಚಿತ್ರ ಬರೆಯವ ಹವ್ಯಾಸವನ್ನು ಬೆಳೆಸಿಕೊಂಡರು. ಇದರ ಫಲವಾಗಿ ದಂಡಾವತಿಮಠ ಅವರು ದಿನೇ ದಿನೇ ಕಲಾವಿದನಾಗುವ ಭರವಸೆಯನ್ನು ಹೆಚ್ಚಿಸಿದವು. ಇವರು ಬರೆದ ಚಿತ್ರಗಳನ್ನು ನೋಡಿ ಸರಿ ತಪ್ಪುಗಳನ್ನು ತಿದ್ದುವರು ಇರಲಿಲ್ಲ. ಅಂತಹ ಸಂದರ್ಭದಲ್ಲಿ ಇವರ ಪ್ರತಿಭೆಯನ್ನು ಮೊದಲು



ಗುರುತಿಸಿದವರೆಂದರೆ ಎನ್.ಎಂ. ನೆರ್ಲೆಕರ್ ಅವರು. ಇವರು ಒಬ್ಬ ನುರಿತ ಕಲಾ ಶಿಕ್ಷಕರಾಗಿದ್ದರು. ಯಾವುದೇ ಕಲಾಪಾಠ, ಕಲಾ ತರಬೇತಿ ಹೊಂದದೆ ಇರುವ ಗಂಗಾಧರಯ್ಯನವರ ಅದ್ಭುತ ಚಿತ್ರರಚನೆಯನ್ನು ಕಂಡು ಎನ್.ಎಂ. ನೆರ್ಲೆಕರ್ ಅವರು ಸಂತೋಷ ವ್ಯಕ್ತಪಡಿಸಿದರು. ಭವಿಷ್ಯದಲ್ಲಿ ಶ್ರೇಷ್ಠ ಕಲಾವಿದನಾಗುವ ಲಕ್ಷಣಗಳು ಅವರು ಗಂಗಾಧರಯ್ಯನವರಲ್ಲಿ ಕಂಡರು. "ನಿಮ್ಮಲ್ಲಿ ಅಪಾರ ಕಲಾ ಶಕ್ತಿಯಿದೆ, ನಿಮ್ಮ ನಿರಾಸ ನೌಕರಿಯನ್ನು ಬಿಡದಿದ್ದರೆ ಕಲಾದೇವತೆಗೆ ಅಪಚಾರ ಮಾಡಿ ನಿಮ್ಮನ್ನು ನೀವೆ ವಂಚಿಸಿಕೊಂಡಂತಾಗುತ್ತದೆ. ಈ ಕಲಾ ಸೇವೆಯಲ್ಲಿ ಮುಂದುವರೆಯಿರಿ" ಎಂದು ಸೂಚಿಸಿದರು. ನೆರ್ಲೆಕರರ ಈ ನುಡಿಗಳು ಗಂಗಾಧರಯ್ಯನವರ ಜೀವನವನ್ನು ಬದಲಾಯಿಸಿತು.

ವ್ಯಾಕ್ಸಿನೇಟರ್ ಹುದ್ದೆಯನ್ನು ಬಿಟ್ಟು ಧಾರವಾಡಕ್ಕೆ ಬಂದ ಗಂಗಾಧರಯ್ಯನವರು ನೆರ್ಲೆಕರರವರ ಶಿಷ್ಯತ್ವವನ್ನು ಪಡೆದರು. ಅವರ ಮಾರ್ಗದರ್ಶನದಲ್ಲಿ ಡ್ರಾಯಿಂಗ್ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮುಂದಿನ ಉನ್ನತ ಶಿಕ್ಷಣಕ್ಕಾಗಿ ತಮ್ಮ ಮಾವನವರಾದ ರಾವ್‌ಬಹಾದ್ದೂರ ಸಾಲಿಮಠರ ಸಹಾಯದಿಂದ ಮುಂಬೈನ ಜೆ.ಜೆ. ಕಲಾಶಾಲೆಗೆ ಸೇರಿದರು. ಈ ಕಲಾಶಾಲೆಯಲ್ಲಿ ವಿದ್ವತ್‌ಪೂರ್ಣರಾದ ಕಲಾ ಶಿಕ್ಷಕರಿಂದ ಶಿಕ್ಷಣವನ್ನು ಪಡೆದರು. ೧೯೨೮ರಲ್ಲಿ ಇವರು ಡ್ರಾಯಿಂಗ್ ಶಿಕ್ಷಕರ ಪ್ರಮಾಣ ಪತ್ರ ಪರೀಕ್ಷೆಯನ್ನು ಪ್ರಥಮ ದರ್ಜೆಯಲ್ಲಿ ಉತ್ತೀಣರಾದರು. ನಂತರ ೧೯೩೧ರಲ್ಲಿ ಜೆ.ಜೆ. ಕಲಾಶಾಲೆಯಲ್ಲಿ ಡಿಪ್ಲೋಮಾವನ್ನು ಪ್ರಥಮ ಶ್ರೇಣಿಯಲ್ಲಿ ಪಾಸಾದರು. ಇವರು ವಿದ್ಯಾರ್ಥಿ ದಿನದಿಂದಲೇ ತಮ್ಮ ಕಲಾಕೃತಿಗಳಿಗಾಗಿ ಸ್ವರ್ಣ, ಪಾರಿತೋಷಕ ಹೀಗೆ ಇನ್ನೂ ಮುಂತಾದವುಗಳನ್ನು ಪಡೆಯುತ್ತಾ ಬಂದಿದ್ದರು. ಹಾಗೆಯೇ ಈ ಕಲಾಶಾಲೆಯಿಂದ ನುರಿತ ಕಲಾವಿದರಾಗಿ ಇವರು ಸಾವಿರಾರು ಕಲಾಕೃತಿಗಳನ್ನು ರಚಿಸಿದರು.

೧೯೩೨ರಲ್ಲಿ ಮುಂಬೈನಲ್ಲಿ ತಮ್ಮ ಶಿಕ್ಷಕ ವೃತ್ತಿ ಜೀವನವನ್ನು ಆರಂಭಿಸಿದರು. ದಂಡಾವತಿಮಠ ಅವರು ಮತ್ತು ಅವರ ಸಹಕಾರಿಗಳಾದ, ಕಲಾಪಾರಂಗತರಾದ ಡಿ.ಜಿ. ಬಡಿಗೇರ, ವ್ಹಿ.ಆರ್. ರಾವ್ ಈ ಮೂವರ ಪ್ರಯತ್ನದಿಂದ ಬಡವಿದ್ಯಾರ್ಥಿಗಳ ಅನುಕೂಲತೆಗಾಗಿ ಮುಂಬೈನಲ್ಲಿ ನೂತನ ಕಲಾಮಂದಿರವನ್ನು ಪ್ರಿನ್ಸೆಸ್ ಸ್ಟ್ರೀಟ್‌ನಲ್ಲಿ ದೇವಕರಣ ನಾನಾಜಿ ಅವರ ಕಟ್ಟಡದಲ್ಲಿ ಸ್ಥಾಪನೆ ಮಾಡಿದರು. ಈ ಕಲಾಮಂದಿರಕ್ಕೆ ಕರ್ನಾಟಕದ ಎಲ್ಲ ಕಡೆಯಿಂದಲೂ ಹಾಗೂ ದೇಶ ವಿದೇಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಈ ನೂತನ ಕಲಾಮಂದಿರದಲ್ಲಿ ಜಿ.ಎಸ್. ದಂಡಾವತಿಯವರು ಪ್ರಾಚಾರ್ಯರಾಗಿ ಕಾರ್ಯ ನಿರ್ವಹಿಸಿ ೧೯೬೬ರಲ್ಲಿ ನಿವೃತ್ತಾರದರು. ನಂತರ ತಮ್ಮ ಉಳಿದ ಬದುಕನ್ನು ಧಾರವಾಡದಲ್ಲಿ ಕಳೆದರು.

ಜಿ.ಎಸ್. ದಂಡಾವತಿಯವರು ನಿಸರ್ಗ ದೃಶ್ಯಗಳು, ಭಾವಚಿತ್ರಗಳು ಹಾಗೂ ಸಂಯೋಜನಾ ಚಿತ್ರಗಳನ್ನು ರಚಿಸುತ್ತಿದ್ದರು. ಇವರು ರಚಿಸಿದ ಚಿತ್ರಗಳಲ್ಲಿ ನೈಜತೆ ಎದ್ದು



ತೋರುತ್ತಿತ್ತು ಹಾಗೂ ಪಾಶ್ಚಾತ್ಯ ಶೈಲಿಯಲ್ಲಿ ಹಲಾರು ಕೃತಿಗಳನ್ನು ರಚಿಸಿದ್ದಾರೆ. ಸೌಂದರ್ಯವನ್ನು ಅನ್ವೇಷಿಸುವ ಉದ್ದೇಶವನ್ನು ಹೊಂದಿರುವ ಅವರ ಕೃತಿಗಳು ಆನಂದವನ್ನು ಅಭಿವ್ಯಕ್ತಿಸುತ್ತವೆ. ಅವರ ಒಟ್ಟು ಕಲಾಕೃತಿಗಳನ್ನು ವಿವೇಚಿಸಿದಾಗ ಕ್ರಿಯಾಶೀಲ ಕಲಾವಿದನ ಎಲ್ಲ ಪ್ರಕಾರಗಳ ಲಕ್ಷಣಗಳು ಅವರಲ್ಲಿ ಕಂಡುಬರುತ್ತವೆ. ಆದರೂ ಭಾವಚಿತ್ರಗಳಲ್ಲಿ, ಸಂಯೋಜನಾ ಚಿತ್ರಗಳಲ್ಲಿ ಹೆಚ್ಚಿನ ಆಸಕ್ತಿ ಇತ್ತೆಂದು ತಿಳಿದುಬರುತ್ತದೆ. ಕಲಾಕೃತಿಗಳ ರಚನೆಯಲ್ಲಿ ಪೆನ್ಸಿಲ್ ಮೊದಲು ಮಾಡಿಕೊಂಡು ಜಲವರ್ಣ, ಪುಡಿವರ್ಣ, ತೈಲವರ್ಣ, ಪೇಸ್ಟಲ್ ಮುಂತಾದ ಮಾಧ್ಯಮಗಳನ್ನು ಅವರ ಕಲಾಕೃತಿಗಳಲ್ಲಿ ಬಳಸುತ್ತಿದ್ದರು ಅವು ವಸ್ತು ಹಾಗೂ ನಿರ್ವಾಹಣೆಯ ವಿಚಾರವಾಗಿ ಸಹೃದಯರ ಗಮನ ಸೆಳೆಯದೆ ಇರಲಾರವು.

**ಕಲಾಕೃತಿಗಳು :**

ಇವರ ಕಲಾಕೃತಿಗಳಲ್ಲಿ ರೇಖಾ ಚಿತ್ರಗಳು ಗಮನಾರ್ಹವಾಗಿವೆ. ಮಾನವಾಕೃತಿಗಳ ರಚನೆಗಳ ಸ್ಥೂಲ ಸೂಕ್ಷ್ಮಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾದ ಈ ರಚನೆಗಳಲ್ಲಿ ರೇಖಾ ಪರಿಶುದ್ಧತೆ, ಗಣತ್ವದ ಪರಿಭಾವನೆ, ಛಾಯಾಂಕನ, ಪ್ರಮಾಣ ಬದ್ಧತೆ ಮುಂತಾದ ಉತ್ತಮ ಅಂಶಗಳನ್ನು ಅವರ ಕಲಾಕೃತಿಗಳಲ್ಲಿ ಕಾಣಬಹುದು. ಅವರು ರಚಿಸಿದ ನಗ್ನ, ಅರೆನಗ್ನ, ವಸ್ತ್ರಾಧಾರಿತ ವ್ಯಕ್ತಿಗಳ ರೇಖಾಚಿತ್ರಗಳು, ಗಣ್ಯರ ಭಾವಚಿತ್ರಗಳಲ್ಲಿ ಸೂಕ್ಷ್ಮ ರಚನಾ ವಿವರ ಆಯಾಮ ಕಲ್ಪನೆಗಳನ್ನು ಪ್ರತಿಬಿಂಬಿಸುವ ಶ್ರೇಷ್ಟತೆಯನ್ನು ಪಡೆದಿದ್ದಾರೆ. ದಂಡಾವತಿಮಠರವರು ನೈಜ ಚಿತ್ರಗಳನ್ನು ಅದರಲ್ಲೂ ಭಾವಚಿತ್ರಗಳನ್ನು ಬಿಡಿಸುವುದರಲ್ಲಿ ಅಗ್ರಮಾನ್ಯರು. ಭಾವಚಿತ್ರಣದಲ್ಲಿ ತಮ್ಮ ಕಲಾ ಪ್ರೌಢಿಮೆಯ ನೈಪುಣ್ಯತೆಗೆ ಅವರು ರಚಿಸಿದ ಭಾವಚಿತ್ರಗಳೇ ಸಾಕ್ಷಿಯಾಗಿವೆ. ಅವುಗಳಲ್ಲಿ ಮುಖ್ಯವಾಗಿ ಜಿಲಾಧಾರದ ಬೀಭಾ (ಕಾಶ್ಮೀರಿ ಬಿಕ್ಷುಕ), ರೋದ್ದ ಶ್ರೀನಿವಾಸರಾಯರು, ಚಿತ್ತಾರಿ, ಬಸವಲಿಂಗಯ್ಯ ಕುಲಕರ್ಣಿ, ನೆಹರು, ಸರ್ದಾರ ವಲ್ಲಬಾಯಿ ಪಾಟೀಲ ಇನ್ನೂ ಮುಂತಾದವುಗಳನ್ನು ಕಾಣಬಹುದು.

**ಪೂಜೆಗೆ ಕುಳಿತಿರುವ ಸ್ತ್ರೀ :** ರೇಖಾಚಿತ್ರಗಳಲ್ಲಿ ಪ್ರಮುಖವಾಗಿ ಕಹಳೆ ಉದುತ್ತಿರುವ ಆದಿವಾಸಿ, ನಗ್ನ ಮಹಿಳೆ, ಭಾರಹೊತ್ತ ರೈತ, ಪೂಜೆಗೆ ತೆರಳುತ್ತಿರುವ ನಾರಿ, ಸಮುದ್ರ ದೇವತೆ ಇನ್ನೂ ಮುಂತಾದವುಗಳನ್ನು ಹೆಸರಿಸಬಹುದಾಗಿದೆ. ಅವುಗಳಲ್ಲಿ ಪೂಜೆಗೆ ಕುಳಿತಿರುವ ಸ್ತ್ರೀಯ ಕುರಿತು ಹೇಳುವುದಾದರೆ ಇಲ್ಲಿ ಪೇಸ್ಟಲ್ ತರಹದ ಚಪ್ಪಟೆಯಾಕಾರದ ಕಪ್ಪು ವರ್ಣದ ಮಾಧ್ಯಮವನ್ನು ಬಳಸಲಾಗಿದೆ. ಇದು ಚೌಕಾಕಾರದ ಲಿಥೋ ಪೇಸ್ಟಲ್ ಇರಬಹುದು. ಈ ಚಿತ್ರದಲ್ಲಿ ನೆಪ ಮಾತ್ರಕ್ಕೆ ಅಲ್ಲಲ್ಲಿ ರೇಖೆಗಳು ಕಂಡುಬರುತ್ತವೆ. ಚಪ್ಪಟೆ ಬ್ರೆಶ್ ಸ್ಟ್ರೋಕ್‌ನಂತೆ ಪೇಸ್ಟಲ್‌ನ್ನು ವೀರ್ಯವತ್ತಗಿ ಎಳೆಯಲ್ಪಟ್ಟಿವೆ. ಹಿನ್ನೆಲೆಯಲ್ಲಿ ನಿರಭ್ರ ವಾತಾವರಣವಿದೆ. ಗುಜರಾತಿ ಮಹಿಳೆಯ ವೇಷಭೂಷಣಗಳು ಧರಿಸಿದ್ದಾಳೆ. ಎರಡು ಕೈಗಳಿಂದ ಪೂಜಾ ತಟ್ಟೆಯನ್ನು ಹಿಡಿದಿರುವಳು. ಮುನ್ನೋಟದ ದೃಷ್ಟಿ ಕಾಲುಗಳನ್ನು ಇಡುವ ಭಂಗಿಯಲ್ಲಿ ವಿಶಿಷ್ಟತೆಯಿದೆ.



ಪಾದಗಳಡಿಯಲ್ಲಿ ಛಾಯಾವರ್ಣ ಮಾಡಿ ಮೇಲ್ಮುಖದಿಂದ ಕಿರಣವು ಬಿದ್ದಂತೆ ಭಾವನೆಯನ್ನುಂಟು ಮಾಡಲಾಗಿದೆ. ಈ ಚಿತ್ರವನ್ನು ಸೂಕ್ಷ್ಮದಿಂದ ಗಮನಿಸಿದಾಗ ಜಲವರ್ಣ ಇಲ್ಲವೇ, ತೈಲವರ್ಣದ ಪರಿಭಾವನೆಯು ಕಾಣಿಸುತ್ತದೆ.

**ಜಿಲಧಾರಾದ ಬೀಭಾ (ಕಾಶ್ಮೀರಿ ಭಿಕ್ಷುಕ) ಭಾವಚಿತ್ರ** : ದಂಡಾವತಿಮಠ ಅವರು ರಚಿಸಿದಂತ ಈ ಜಿಲಧಾರಾದ ಬೀಭಾನ ಭಾವಚಿತ್ರವನ್ನು ನೋಡಿದರೆ ಅದ್ಭುತವನ್ನುಂಟು ಮಾಡುವಂತ ಪೇಸ್ಟೆಲ್ ಬಣ್ಣಗಳ ಸಂಯೋಜನೆ ಎದ್ದು ಕಾಣುತ್ತದೆ. ಹಾಗೂ ಈ ಭಾವಚಿತ್ರವನ್ನು ನೋಡಿದ ಕಕ್ಷಣವೇ ಚಿತ್ರದಲ್ಲಿರುವವನು ಕಾಶ್ಮೀರ ಪ್ರದೇಶದ ವ್ಯಕ್ತಿ ಎಂದು ಸುಲಭವಾಗಿ ಹೇಳಬಹುದು. ಏಕೆಂದರೆ ಕಾಶ್ಮೀರದ ಮಣ್ಣು, ಗಾಳಿ, ಹಿಮ ಹಸಿರಿನ ಪ್ರಭಾವದ ಹಿನ್ನೆಲೆಯಾಗಿ ಈ ಭಾವಚಿತ್ರ ಮೂಡಿಬಂದಿದೆ. ಅಷ್ಟೇ ಅಲ್ಲದೇ ಕಲಾವಿದನಿಗೆ ಕಾಶ್ಮೀರಿ ಜನಾಂಗದ ರೀತಿ ನೀತಿಗಳ ಅರಿವು ಮತ್ತು ಆಸಕ್ತಿ ಇದ್ದದ್ದು ತಿಳಿಯಬಹುದಾಗಿದೆ. ಈ ಕಲಾಕೃತಿಯಲ್ಲಿ ಯುವಕನ ನೀಳ ಕತ್ತು, ನೀಳ ನಾಸಿಕ, ನಾಸಿಕದ ಅಡಿ ನೀಳ ಮೊಗ, ಕುರುಚಲು ಗಡ್ಡ, ಚಿಗುರು ಮೀಸೆ, ಕೈಯಲ್ಲಿ ಹಣ್ಣಿರುವ ಗಿಡದರಂಬೆ, ತಲೆಗೆ ಸುತ್ತಿದ ಬಟ್ಟೆ, ದಿಟ್ಟವಾದ ನೋಟ ಒಟ್ಟಾರೆ ಈ ಕಲಾಕೃತಿಯನ್ನು ನೋಡಿದಾಗ ಮುಗ್ಧತೆಯ ಭಾವದ ಚಲುವು ಅತ್ಯಂತ ಪ್ರಧಾನ ಅಭಿವ್ಯಕ್ತಿಯಾಗಿದೆ.

ಕಲಾಕೃತಿ ಹಿನ್ನೆಲೆಯಲ್ಲಿ ಗಾಢ ನೀಲಿ, ತೆಳು ನೀಲಿ, ನೆರಳು ಬೆಳಕಿನಲ್ಲಿ ಮೂಡಿಬಂದಿವೆ. ಪೇಸ್ಟೆಲ್ ಬಣ್ಣಗಳ ಲೇಪನದ ಬಳಕೆ ಸೂಕ್ಷ್ಮವಾಗಿದೆ. ಹಾಗೆಯೆ ಹಣ್ಣು, ರಂಬೆ, ಎಲೆಗಳ ರೂಪವು ವರ್ಣ ರಂಜಿತವಾಗಿವೆ. ಒಟ್ಟಿನಲ್ಲಿ ದಂಡಾವತಿಮಠ ಅವರ ಸೃಜನಶೀಲತೆಗೆ ಈ ಕಲಾಕೃತಿಯು ಹಿಡಿದ ಕನ್ನಡಿಯಾಗಿದೆ. ಈ ಕೃತಿಗೆ ಕರ್ನಾಟಕ ಆರ್ಟ್ ಸೊಸೈಟಿಯ ಚಿನ್ನದ ಪದಕ ದೊರಕಿದೆ. ಈ ಕಲಾಕೃತಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಸಂಗ್ರಹದಲ್ಲಿದೆ.

ಇವರ ಕಲಾ ಪ್ರತಿಭೆಯನ್ನು ಮತ್ತು ಕಲಾಕ್ಷೇತ್ರಕ್ಕೆ ನೀಡಿದ ಸೇವೆಗಾಗಿ ಹಲವು ಪ್ರಶಸ್ತಿ ಗೌರವಗಳನ್ನು ನೀಲಾಗಿದೆ. ಉದಾಹರಣೆಗೆ, ಸ್ಮರಣಚಿತ್ರ ಪ್ರಾವಿಣ್ಯಕ್ಕಾಗಿ ಪಾರಿತೋಷಕ,ಬಳಪದ ಚಿತ್ರಕ್ಕಾಗಿ ಮದ್ರಾಸ್ ಆರ್ಟ್ ಸೊಸೈಟಿಯ ಪಾರಿತೋಷಕ (೧೯೩೮), ಕನ್ನಡ ಸಾಹಿತ್ಯ ಸಮ್ಮೇಳ ಸ್ವರ್ಣಪದಕ ೧೯೩೯, ಕರ್ನಾಟಕ ಆರ್ಟ್ ಸೊಸೈಟಿ ಸ್ವರ್ಣಪದಕ ಇನ್ನೂ ಮುಂತಾದವುಗಳನ್ನು ಹೆಸರಿಸಬಹುದು. ಅಲ್ಲದೆ ಮುಂಬೈ ಆರ್ಟ್ ಸೊಸೈಟಿಯ ಕಾರ್ಯಾಧ್ಯಕ್ಷರು, ಕರ್ನಾಟಕ ಆರ್ಟ್ ಸೊಸೈಟಿ ಕಾರ್ಯಾದರ್ಶಿಗಳು(೧೯೨೩ ರಿಂದ ೧೯೪೦), ಮುಂಬೈ ಪ್ರಾಂತ, ಬರೋಡ ವಿ.ವಿ., ಸ್ಕೂಲ್ ಆಫ್ ಆರ್ಟ್ ನಾಗಪುರ್, ಹಿಂದೂ ವಿ.ವಿ. ಬನಾರಸ್, ಕಲಾ ಶಿಕ್ಷಣದ ಪರೀಕ್ಷಾ ಮಂಡಳಿಯ ಸದಸ್ಯರಾಗಿರುವುದಲ್ಲದೇ ಕಲಾಶಾಲೆಗಳ ಫೆಡರೇಶನ್ ಮುಂಬೈ, ಸಲಹಾ ಮಂಡಳಿ, ಕರ್ನಾಟಕ ವಿ.ವಿ. ಧಾರವಾಡ, ಕಲಾ ಅಭ್ಯಾಸ ಮಂಡಳಿ, ಕ.ವಿ.ವಿ. ಧಾರವಾಡ, ಉಚ್ಚ ಕಲಾ ಪರೀಕ್ಷಾ ಮಂಡಳಿ ಕರ್ನಾಟಕ



## ಕಲಾವಿದ ಜಿ.ಎಸ್. ದಂಡಾವತಿಮಠ ಹಾಗೂ ಅವರ ಕಲಾಕೃತಿಗಳು





ಜಲವರ್ಣ ಸಂಯೋಜನೆ ಬಿಕ್ಷಾಟನ ಲೀಲೆ



ಜೇಲ್ಧಾರಾ ಬೀಬಾನ ಭಾವಚಿತ್ರ (ಕ್ರಿಯಾನ್ಸ ಮಾಧ್ಯಮ)



ಪೂಜೆಗೆ ಹೊರಡುತ್ತಿರುವ ಮಹಿಳೆ
(ಪೇಸ್ಟಲ್ ಮಾಧ್ಯಮ)



ಸಮುದ್ರ ದೇವತೆ (ರೇಖಾಚಿತ್ರ)



ಸರ್ಕಾರ, ೧೯೬೧ ರಲ್ಲಿ ಬನಾರಸ ಹಿಂದೂ ವಿ.ವಿ. ಲಲಿತಕಲಾ ಕಾಲೇಜುಗಳ ಪ್ರಾಧ್ಯಾಪಕ ವರ್ಗದವರ ಆಯ್ಕೆ ಸಮಿತಿ, ಸಲಹಾ ಮಂಡಳಿ ಕಲಾಶಾಲೆ ದಾವಣಗೆರೆ, ಕಲಾ, ಕೈಗಾರಿಕಾ ಮಂಡಳಿ ಕರ್ನಾಟಕ ಸರ್ಕಾರ ಸದಸ್ಯರಾಗಿದ್ದರು ಜೊತೆಗೆ ಲಲಿತಕಲಾ ಅಕಾಡೆಮಿ ಸಮಿತಿ, ವಸ್ತು, ಕರಕುಶಲ ಪ್ರದರ್ಶನ ಸಮಿತಿ ಮೈಸೂರು ದಸರಾ ಕಾರ್ಯಧ್ಯಕ್ಷರಾಗಿ ಕಾರ್ಯ ನಿರ್ವಹಿಸಿರುವುದು ಗಮನಾರ್ಹ.

**ಎಂ.ಎ. ಚೆಟ್ಟಿ :**

ಚಿತ್ರಕಲಾ ಕ್ಷೇತ್ರಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡ ಅನೇಕ ಕಲಾವಿದರಿದ್ದಾರೆ, ಅವರಲ್ಲಿ ಎಂ.ಎ. ಚೆಟ್ಟಿಯವರು ಒಬ್ಬರು. ಚಿತ್ರಕಲೆಯನ್ನೇ ಅವರ ಬದುಕಿನ ದೈವ ಎಂದು ನಂಬಿದವರಾಗಿದ್ದಾರು. ಇವರು ೧೯೦೭ ಮಾರ್ಚ ೮ ರಂದು ಅಡಿವೆಪ್ಪ ಚೆಟ್ಟಿ, ಶಿವಗಂಗಮ್ಮ ಅವರ ನಾಲ್ಕನೆಯ ಮಗನಾಗಿ ಬೆಳಗಾವಿ ಜಿಲ್ಲೆಯ ಅಥಣಿಯಲ್ಲಿ ಜನಿಸಿದರು. ಹುಕ್ಕೇರಿಯಲ್ಲಿ ಪ್ರಾಥಮಿಕ ಮತ್ತು ಅಥಣಿಯಲ್ಲಿ ಮಾಧ್ಯಮಿಕ ಹಾಗೂ ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದರು. ೧೯೨೧ರಲ್ಲಿ ಡ್ರಾಯಿಂಗ್ ಎಲಿಮೆಂಟರಿ ಉತ್ತೀರ್ಣರಾಗಿ, ಇವರಿಗೆ ಚಿತ್ರಕಲೆಯಲ್ಲಿ ಬಾಲ್ಯದಿಂದಲೇ ಆಸಕ್ತಿ ಇರುವುದು ತಿಳಿದುಬರುತ್ತದೆ. ಏಕೆಂದರೆ ಮೂಲತಹ ಚೆಟ್ಟಿಯವರು ಶರಣ ಸಂಸ್ಕೃತಿಯ ಮನೆತನದವರು. ಭಕ್ತಿ, ಶ್ರದ್ಧೆ, ಪೂಜೆಯ ಹಿನ್ನೆಲೆಯಲ್ಲಿ ಬೆಳೆದ ಇವರು ಪ್ರತಿ ನಿತ್ಯ ತನ್ನ ತಾಯಿಯ ಜೊತೆಗೆ ದೇವಸ್ಥಾನಕ್ಕೆ ಹೋಗಿ ದೇವಸ್ಥಾನದ ಮುಂಭಾಗದಲ್ಲಿ ರಂಗೋಲಿಯನ್ನು ಬಿಡಿಸುವಂತಹ ಹವ್ಯಾಸವಿತ್ತು.

ಹೀಗೆ ರಂಗೋಲಿ ಹಾಕುವ ಕಲೆಯಿಂದಾಗಿ ಮುಂದೆ ತಾವು ಕಲಾಸಕ್ತಿಯನ್ನು ಹೆಚ್ಚಿಸಿಕೊಳ್ಳಲು ಕಾರಣವಾಯಿತು. ಇದರಿಂದಾಗಿ ಮೆಟ್ರಿಕ್ ನಂತರ ಕಲಾ ಶಿಕ್ಷಣಕ್ಕಾಗಿ ಶಿರಂಗಿ ಲಿಂಗರಾಜ ಟ್ರಸ್ಟ್‌ವತಿಯಿಂದ ಶಿಷ್ಯವೇತನ ಪಡೆದು ಮುಂಬೈನ ಜೆ.ಜೆ. ಕಲಾಶಾಲೆಗೆ ಸೇರಿದರು. ಇಲ್ಲಿ ಸುಮಾರು ಆರು ವರ್ಷಗಳ ಕಾಲ ಡ್ರಾಯಿಂಗ್ ಹಾಗೂ ಪೇಂಟಿಂಗ್‌ನಲ್ಲಿ ಡಿಪ್ಲೋಮಾವನ್ನು ಮುಗಿಸಿದರು. ಇದಾದ ನಂತರ ಸೊಲ್ಲಾಪೂರಕ್ಕೆ ಬಂದರು. ಇಲ್ಲಿಂದ ಅವರ ವೃತ್ತಿ ಜೀವನ ಆರಂಭವಾಯಿತು.

ಸೃಷ್ಟಿಯಲ್ಲಿರುವ ಕಹಿಯನ್ನು ನುಂಗಿ ಸಿಹಿಯನ್ನು ಮಾತ್ರ ನೀಡುವ ಮಹಾಯೋಗಿಗಳು ಕಲಾಕಾರರು.[೩] ಎನ್ನುವಂತೆ ಚೆಟ್ಟಿಯವರು ಸಹ ತಮ್ಮ ಜೀವನದ ಕಷ್ಟಗಳನ್ನು ಲೆಕ್ಕಿಸದೆ ಕಲಾ ಸೇವೆಗೆ ತಮ್ಮನ್ನು ಮುಡುಪಾಗಿ ಇಟ್ಟಿರುವರು. ಇವರ ಕಲಾಕೃತಿಗಳ ಕುರಿತು ಹೇಳುವುದಾದರೆ ಹೆಚ್ಚಾಗಿ ಇವರು ಭಾವಚಿತ್ರ, ಜೀವನ ಮಾದರಿ ಚಿತ್ರ, ನಿಸರ್ಗದ ಚಿತ್ರ,

---

೩. ಡಾ. ಲಕ್ಷ್ಮಿದೇವಿ ಗವಾಯಿ : ಕಲಾವಿದ ಎಂ.ಎ. ಚೆಟ್ಟಿಯವರ ಜೀವನ, ಕಲಾಕೃತಿಗಳು ಒಂದು ಅಧ್ಯಯನ, ಪುಟ. ೨೬



ಸಂಯೋಜನಾ ಚಿತ್ರಗಳನ್ನು ರಚಿಸಿದ್ದಾರೆ. ಅಷ್ಟೇ ಅಲ್ಲದೇ ವೀರಶೈವ ಪುರಾಣಗಳಿಗೆ, ಪುರಾಣ ಪುರುಷರ ಘಟನಾವಳಿಗಳಿಗೆ ಸಂಬಂಧಿಸಿದ ಸಾವಿರಾರು ಚಿತ್ರಗಳನ್ನು ರಚಿಸಿರುವರು. ಕರ್ನಾಟಕದಲ್ಲಿ ಶರಣರನ್ನು ಕುರಿತು ಯಾರು ಚೆಟ್ಟಿಯವರಷ್ಟು ಚಿತ್ರಗಳನ್ನು ರಚಿಸಿಲ್ಲವೆಂದೇ ಹೇಳಬಹುದು. ಚೆಟ್ಟಿಯುವರ ಕಲಾಕೃತಿಗಳನ್ನು ನೋಡಿದಾಗ ನೈಜತೆಗೆ ಹೆಚ್ಚು ಗಮನಹರಿಸಿರುವುದನ್ನು ಕಾಣಬಹುದು.

ಇವರ ಕಲಾಕೃತಿಗಳಲ್ಲಿ ಹೆಚ್ಚಾಗಿ ಭಕ್ತಿ ಪ್ರಧಾನ ಚಿತ್ರಗಳೇ ಇರುವುದರಿಂದ ಅಂತಹ ವಾತಾವರಣವನ್ನು ನಿರ್ಮಿಸಲು ನೀಲವರ್ಣವನ್ನು ಬಳಸಿ ಸೌಮ್ಯತೆಯನ್ನು ತರುವುದು ವಿಶೇಷವಾಗಿದೆ. ಕೆಲವು ಚಿತ್ರಗಳು ಭಿತ್ತಿಚಿತ್ರಗಳನ್ನು ನೆನಪಿಗೆ ತರುವ ಗುಣವನ್ನು ಹೊಂದಿದ್ದು ಸೌಮ್ಯ ಹಾಗೂ ಪ್ರಖರ ವರ್ಣಗಳ ಹದವರಿತ ಮೇಳವಾಗಿ ಸಂಭ್ರಮ ಹಾಗೂ ವೈಭವಯುತ ಪರಿಣಾಮ ಬೀರಿವೆ. ಭಾವಚಿತ್ರಗಳಲ್ಲಿ ಬಳಸಿದ ಜಲವರ್ಣಗಳಲ್ಲಿ ಚರ್ಮದ ನೈಜ ಅನುಭವ ನೀಡುವುದರೊಂದಿಗೆ ಮಾಸದಂತೆ ತಾಜಾತನವನ್ನು ಹೊಂದಿವೆ. ಹಾಗೆಯೆ ಸಂಯೋಜನಾ ಚಿತ್ರಗಳ ವಸ್ತ್ರವಿನ್ಯಾಸಗಳಲ್ಲಿ ತೆಳುವಾಗಿ ಕುಂಚವನ್ನು ಪ್ರಯೋಗಿಸಿ ನೀಡುವ ವರ್ಣ ಲೇಪನ ಕಲಾಕೃತಿಯ ಮೌಲ್ಯವನ್ನು ಹೆಚ್ಚಿಸುತ್ತವೆ. ಹೀಗೆ ಚೆಟ್ಟಿಯವರ ವೈವಿಧ್ಯಮಯ ಚಿತ್ರಗಳು ಅವರ ನೈಜ ಕಲಾಶೈಲಿಯ ನೈಪುಣ್ಯತೆಗೆ ಸಾಕ್ಷಿಯಾಗಿವೆ. ಅವರ ಕಲಾಕೃತಿಗಳಲ್ಲಿ ಕೆಲವೊಂದನ್ನು ಹೇಳುವುದಾದರೆ.

**ಬಸವಣ್ಣನವರು ವಚನಗಳನ್ನು ರಚಿಸುತ್ತಿರುವ ಚಿತ್ರ :**

ಈ ಚಿತ್ರರಚನೆಯಲ್ಲಿ ಬಸವಣ್ಣನವರು ತಾಳೆಗರಿಗಳ ಮೇಲೆ ವಚನಗಳನ್ನು ರಚಿಸುತ್ತಿರುವುದು ಕಂಡುಬರುತ್ತದೆ. ಬಸವಣ್ಣನವರ ಹಣೆಗೆ, ಕೈಗಳಿಗೆ, ಎದೆಯ ಮೇಲೆ ವಿಭೂತಿ ಧರಿಸಿದ್ದು, ಕೊರಳಿಗೆ, ಕೈತೋಳುಗಳಿಗೆ ಮತ್ತು ಮುಂಗೈಗಳಿಗೆ ರುದ್ರಾಕ್ಷಿಯನ್ನು ಧರಿಸಿರುವರು. ಪದ್ಮಾಸನದಲ್ಲಿ ಕುಳಿತಿರುವ ಬಸವಣ್ಣನವರು ಕಾವಿ ಬಣ್ಣದ ಶಲ್ಯವನ್ನು ಧರಿಸಿ ವಚನಗಳನ್ನು ಬರೆದ ಒಂದು ಓಲೆಗರಿಯನ್ನು ಬಲಗೈಯಲ್ಲಿ ಹಿಡಿದಿದ್ದಾರೆ. ಬಸವಣ್ಣನವರ ಹಿಂಭಾಗದಲ್ಲಿ ದೀಪದ ಕಂಬಗಳಿದ್ದು, ಮನೆಯ ಕಂಬ, ಕಿಟಕಿಯ ಜಾಲಂದ್ರಗಳು ನಮ್ಮನ್ನು ಹನ್ನೆರಡನೆಯ ಶತಮಾನಕ್ಕೆ ಕೊಂಡೊಯ್ಯುತ್ತವೆ. ಕಲಾವಿದರು ಇಲ್ಲಿ ನೆರಳು ಬೆಳಕಿನ ಕಲ್ಪನೆಯ ನೇರವಾಗಿ ತೋರಿಸುವ ಸಂದರ್ಭದಲ್ಲಿ ಬಿಳಿ ಜಲವರ್ಣವನ್ನು ಉಪಯೋಗಿಸಿದ್ದಾರೆ. ಒಟ್ಟಾರೆ ಈ ಕಲಾಕೃತಿಯಲ್ಲಿ ವರ್ಣಗಳ ಸಂಯೋಜನೆ ಮತ್ತು ಸ್ಥಳಾವಕಾಶವನ್ನು ಸೂಕ್ತ ರೀತಿಯಲ್ಲಿ ಕಲಾವಿದರು ಬಳಸಿದ್ದು ನೋಡಬಹುದಾಗಿದೆ.

**ಬ್ರಿಟೀಷರ ವಿರುದ್ಧ ಹೋರಾಡುತ್ತಿರುವ ಕಿತ್ತೂರು ರಾಣಿ ಚನ್ನಮ್ಮ :**

ಈ ಚಿತ್ರಕಲಾಕೃತಿಯು ಐತಿಹಾಸಿಕ ಚಿತ್ರಾವಾಗಿದೆ. ಬ್ರಿಟೀಷ ಅಧಿಕಾರಿ ಥ್ಯಾಕರೆ



ಕಲಾವಿದ ಎಂ.ಎ. ಚಟ್ಟಿ ಹಾಗೂ ಅವರ ಕಲಾಕೃತಿ





ಬಸವಣ್ಣನ ಕಲಾಕೃತಿ

ಯುದ್ಧದ ಸನ್ನವೇಶ



ವಿರುದ್ಧ ಆರಂಭವಾದ ಯುದ್ಧಕ್ಕೆ ಚೆನ್ನಮ್ಮ ತನ್ನ ಅಂಗರಕ್ಷಕ ಸೇನಾಪತಿಯಾದ ಸರದಾರ ಗುರು ಸಿದ್ದಪ್ಪನೊಡನೆ ವೀರ ಮಹಿಳೆ ವೀರಗಚ್ಚೆಯನ್ನು ತೊಟ್ಟು ಬಿಳಿ ಬಣ್ಣದ ಕುದುರೆಯನ್ನು ಏರಿ ಬಲಗೈಯಲ್ಲಿ ಕತ್ತಿಯನ್ನು ಹಿಡಿದು ಹೋರಾಡುತ್ತಿರುವ ದೃಶ್ಯವಾಗಿದೆ. ಈಕೆಯ ಮುಂದೆ ಹೋಗುತ್ತಿದ್ದ ಸರದಾರ ಸೈನ್ಯಕ್ಕೆ ಯಾವುದೋ ಸೂಚನೆ ನೀಡುವಂತೆ ಹಿಂದಿರುಗಿ ನೋಡುತ್ತಿರುವನು. ಈ ಕಲಾಕೃತಿಯಲ್ಲಿ ಸೈನಿಕರನ್ನು ಮುಸುಕಾಗಿಸಿ ಚಿತ್ರಿಸಿ ಚೆನ್ನಮ್ಮ ಮತ್ತು ಆಕೆಯ ಆಶ್ವಕ್ಕೆ ಮಾತ್ರ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದೆ. ಚೆನ್ನಮ್ಮಳು ಕೆಂಪು ಸೀರೆಯನ್ನು ಧರಿಸಿದ್ದು, ಸೀರೆಯ ಅಂಚು ಸ್ವರ್ಣ ವರ್ಣದ್ದಾಗಿದೆ. ತಲೆಯ ಮೇಲೆ ಶರಗನ್ನು ಹಾಕಿಕೊಂಡು ಯುದ್ಧವನ್ನು ಮಾಡುತ್ತಿರುವ ಚೆನ್ನಮ್ಮಾಜಿಯ ದೃಶ್ಯ ನೋಡುಗರಿಗೆ ಒಂದು ರೀತಿಯ ಆಶ್ಚರ್ಯವನ್ನು ಉಂಟುಮಾಡುತ್ತದೆ. ಒಟ್ಟಾರೆಯಾಗಿ ಈ ಕಲಾಕೃತಿಯಲ್ಲಿ ಕಲಾವಿದರು ಸಂಯೋಜನೆ, ವರ್ಣವಿಭಜನೆ ಹಾಗೂ ಸ್ಥಳಾವಕಾಶವನ್ನು ಸಮತೋಲನದಿಂದ ಪರಿಣಾಮಕಾರಿಯಾಗಿ ರಚಿಸಿದ್ದಾರೆ.

ಚೆಟ್ಟಿಯವರ ಕಲಾ ಪ್ರತಿಭೆಗಾಗಿ ಬಂದ ಪ್ರಶಸ್ತಿ, ಗೌರವಗಳು ಅನೇಕ. ಅವುಗಳಲ್ಲಿ ಮುಖ್ಯವಾಗಿ ಅಖಿಲ ಭಾರತ ೪೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಕಾರವಾರ (೧೯೬೫) ಮೈಸೂರು ರಾಜ್ಯ ಲಲಿತಕಲಾ ಅಕಾಡೆಮಿ, ಬೆಂಗಳೂರು (೧೯೬೬) ಮೈಸೂರು ದಸರಾ ಕೈಗಾರಿಕಾ ಮತ್ತು ಸಾಂಸ್ಕೃತಿಕ ಮೇಳ (೧೯೭೫) ೭ನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನ (೧೯೮೦) ೨೦ನೆಯ ಮಹಾ ಅಧಿವೇಶನ ಅಖಿಲ ಭಾರತ ವೀರಶೈವ ಮಹಾಸಭಾ ಮೈಸೂರು (೧೯೮೫) ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಬೆಂಗಳೂರು (೧೯೮೮) ಎಂ.ಟಿ.ವ್ಹಿ. ಆಚಾರ್ಯ ಪ್ರಶಸ್ತಿ (೧೯೯೬) ವೆಂಕಟಪ್ಪ ಪ್ರಶಸ್ತಿ (೧೯೯೬) ಇವುಗಳಲ್ಲದೇ ಇನ್ನೂ ಅನೇಕ ಸರ್ಕಾರ, ಸಂಘ, ಸಂಸ್ಥೆಗಳಿಂದ ಹಲವಾರು ಪ್ರಶಸ್ತಿ, ಗೌರವ ಹಾಗೂ ಸನ್ಮಾನಗಳು ಲಭಿಸಿರುವುದು ಔಚಿತ್ಯಪೂರ್ಣವಾಗಿವೆ.

**ವ್ಹಿ.ಸಿ. ಮಾಲಗತ್ತಿ :**

ವೀರಭದ್ರಪ್ಪ. ಚನ್ನಬಸಪ್ಪ. ಮಾಲಗತ್ತಿ ಇವರ ಹೆಸರು ರಾಜ್ಯದ ಕಲಾಕ್ಷೇತ್ರಕ್ಕೆ ಸುಪರಿಚಿತ. ಉತ್ತರ ಕರ್ನಾಟಕದ ಕಲಾ ಶಿಕ್ಷಣದ ಬೆಳವಣಿಗೆಯಲ್ಲಿ ಮುಖ್ಯ ಮಾರ್ಗದರ್ಶಕರಾದವರಲ್ಲಿ ಒಬ್ಬರಾಗಿದ್ದಾರೆ. ಮಾಲಗತ್ತಿಯವರು ೧೮-೧೦-೧೯೨೨ ರಂದು ಜನಿಸಿದರು. ಇವರ ತಂದೆ ಚನ್ನಬಸಪ್ಪ ಮಾಲಗತ್ತಿ, ತಾಯಿ ಅಡಿವೆವ್ವಾ. ಇವರು ಬಾಲ್ಯದಿಂದಲೇ ನೇಕಾರಿಕೆ ಕಲಾ ಪರಿಸರದಲ್ಲಿ ಬೆಳೆದಿರುವುದರಿಂದ ಕಲೆಯಲ್ಲಿ ಆಸಕ್ತಿ ಹುಟ್ಟಿದ್ದು ಸಹಜವೇ ಆಗಿದೆ. ಇಲಕಲ್ಲನಲ್ಲಿ ಪ್ರಾಥಮಿಕ ಶಿಕ್ಷಣ, ಬೆಳಗಾವಿಯಲ್ಲಿ ಮಾಧ್ಯಮಿಕ ಶಿಕ್ಷಣ ಮತ್ತು ಪ್ರೌಢ ಶಿಕ್ಷಣವನ್ನು ಮುಗಿಸಿದರು. ಮುಂದೆ ಮುಂಬೈ ಜೆ.ಜೆ. ಕಲಾಶಾಲೆಯಲ್ಲಿ ಕಲಾಭ್ಯಾಸ. ಎಲ್‌ಫಿನೆವನ್ ಕೈಗಾರಿಕಾ ಶಾಲೆ ಹಾಗೂ ನೂತನ ಕಲಾಮಂದಿರದಲ್ಲಿಯೂ ಕಲಾಶಿಕ್ಷಣ



ಪಡೆದು, ಮಾಸ್ಟರ್ ಆಫ್ ಆರ್ಟ್ಸ್ ಪದವಿ ಪಡೆದುಕೊಂಡು ಮರಳಿ ಬೆಳಗಾವಿಗೆ ಬಂದರು.

ಕೆ.ಎಲ್.ಇ. ಶಿಕ್ಷಣ ಸಂಸ್ಥೆಯ ಶಿಕ್ಷಕರ ತರಬೇತಿ ಕಾಲೇಜಿಗೆ ಚಿತ್ರಕಲಾ ಪ್ರಾಧ್ಯಾಪಕರಾಗಿ ನೇಮಕರಾದ ಮಾಲಗತ್ತಿ ೧೯೪೫ ರಿಂದ ೧೯೮೭ರ ವರೆಗೆ ಅಲ್ಲಿ ಕೆಲಸ ಮಾಡಿದರು. ನಂತರ ಜಿ.ಎ. ಜೂನಿಯರ ಕಲಾ ವಿಭಾಗದ ಮುಖ್ಯಸ್ಥರಾಗಿ, ಜೆ.ಎನ್. ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಕಲಾ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಮಾಲಗತ್ತಿಯವರು ಬಹುಮುಖ ವ್ಯಕ್ತಿತ್ವವುಳ್ಳವರಾಗಿದ್ದಾರೆ. ಕಲಾವಿದ ಹಾಗೂ ಸಾಹಿತಿಯೂ ಆದ ಮಾಲಗತ್ತಿಯವರು ಕಲೆಯ ವಿಷಯಗಳ ಸತ್ವಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಕಲಾವಿದನಂತರಯೇ ಸಾಹಿತಿಯಾಗಿಯೂ ಬೆಳಕಿಗೆ ಬಂದ ಮಾಲಗತ್ತಿಯವರು ಬೆಳಗಾವಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿಯು ಆಯ್ಕೆಗೊಂಡು ಸಾಹಿತ್ಯ ಕ್ಷೇತ್ರಕ್ಕೂ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ.

ಕಲಾವಿದ ಮಾಲಗತ್ತಿಯವರ ಕಲಾಕೃತಿಗಳ ಕುರಿತು ಹೇಳುವುದಾದರೆ ಕರ್ನಾಟಕದಲ್ಲಿ ಅಷ್ಟೇ ಅಲ್ಲದೇ ಭಾರತದ ವಿವಿಧ ಭಾಗಗಳಲ್ಲಿ ಹಾಗೂ ವಿದೇಶಗಳಲ್ಲಿಯೂ ತಮ್ಮ ಕಲಾಕೃತಿಗಳ ಪ್ರದರ್ಶನಗಳನ್ನು ಏರ್ಪಡಿಸಿದ್ದಾರೆ. ಇವರು ಸಾಂಪ್ರದಾಯಿಕ ಚಿತ್ರಗಳನ್ನು ಜೊತೆಗೆ ಆಧುನಿಕ ಶೈಲಿಯಲ್ಲಿಯೂ, ತೈಲವರ್ಣ, ಜಲವರ್ಣಗಳ ಮಾಧ್ಯಮದಲ್ಲಿ ಚಿತ್ರಗಳನ್ನು ರಚಿಸಿದ್ದಾರೆ. ಬಹುಮಟ್ಟಿಗೆ ಇವರ ಕಲಾಕೃತಿಗಳು ಸಾಂಕೇತಿಕವಾಗಿ ರಚನೆಗೊಂಡಿವೆ. ಇವರ ಚಿತ್ರಗಳಲ್ಲಿ ನೆರಳು ಬೆಳಕಿನ, ದಪ್ಪ ಹಾಗೂ ತೆಳು ಗೆರೆಗಳಿಂದ ಆವೃತ್ತಗೊಂಡ ವರ್ಣಮೇಳ ರಂಜನೀಯವಾಗಿವೆ. ಇವರ ಕಲಾಕೃತಿಗಳಲ್ಲಿ ಮುಖ್ಯವಾಗಿ ಹೇಳುವುದಾದರೆ ವೀರಗಾಸೆಯ ದೃಶ್ಯ, ಸೌಂದರ್ಯ ವಿನ್ಯಾಸದ ದೃಶ್ಯ, ನೃತ್ಯಗಾರರ ಚಿತ್ರ, ನಿಸರ್ಗದ ದೃಶ್ಯಗಳು, ಇನ್ನೂ ಮುಂತಾದವುಗಳು.

**ವೀರಗಾಸೆಯ ನೃತ್ಯದ ದೃಶ್ಯ :**

ಈ ಕಲಾಕೃತಿಯು ಜಾನಪದ ನೃತ್ಯವನ್ನು ಪ್ರತಿಬಿಂಬಿಸುವಂತಹದು. ಜಾನಪದ ನೃತ್ಯಗಳಲ್ಲಿ ಒಂದಾದ ವೀರಗಾಸೆಯ ಒಂದು ಚಿತ್ರಣವನ್ನು ನೈಜವಾಗಿ ಕಲಾವಿದ ಮಾಲಗತ್ತಿಯವರು ಚಿತ್ರಿಸಿದ್ದಾರೆ. ಈ ಕಲಾಕೃತಿಯಲ್ಲಿ ಏಳು ಜನರಿದ್ದು, ಅವರೆಲ್ಲರು ನೃತ್ಯದ ನಾನಾ ಭಂಗಿಯಲ್ಲಿ ಮಗ್ನರಾಗಿದ್ದಾರೆ. ಈ ಚಿತ್ರ ಸಂಯೋಜನೆಯ ಮಧ್ಯದಲ್ಲಿ ಇರುವ ವ್ಯಕ್ತಿ ತಲೆಯ ಮೇಲೆ ದೇವರನ್ನು ಹೊತ್ತು, ಆತನ ಎರಡು ಕೈಗಳಲ್ಲಿ ಕತ್ತಿಗಳು, ಸೊಂಟದ ಮೇಲೆ ಎಡ ಮತ್ತು ಬಲಬದಿಯಲ್ಲಿ ಇಬ್ಬರನ್ನು ಕುಳ್ಳಿರಿಸಿಕೊಂಡು ನೃತ್ಯ ಮಾಡುತ್ತಿರುವ ದೃಶ್ಯವಿದಾಗಿದೆ. ಅಲ್ಲದೇ ಇನ್ನುಳಿದ ನೃತ್ಯಗಾರರಲ್ಲಿ ಇಬ್ಬರು ಹಲಿಗೆ, ಇನ್ನಿಬ್ಬರು ಡೊಲುಗಳನ್ನು ಬಾರಿಸುತ್ತಾ ಹೆಜ್ಜೆ ಹಾಕುತ್ತಿರುವರು. ನೃತ್ಯಗಾರರು ಸಾಮಾನ್ಯವಾಗಿ ಕೆಂಪು, ಹಸಿರು ಬಣ್ಣದ ಅಂಗಿ, ಕೆಂಪು ಬಣ್ಣದ ಚಡ್ಡಿಗಳನ್ನು ತೊಟ್ಟಿದ್ದಾರೆ. ತಲೆಗೆ ಕೆಂಪು ಬಣ್ಣದ ಬಟ್ಟೆಯ



# ಕಲಾವಿದ ವ್ಹಿ.ಸಿ. ಮಾಲಗತ್ತಿ ಮತ್ತು ಅವರ ಕಲಾಕೃತಿಗಳು





ವೀರಗಾಸೆ ನೃತ್ಯದ ಚಿತ್ರಗಳು



ನೃತ್ಯದ ಚಿತ್ರ



ಸ್ತ್ರೀಯರ ಸೌಂದರ್ಯ ವಿನ್ಯಾಸದ ಚಿತ್ರ





ಮಾಲಗತ್ತಿಯವರ ಕಲಾ ಗ್ಯಾಲರಿ



ಪಟ್ಟಿಯನ್ನು ಕಟ್ಟಿಕೊಂಡಿದ್ದಾರೆ. ಹಿನ್ನೆಲೆಯಾಗಿ ಹಸಿರು ಮಿಶ್ರಿತ ವರ್ಣದಿಂದ ಪ್ರಕೃತಿಯನ್ನು ಸುಂದರವಾಗಿ ಸಂಯೋಜಿಸಿದ್ದಾರೆ. ಒಟ್ಟಾರೆಯಾಗಿ ಈ ಕಲಾಕೃತಿಯು ಜನಪದ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತದ್ದಾಗಿದೆ.

**ನೃತ್ಯದ ಸೌಂದರ್ಯ ದೃಶ್ಯ :**

ಇವರ ಇನ್ನೊಂದು ಕಲಾಕೃತಿಯಲ್ಲಿ ನೃತ್ಯ ರಮಣೀಯ ಸುಂದರವಾದ ನೋಟವನ್ನು ಕಂಡುಕೊಳ್ಳಬಹುದು. ಇದರಲ್ಲಿ ವಿಶೇಷವಾಗಿ ಕೃಷ್ಣನ ನೃತ್ಯ, ಚಂದ್ರ ಚಾಮರ ಹಿಡಿದಿರುವ ಸೇವಕರು ಹಾಗೂ ನೃತ್ಯದ ಸಂಗಡಿಗರು, ಚಾಮರಗಳನ್ನು ಬೀಸುವ ಸೇವಕರು ಮತ್ತು ಇನ್ನೂ ಕೆಲವು ಸೇವಕರ ಶಿಷ್ಯವೃಂದದವರು ಅವರತ್ತಕಡೆ ಕೈಗಳನ್ನು ಮಾಡಿ ಕುಣಿಯುತ್ತಿರುವ ದೃಶ್ಯವನ್ನು ನೋಡಬಹುದು. ಈ ಸಂಯೋಜನೆಯಲ್ಲಿ ಕೆಂಪು, ಬಿಳಿ, ಹಳದಿ, ಹಸಿರು ವರ್ಣ, ರೇಖೆಗಳನ್ನು ಕಪ್ಪು ವರ್ಣದ ಸಹಾಯದಿಂದ ರಚಿಸಿದ್ದು ಕಂಡುಬರುತ್ತದೆ. ಈ ಕಲಾಕೃತಿಯು ಮನೊರಂಜನೆಯ ಹಿನ್ನೆಲೆಯಾಗಿ ಮೂಡಿಬಂದಿರುವುದು ತಿಳಿದುಬಹುದು.

ಮಾಲಗತ್ತಿವರ ಸಂದ ಪ್ರಶಸ್ತಿ, ಪುರಸ್ಕಾರ, ಗೌರವಗಳ ಕುರಿತು ಹೇಳುವುದಾದರೆ ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ, ಬೆಂಗಳೂರು (೧೯೮೦) ಕೇಂದ್ರ ಸರ್ಕಾರದಿಂದ ಬೆಳ್ಳಿ ಪದಕ, ವಿಜಯ ಮಹಾಂತೇಶ ಮಠದ ಸನ್ಮಾನ ಪ್ರಶಸ್ತಿ ಪತ್ರ, ಕೆ.ಕೆ. ಹೆಬ್ಬಾರ ಸ್ಮಾರಕ ಚಿತ್ರಕಲಾ ಪ್ರಶಸ್ತಿ, ಇವುಗಳಲ್ಲದೇ ರಾಷ್ಟ್ರ ಮತ್ತು ಅಂತರಾಷ್ಟ್ರಗಳ ಕಲಾ ಸಂಘಗಳಿಂದ ಹಲವಾರು ಪ್ರಶಸ್ತಿ, ಪುರಸ್ಕಾರಗಳನ್ನು ಗಳಿಸಿದ್ದಾರೆ.

**ಬಿ.ಕೆ. ಹುಬಳಿ :**

ಉತ್ತರ ಕರ್ನಾಟಕದ ವಿರಳ ಜಲವರ್ಣ ಕಲಾವಿದರಲ್ಲಿ ಬಿ.ಕೆ. ಹುಬಳಿಯವರು ಒಬ್ಬರಾಗಿದ್ದಾರೆ. ಇವರು ಸುಮಾರು ೮ ದಶಕಗಳ ಕಾಲ ಕಲಾ ಕ್ಷೇತ್ರದಲ್ಲಿ ಶ್ರಮಿಸಿದ್ದಾರೆ. ಇವರು ಉತ್ತರ ಕರ್ನಾಟಕದ ಜಾನಪದ ಬದುಕನ್ನು ಮತ್ತು ಬೆಳಗಾವಿಯ ಸುತ್ತಮುತ್ತಲಿನ ನಿಸರ್ಗವನ್ನು ಸಮರ್ಥವಾಗಿ ಹಾಗೂ ಸುಂದರವಾಗಿ ತಮ್ಮ ಕೃತಿಗಳಲ್ಲಿ ಮೂಡಿಸಿರುವರು. ಅಷ್ಟೇ ಅಲ್ಲದೇ ಅನೇಕ ಕಲಾವಿದರನ್ನು ಬೆಳೆಸುವುದರಲ್ಲಿ ಇವರ ಮಾರ್ಗದರ್ಶನ ಅತ್ಯಂತ ಪ್ರಮುಖ ಪಾತ್ರವಹಿಸಿದೆ. ಇಷ್ಟೆಲ್ಲ ಪ್ರತಿಭೆ ಇದ್ದರು ಇವರು ಪ್ರಚಾರದಿಂದ ದೂರ ಉಳಿದಿದ್ದಾರೆ.

ಇವರು ಕರವೀರಪ್ಪ, ಸುಂದರಾಬಾಯಿ ಈ ದಂಪತಿಗಳ ಚೊಚ್ಚಲ ಮಗನಾಗಿ ೧೯-೧೧-೧೯೨೨ ರಂದು ಜನಿಸಿದರು. ಇವರು ಕುಲಕಸಬು ಆದ ಅಕ್ಕಸಾಲಿಗ ವೃತ್ತಿಯಿಂದ ಬಂದವರು. ಇದರಿಂದ ಸಹಜವಾಗಿ ಕಲೆಯ ಪ್ರಭಾವ ಬಾಲ್ಯದಿಂದಲೇ ಬೀರಿದೆ. ಇವರು ಬಾಲ್ಯದಲ್ಲಿ ರೇಖಾಚಿತ್ರಗಳನ್ನು ರಚಿಸಿ ರೇಖೆಗಳಿಗೆ ಕಲೆಯ ಜೀವ ತುಂಬುವ ಆಸಕ್ತಿ



ಬೆಳೆಸಿಕೊಂಡಿದ್ದರು. ಅವರು ಶಾಲೆಗೆ ಸೇರುವ ಪ್ರಥಮ ವರ್ಗದಲ್ಲೇ ಚಿತ್ರಗಳನ್ನು ಬರೆಯಲು ಪ್ರಾರಂಭಿಸಿದ್ದರು. ಅಂದು ಪ್ರಾರಂಭ ಮಾಡಿದ ರೇಖೆಗಳು ಇಂದು ತಾವೊಬ್ಬ ಕಲಾವಿದರಾಗಲು ಸಹಾಯ ಮಾಡಿತೆನ್ನಬಹುದು. ಚಿಕ್ಕವರಾಗಿರುವಾಗಲೆ ಕಲೆಯ ಗಿಳು ಹಚ್ಚಿಕೊಂಡು, ಅದರ ರುಚಿಯನ್ನು ಅನುಭವಿಸುತ್ತಾ ಇತರರಿಗೂ ಅದರ ಅನುಭವಗಳನ್ನು ನೀಡುತ್ತಾ ಇಂದು ನಾಡಿನ ಹಿರಿಯ ಕಲಾವಿದರಲ್ಲಿ ಒಬ್ಬರಾಗಿ ಹೆಸರು ಪಡೆದಿದ್ದಾರೆ.

ಇವರು ಪ್ರಾಥಮಿಕ ಶಿಕ್ಷಣವನ್ನು ಎಳ್ಳೂರಿನಲ್ಲಿ, ವಡಗಾಂವನಲ್ಲಿ ಮಾಧ್ಯಮಿಕ, ಪ್ರೌಢ ಶಿಕ್ಷಣವನ್ನು ಬೆಳಗಾವಿಯಲ್ಲಿ ಪೂರೈಸಿದರು. ನಂತರ ಹಾಲಭಾವಿ ಸ್ಕೂಲ್ ಆಫ್ ಆರ್ಟ್ ಧಾರವಾಡ ಮತ್ತು ಮುಂಬೈನಲ್ಲಿ ಜೆ.ಜೆ. ಕಲಾಶಾಲೆಯಲ್ಲಿ ಕಲಾ ಶಿಕ್ಷಣವನ್ನು ಪಡೆದರು. ಜೆ.ಜೆ. ಕಲಾಶಾಲೆಯಲ್ಲಿ ಚಿತ್ರಕಲೆಯ ಡಿಪ್ಲೋಮಾ ಮತ್ತು ಆರ್ಟ್ ಮಾಸ್ಟರ್ ಪದವಿಯನ್ನು ಪಡೆದರು. ತಮ್ಮ ಕಲೆಯ ಜೀವನವನ್ನು ಕಲಾವಿದರಾಗಿ, ಚಿತ್ರಕಲಾ ಶಿಕ್ಷಕರಾಗಿ ಆರಂಭಿಸಿದರು. ಮುಂದೆ ನಾಡಿನ ಹಲವಾರು ಕಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಪರಿಚಿತರಾದರು.

ಕಲಾವಿದ ಬಿ.ಕೆ. ಹುಬಳಿಯವರ ಕಲಾಕೃತಿಗಳ ಕುರಿತು ಹೇಳುವುದಾದರೆ ರೇಖಾಚಿತ್ರ, ವರ್ಣಚಿತ್ರ, ಸಂಯೋಜನಾ ಚಿತ್ರ, ರೇಖೆಗಳಿಂದ ಭಾವಚಿತ್ರಗಳನ್ನು ರಚಿಸಿದ್ದಾರೆ. ಇವರು ರಚಿಸುವಂತಹ ಚಿತ್ರಗಳು ಎಲ್ಲ ಮಾಧ್ಯಗಳಲ್ಲಿ ಕಂಡುಬರುತ್ತವೆ. ಆದರೆ ರೇಖಾಚಿತ್ರಗಳ ರಚನೆಗೆ ಹೆಚ್ಚು ಒತ್ತು ನೀಡಿರುವುದು ಕಂಡುಬರುತ್ತದೆ. ಈ ರೇಖಾಚಿತ್ರಗಳನ್ನು ನೋಡಿದಾಗ ಪ್ರತಿಯೊಂದು ಚಿತ್ರವು ಸಂಪೂರ್ಣ ವರ್ಣಗಾರಿಕೆಯಿಂದ ಕೂಡಿದ್ದು, ಸಹೃದಯರ ಗಮನ ಸೆಳೆಯುತ್ತವೆ. ಏಕೆಂದರೆ ಆ ಕಲಾಕೃತಿಗಳು ರಸವತ್ತವಾಗಿ, ರೇಖೆಗಳಿಂದ ಜೀವ ತುಂಬಿದಂತೆ ಭಾಸವಾಗುತ್ತದೆ. ಕಡಿಮೆ ರೇಖೇಗಳಿದ್ದು, ನೆರಳು ಬೆಳಕಿನ ಕಲ್ಪನೆಯು ಕಲಾಕೃತಿಯ ವಾಸ್ತವಿಕತೆಯನ್ನು ಪ್ರತಿಬಿಂಬಿಸುತ್ತವೆ. ಇವರು ರಚಿಸಿದ ರೇಖಾಚಿತ್ರಗಳಲ್ಲಿ ಮಾನವನ ಆರಂಭಿಕ ಕಾಲವನ್ನು ಕಾಣಬಹುದು. ಅಲ್ಲದೇ ನಿಸರ್ಗದಲ್ಲಿನ ಪ್ರತಿಯೊಂದು ಆಕೃತಿಯನ್ನು ತಮ್ಮ ಕಲಾಕೃತಿಯಲ್ಲಿ ಮೂಡಿಸಿರುವರು. ದೈನಂದಿನ ಜೀವನದ ಎಲ್ಲ ಘಟನೆಗಳನ್ನು ರೇಖಾಚಿತ್ರಗಳ ಮೂಲಕ ತೋರ್ಪಡಿಸುತ್ತಿದ್ದರು. ಇಂತಹ ಚಿತ್ರಗಳನ್ನು ನೋಡಿದಾಗ ಕಲಾವಿದ ತನ್ನ ಸುತ್ತಮುತ್ತಲಿನ ಘಟನೆಗಳನ್ನು ಕಲಾಕೃತಿಯಲ್ಲಿ ಸೆರೆಹಿಡಿಯಲು ಪ್ರಯತ್ನಿಸುತ್ತಿದ್ದರು ಎಂದು ತಿಳಿದುಬರುತ್ತದೆ.

ಇವರ ವರ್ಣಚಿತ್ರಗಳನ್ನು ಗಮನಿಸಿದಾಗ ನೈಜತೆ, ಸರಳತೆಯಿಂದ ಕೂಡಿರುವುದು ಕಂಡುಬರುತ್ತವೆ. ಅವರ ಎಲ್ಲ ಚಿತ್ರಕಲೆಯಲ್ಲಿ ಪಾಶ್ಚಾತ್ಯ ಕಲಾವಿದರ ಪ್ರಭಾವ, ಅನುಕರಣೆ ಮಾಡಿರುವುದು ಕಂಡುಬರುತ್ತದೆ. ಇವರ ಕಲಾಕೃತಿಗಳಲ್ಲಿ ವಾತ್ಸಾಯನನು ಚಿತ್ರಕಲೆಯ ಕುರಿತು ಹೇಳಿರುವ ಆರು ಅಂಗಗಳ ಅಂಶಗಳನ್ನು ಕಾಣಬಹುದು. ಅವು ಅಷ್ಟೊಂದು



ನೈಜತೆಯಿಂದ ಕೂಡಿದ್ದು ಕೃತಿಗಳ ನಿರ್ಮಾಣದಲ್ಲಿ ತಂತ್ರ, ಶೈಲಿ ಇತ್ಯಾದಿಗಳ ಪ್ರಭಾವಕ್ಕೆ ಒಳಗಾದರು ಅವರ ಸ್ವಂತ ಕೃತಿ, ರಚನೆಯ ವಸ್ತುವಿಷಯದಲ್ಲಿ ಭಾರತೀಯ ಮತ್ತು ಗ್ರಾಮೀಣ ಬದುಕಿನ ಸೊಬಗು ತುಂಬಿರುತ್ತದೆ.

**ಹಳ್ಳಿಯ ಯುವತಿ :**

ಈ ಕಲಾಕೃತಿಯಲ್ಲಿ ಯುವತಿಯೊಬ್ಬಳು ಬೆಳಗಿನಜಾವ ಕೆಲಸಕ್ಕೆ ಹೋರಡುತ್ತಿರುವ ಚಿತ್ರ ಇದಾಗಿದೆ. ಈಕೆಯು ಬುಟ್ಟಿಯನ್ನು ಸೊಂಟದ ಮೇಲೆ ಇಟ್ಟುಕೊಂಡಿರುವುದು ನೋಡಬಹುದು. ಈ ಕಲಾಕೃತಿಯ ಮುಖ್ಯ ಲಕ್ಷಣವೆನೆಂದರೆ ಹಳ್ಳಿಯ ಜನಸಂಸ್ಕೃತಿಯನ್ನು ಪ್ರತಿಬಿಂಬಿಸುವುದರ ಜೊತೆಗೆ ಹಳ್ಳಿಗಳಲ್ಲಿ ಇರುವಂತ ಯುತಿಯ ಲವಲವಿಕೆ ಮುಖದಲ್ಲಿ ಅತ್ಯಂತ ಸುಂದರವಾಗಿ ಮುಡಿಬಂದಿದೆ. ಹಾಗೂ ಹಿನ್ನೆಲೆಯಾಗಿ ಸುತ್ತಮುತ್ತಲಿನ ಪರಿಸರವನ್ನು ಕಲಾವಿದ ವರ್ಣಸಂಯೋಜನೆಯನ್ನು ಸೂಕ್ಷ್ಮ ರೀತಿಯಲ್ಲಿ ಸಮತೋಲನದಿಂದ ಉಪಯೋಗಿಸಿದ್ದಾರೆ. ಜೊತೆಗೆ ಯುವತಿಯು ಧರಿಸಿರುವಂತ ಉಡುಪುಗಳು ಕೂಡ ಅಷ್ಟೇ ನೈಜತೆಯಿಂದ ಕೂಡಿದೆ. ಇದು ತೈಲವರ್ಣದಿಂದ ರಚನೆಗೊಂಡಿದೆ.

**ಕೃಷ್ಣಸುಂದರಿ :**

ಈ ಕಲಾಕೃತಿಯು ಒಂದು ಸಂಯೋಜನಾ ಚಿತ್ರವಾಗಿದೆ. ಬೆಂಗಳೂರಿನ ಎನ್. ಮರಿಶಾಮಾಚಾರ ಅವರ ಸಂಗ್ರಹಾಲಯದಲ್ಲಿ ನೋಡಬಹುದಾಗಿದೆ. ತೈಲವರ್ಣ ಮಾಧ್ಯಮದಲ್ಲಿರುವ ಈ ಕಲಾಕೃತಿಯಲ್ಲಿ ಯುವತಿಯು ಮಾವಿನ ತೋಟದಲ್ಲಿ ಗಿಡದ ಒಂದು ರಂಬೆಯನ್ನು ಆಧರಿಸಿಕೊಂಡು ನಿಂತಿದ್ದು ಕಂಡುಬರುತ್ತದೆ. ಈ ಯುವತಿಯು ನಸುಗಪ್ಪು ವರ್ಣದ ಮೈಬಣ್ಣವನ್ನು ಹೊಂದಿದ್ದು, ತೋಳು ಹಾಗೂ ಕೈಗಳಲ್ಲಿ ಬೆಳ್ಳಿ ಕಡಗಗಳನ್ನು ಧರಿಸಿದ್ದಾಳೆ. ಬಿಳಿಯ ಸೀರೆಯನ್ನು ತೊಟ್ಟ ಸುಂದರಿಯನ್ನು ಸೂಕ್ಷ್ಮ ರೀತಿಯಿಂದ ಗಮನಹರಿಸಿದರೆ ಈ ಯುವತಿಯು ತನ್ನ ಪ್ರಿಯತಮನನ್ನು ನೆನೆಪಿಸಿಕೊಂಡು, ಅವನ ಬಗ್ಗೆ ಚಿಂತಿಸುತ್ತಿರುವ ಭಾವನೆ ಕಂಡುಬರುತ್ತದೆ. ಒಟ್ಟಾರೆ ಈ ಕಲಾಕೃತಿಯಲ್ಲಿನ ವರ್ಣವಿನ್ಯಾಸವು ನೆರಳು ಬೆಳಕಿನ ಸಂಯೋಜನೆಯೊಂದಿಗೆ ಅಂದವಾಗಿ ಮೂಡಿಬಂದಿದೆ.

ಬಿ.ಕೆ. ಹುಬಳಿಯವರು ಅತ್ಯಂತ ಮೃದು ಸ್ವಭಾವ ಮತ್ತು ಭಾವನಾತ್ಮಕ ಜೀವಿ. ಕಲಾ ಕ್ಷೇತ್ರದಲ್ಲಿ ಅವರು ಬೆಳೆದುಬಂದ ರೀತಿ ಮತ್ತು ಕಲಾಕ್ಷೇತ್ರಕ್ಕೆ ಅವರು ಸಲ್ಲಿಸಿದ ಸೇವೆ ಶ್ಲಾಘನೀಯ. ಅವರ ಈ ಸೇವೆಗಾಗಿ ಅನೇಕ ಗೌರವ ಪ್ರಶಸ್ತಿಗಳು ಬಂದಿವೆ. ಅವುಗಳಲ್ಲಿ ಮುಖ್ಯವಾಗಿ ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು (೧೯೮೨) ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ರಾಜ್ಯ ಮತ್ತು ರಾಷ್ಟ್ರಮಟ್ಟಗಳಲ್ಲಿ ಇವರಿಗೆ ಇನ್ನೂ ಮುಂತಾದ ಪುರಸ್ಕಾರಗಳು ಲಭಿಸಿವೆ.



ಕಲಾವಿದ ಬಿ.ಕೆ. ಹುಬಳಿ ಮತ್ತು ಅವರ ಕಲಾಕೃತಿಗಳು





ಸಂಪ್ರದಾಯಿಕ ಚಿತ್ರಕಲೆ



ಕೃಷ್ಣಸುಂದರಿ ವರ್ಣಚಿತ್ರ



ತೈಲವರ್ಣ ಕಲಾಕೃತಿ



ಮಹಿಳೆಯ ಶಿಲ್ಪಕಲಾಕೃತಿ



ವಿಶ್ರಾಂತದಲ್ಲಿರುವ ಸಖಿಯರು



**ಎಸ್.ಜಿ. ಚಿನ್ನಣ್ಣವರ :**

ಚಿತ್ರಕಲಾ ಪ್ರಪಂಚಕ್ಕೆ ಎಸ್.ಜಿ. ಚಿನ್ನಣ್ಣವರ ಅವರ ಕೊಡುಗೆ ಅಪಾರವಾದುದು. ಇವರೊಬ್ಬ ಸೃಜನಶೀಲ ಕಲಾವಿದರಾಗಿದ್ದಾರೆ. ಇವರು ೧-೯-೧೯೨೩ರಲ್ಲಿ ಅಂಕಲಗಿಯಲ್ಲಿ ಗುರುಪಾದಪ್ಪ, ಗಂಗವ್ವ ದಂಪತಿಗಳ ಮಗನಾಗಿ ಜನಿಸಿದರು. ಇವರು ಮೂಲತಃ ವ್ಯಾಪಾರಸ್ಥ ಮನೆತನದವರು. ಪ್ರಾಥಮಿಕ ಶಿಕ್ಷಣವನ್ನು ಅಂಕಲಗಿಯಲ್ಲಿ ಪಡೆದು, ಮಾಧ್ಯಮಿಕ ಮತ್ತು ಪ್ರೌಢ ಶಾಲಾ ಶಿಕ್ಷಣವನ್ನು ಧಾರವಾಡದಲ್ಲಿ ಮುಗಿಸಿದರು. ಚಿತ್ರಕಲೆಯಲ್ಲಿ ಆಸಕ್ತಿ ಹೊಂದಿದ ಇವರು ಡಿ.ವ್ಹಿ. ಹಾಲಭಾವಿಯವರ ಚಿತ್ರಕಲಾ ಶಾಲೆಗೆ ಸೇರಿ ಚಿತ್ರಕಲಾ ಶಿಕ್ಷಣವನ್ನು ಪಡೆದರು. ನಂತರ ಹೆಚ್ಚಿನ ಕಲಾಭ್ಯಾಸಕ್ಕಾಗಿ ಜೆ.ಜೆ. ಸ್ಕೂಲ್ ಆಫ್ ಆರ್ಟ್ ಮುಂಬೈನಲ್ಲಿ ಡಿಪ್ಲೋಮಾ (೧೯೪೪) ಪೇಂಟಿಂಗ್ ಪದವಿಯನ್ನು ಪಡೆದರು.

ನೌಕರಿಗಾಗಿ ಮುಂಬೈನಲ್ಲಿ ಪ್ರಯತ್ನಿಸಿ ವಿಫಲರಾಗಿ ನಂತರ ಹುಕ್ಕೇರಿಗೆ ಬಂದು ನೆಲೆಸಿದರು. ಇವರು ಚಿತ್ರಕಲೆಯ ಜೊತೆಗೆ ಅನೇಕ ಹವ್ಯಾಸಗಳನ್ನು ಬೆಳೆಸಿಕೊಂಡಿದ್ದರು. ಅವುಗಳಲ್ಲಿ ಸಂಗೀತ ಮತ್ತು ಛಾಯಾಚಿತ್ರಣ ಮುಖ್ಯವಾಗಿದ್ದವು, ಹಾಗೂ ಕಲೆಯ ವಿಷಯ ಕುರಿತಂತೆ ಅನೇಕ ದೇಶ ವಿದೇಶಿ ಗ್ರಂಥಗಳನ್ನು ಸಂಗ್ರಹಿಸುತ್ತಿದ್ದರು. ಅಲ್ಲದೇ ವಾರ್ತಾ ಪತ್ರಿಕೆಯಲ್ಲಿ ಬಂದಿರುವ ಕಲಾವಿದರ ಕುರಿತು ವಿಷಯಗಳನ್ನು ಕೂಡಿಡುವ ಹವ್ಯಾಸವು ಇವರಿಗಿತೆಂದು ತಿಳಿದುಬರುತ್ತದೆ.

ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಖ್ಯಾತಿಪಡೆದಿರುವ ಇವರ ಕಲಾಕೃತಿಗಳ ಸಂಖ್ಯೆ ಸಾವಿರಾರು. ಇವರು ಹೆಚ್ಚಾಗಿ ನಿಸರ್ಗ ಚಿತ್ರಗಳನ್ನು ಜಲ, ತೈಲವರ್ಣಗಳಲ್ಲಿ ರಚಿಸಿರುವರು. ಇವರು ನಿಸರ್ಗ ಚಿತ್ರಣಕ್ಕಾಗಿ ಕರ್ನಾಟಕದ ಪ್ರಮುಖ ಸ್ಥಳಗಳನ್ನು ಆಯ್ದುಕೊಂಡಿದ್ದಾರೆ. ಉದಾಹರಣೆಗೆ ಕಾರವಾರ, ಗೋಕರ್ಣ, ಹಂಪೆ, ಬಿಜಾಪುರ, ಗೋಕಾಕ್. ಇವುಗಳಲ್ಲದೇ ಮಹಾರಾಷ್ಟ್ರದ ಬಾಂಬೆ, ಪುಣೆ ಇನ್ನೂ ಮುಂತಾದ ಸ್ಥಳಗಳ ದೃಶ್ಯಗಳು ಇವರ ಕಲಾಕೃತಿಗಳಲ್ಲಿ ಸೆರೆಹಿಡಿದಿಡಲು ಪ್ರಯತ್ನಿಸಿದ್ದಾರೆ. ಇವರ ಕಲಾಕೃತಿಗಳ ಮೇಲೆ ಪಾಶ್ಚಾತ್ಯ ಕಲೆಯ ಪ್ರಭಾವವಿರುವುದು ಕಾಣಬಹುದಾಗಿದೆ. ಇವರು ರಚಿಸಿದ ಪೂರ್ಣ ಗಾತ್ರದ ಚಿತ್ರಗಳು ಅಪಾರ ಜನಮನ್ನಣೆಯನ್ನು ಗಳಿಸಿವೆ. ಚೆನ್ನಣ್ಣವರ ಅವರ ಕಲಾಕೃತಿಗಳಲ್ಲಿ ಕಾಣುವ ತೆಳುವಾದ ವರ್ಣ ಸಂಯೋಜನೆ ಸ್ಪಷ್ಟ ನೆರಳು ಬೆಳಕು ಇರುವುದನ್ನು ಕಂಡರೆ ಇವರದೆಯಾದ ವೈಶಿಷ್ಟ್ಯವನ್ನು ಕಾಣಬಹುದು. ಇವರ ಕಲಾಕೃತಿಗಳು ಬೆಳಗಾವಿ, ಅಂಕಲಗಿ, ಸಂಕೇಶ್ವರ, ನಿಡಸೋಸಿ, ಹುಕ್ಕೇರಿ, ಗೋಕಾಕ್, ಧಾರವಾಡ, ಬೆಂಗಳೂರು, ಹುಬ್ಬಳ್ಳಿ, ಬಾಂಬೆ ಇಷ್ಟೇ ಅಲ್ಲದೇ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರಗಳಲ್ಲಿಯೂ ಸಂಗ್ರಹಗೊಂಡಿವೆ.

ಎಸ್.ಜಿ. ಚಿನ್ನಣ್ಣವರ ಅವರ ಕಲಾ ಸೇವೆಯನ್ನು ಗುರುತಿಸಿ ವಿದೇಶದವರ ಪುರಸ್ಕಾರ ಲಭಿಸಿದೆ. ಸ್ವದೇಶದಲ್ಲಿ ಅನೇಕ ಸಭೆ ಸಮಾರಂಭಗಳಲ್ಲಿ ಸನ್ಮಾನಿತರಾಗಿದ್ದಾರೆ. ೧೯೬೩ರಲ್ಲಿ

ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ಇವರ ಸಾಧನೆಯನ್ನು ಗುರುತಿಸಿ ರಾಜ್ಯ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

**ಸಾಗರದತ್ತ ಭರಮಪ್ಪ ಪಾಟೀಲ :**

ಕಲಾ ಕ್ಷೇತ್ರಕ್ಕೆ ತಮ್ಮನ್ನು ತಾವು ತೊಡಗಿಸಿಕೊಂಡಂತಹ ಸಾಗರದತ್ತ ಭರಮಪ್ಪ ಪಾಟೀಲರು ೮-೧೦-೧೯೨೭ ರಂದು ಜನಿಸಿದರು ಇವರ ತಂದೆ ಸರಾಫಿ ಕಲಾವಿದರಾದ ಭರಮಪ್ಪ ಪಾಟೀಲ ಅವರು. ಸಾಗರದತ್ತ ಪಾಟೀಲ ಅವರು ಮೆಟ್ರಿಕ್ ವರೆಗೆ ಬೆಳಗಾವಿಯಲ್ಲಿ ಶಿಕ್ಷಣ ಪಡೆದು, ಮುಂದೆ ಜೆ.ಜೆ. ಸ್ಕೂಲ್ ಆಫ್ ಆರ್ಟ್ ಮುಂಬೈನಲ್ಲಿ ಕಲಾ ಶಿಕ್ಷಣ ಪಡೆದು ಡ್ರಾಯಿಂಗ್ ಕೋರ್ಸ್ ಮುಗಿಸಿದರು. ೧೯೫೫ರಲ್ಲಿ ಮುಂಬೈನ ಹೈಸ್ಕೂಲ್ ಒಂದರಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇರಿದರು. ಇಲ್ಲಿಂದ ಅವರ ವೃತ್ತಿ ಜೀವನ ಆರಂಭವಾಗುತ್ತದೆ. ಕಲಾ ಶಿಕ್ಷಕರಾಗಿದ್ದುಕೊಂಡೆ ಜೆ.ಜೆ. ಸ್ಕೂಲ್ ಆಫ್ ಆರ್ಟ್‌ನಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದರು. ೧೯೬೩ರಲ್ಲಿ ಬೆಳಗಾವಿಗೆ ಮರಳಿದರು. ಆರ್ಥಿಕತೆಯ ಅನಾನುಕೂಲದಿಂದ ಕೆಲವು ವರ್ಷಗಳ ಕಾಲ ವಾಣಿಜ್ಯ ಕಲೆಯನ್ನು ಆರಂಭಿಸಿದರು.

೧೯೬೬ರಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಹೈಸ್ಕೂಲಿನ ಕಲಾ ಶಿಕ್ಷಕರಾಗಿ ಸೇರಿ, ನಂತರ ಬೆಳಗಾವಿಯ ತರಬೇತಿ ಕಾಲೇಜಿನಲ್ಲಿ ಹಾಗೂ ಬೆನಾನ್ ಸ್ಮಿತ್ ಆರ್ಟ್ಸ್ ಸ್ಕೂಲ್‌ನಲ್ಲಿ ಕಲಾ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಕರ್ನಾಟಕ ಚಿತ್ರಕಲಾ ಪರಿಷತ್ತು, ಮೈಸೂರು ದಸರಾ ಪ್ರದರ್ಶನ, ಮುಂಬೈ ಆರ್ಟ್ ಸೊಸೈಟಿ ಹಾಗೂ ಕರ್ನಾಟಕ ಲಲಿತಕಲಾ ಅಕಾಡೆಮಿಯ ಆಶ್ರಯದಲ್ಲಿ ನಡೆದ ಚಿತ್ರಕಲಾ ಪ್ರದರ್ಶನಗಳಲ್ಲಿ ಪಾಟೀಲ ಅವರು ಭಾಗವಹಿಸಿದ್ದರು. ೧೯೭೦ರಲ್ಲಿ ಕೊಲ್ಲಾಪುರದ ಟೌನ್ ಹಾಲ್‌ನಲ್ಲಿ, ೧೯೭೬ರಲ್ಲಿ ಸಿದ್ದಣ್ಣನವರ ಚೇಂಬರ್ಸ್‌ನಲ್ಲಿ, ೧೯೭೭ರಲ್ಲಿ ಬೆಂಗಳೂರು ಅಲಾಯಿನ್ಸ್ ಫ್ರಾಂಚೈಸ್ ಮತ್ತು ಧಾರವಾಡದ ಹಾಲಭಾವಿ ಆರ್ಟ್ ಗ್ಯಾಲರಿಯಲ್ಲಿ, ೧೯೭೭ ಮತ್ತು ೧೯೮೨ರಲ್ಲಿ ಬೆಳಗಾವಿಯ ಮಾರ್ಕೆಟ ಸ್ಕೂಲ್‌ನಲ್ಲಿ, ೧೯೮೧ ಮತ್ತು ೧೯೮೪ರಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಂಸ್ಥೆಯಲ್ಲಿ ತಮ್ಮ ಜಲವರ್ಣ ಹಾಗೂ ತೈಲವರ್ಣಗಳಿಂದ ರಚಿಸಿದ ಚಿತ್ರಕಲಾಕೃತಿಗಳ ಏಕವ್ಯಕ್ತಿ ಕಲಾ ಪ್ರದರ್ಶನ ಮಾಡಿದರು.

ಏಕವ್ಯಕ್ತಿ ಕಲಾಕೃತಿಗಳ ಪ್ರದರ್ಶನ ಉತ್ತರ ಕರ್ನಾಟಕದ ಭಾಗದಲ್ಲಿ ಪ್ರದರ್ಶಿಸಿದವರು ಇವರೆ ಮೊದಲಿಗರಾಗಿದ್ದಾರೆ. ಇವರ ಕಲಾಕೃತಿಗಳು ವಿವಿಧ ಮಾಧ್ಯಮಗಳಿಂದ ಕೂಡಿದ್ದು ಬದುಕಿನ ವಿವಿಧ ಸ್ತರಗಳನ್ನು ಹೊಂದಿರುವುದರ ಜೊತೆಗೆ ಬಣ್ಣಗಳ ಸಂಯೋಜನೆಯಲ್ಲಿ ಬಳಸಿಕೊಳ್ಳುವ ರೀತಿ ನಿಜವಾಗಿಯು ಆಕರ್ಷಣೀಯ ಹಾಗೂ ಪ್ರಶಂಸನೀಯವಾಗಿವೆ. ಇವರ ಕಲಾಕೃತಿಗಳ ವಿಶೇಷತೆ ಎನೆಂದರೆ ಭಾವಚಿತ್ರಗಳನ್ನೇ ಹೆಚ್ಚು ರಚಿಸಿದ್ದಾರೆ. ವರ್ಣ ಸಂಯೋಜಿಸುವ ರೀತಿ ಸರಳತೆ ಹಾಗೂ ಸಹಜತೆಯಿಂದಾಗಿ ಶುದ್ಧ ಭಾರತೀಯ ಶೈಲಿಯಲ್ಲಿ



ಕಲಾವಿದ ಸಾಗರದತ್ತ ಭರಮಪ್ಪ ಪಾಟೀಲ ಮತ್ತು ಅವರ ಕಲಾಕೃತಿ



ಮೇರಿ ಮತ್ತು ಕ್ರಿಸ್ತ



ರಚಿತವಾಗಿವೆ. ಏಕವ್ಯಕ್ತಿ ಚಿತ್ರಗಳಲ್ಲಿ ಮೈಬಣ್ಣದ ಜೊತೆಗೆ ಮೇಲ್‌ಹೊದಿಕೆಯ ಬಟ್ಟೆಗಳ ಸಂಯೋಜನೆ ಹಾಗೂ ನೆರಳು ಬೆಳಕಿನ ಸ್ಪಷ್ಟವಾದ ಚಿತ್ರ ಅದ್ಭುತವಾಗಿರುವುದು ತಿಳಿಯಬಹುದು. ವ್ಯಕ್ತಿ ಚಿತ್ರಗಳ ಜೊತೆಗೆ ನಿಸರ್ಗ ಚಿತ್ರಗಳಲ್ಲಿ ವಸ್ತುವಿಷಯವನ್ನಾಗಿ ಗಿಡ ಮರಗಳು, ರಸ್ತೆಗಳು, ಐತಿಹಾಸಿಕ ಕುರುಹುಗಳು, ಐತಿಹಾಸಿಕ ಹಾಗೂ ಆಧುನಿಕ ಕಾಲದ ಕಟ್ಟಡಗಳನ್ನು ಚಿತ್ರಿಸಿರುವುದು ಅವರ ಕೈಚಳಕಕ್ಕೆ ಸಾಕ್ಷಿಯಾಗಿವೆ ಎನ್ನಬಹುದು.

ಇಷ್ಟೇ ಅಲ್ಲದೇ ಸಾಂಪ್ರದಾಯಿಕ ಶೈಲಿಯ ಜೊತೆಗೆ ಆಧುನಿಕ ಶೈಲಿಯಲ್ಲಿಯೂ ಅನೇಕ ರೇಖಾಚಿತ್ರಗಳನ್ನು ಚಿತ್ರಿಸಿದ್ದಾರೆ. ಪಾರಂಪರಿಕ ಶೈಲಿಯಲ್ಲಿ ಚಿತ್ರಿಸಿದ ಶ್ರವಣಬೆಳಗೊಳದ ಭಿತ್ತಿಚಿತ್ರಗಳಲ್ಲಿ ಅವರ ವೈಶಿಷ್ಟ್ಯತೆ, ಪರಿಪಕ್ವತೆ ಕಾಣಬಹುದು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಆದೇಶದ ಮೇರೆಗೆ ಶ್ರವಣಬೆಳಗೊಳದ ಭಿತ್ತಿಚಿತ್ರಗಳನ್ನು ಮೂಡಿಸುವ ಕೆಲಸವನ್ನು ವಹಿಸಿಕೊಂಡಿದ್ದರು. ಬಾಲ್ಯದಿಂದೇ ಕಲೆಯ ಆರಾಧಕರಾಗಿ ಬೆಳೆದು ಬಂದ ಇವರು ಕಲಾ ಕ್ಷೇತ್ರಕ್ಕೆ ನೀಡಿದ ಕೊಡುಗೆ ಸ್ಮರಣೆಯ. ಇಂಥ ಕಲಾವಿದನ ಸೇವೆಯನ್ನು ಗುರುತಿಸಿ ಕರ್ನಾಟಕ ರಾಜ್ಯ ಲಲಿತಕಲಾ ಅಕಾಡೆಮಿ ಪ್ರಶಸ್ತಿಯನ್ನು ೧೯೮೮ ನೀಡಿ ಗೌರವಿಸಲಾಗಿದೆ.

**ಚಂದ್ರಕಾಂತ ಕುಸನೂರ :**

ಬೆಳಗಾವಿಯ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯ ಕ್ಷೇತ್ರದಲ್ಲಿ ಅಪೂರ್ವ ಸೇವೆಯನ್ನು ಸಲ್ಲಿಸಿರುವವರಲ್ಲಿ ಚದ್ರಕಾಂತ ಕುಸನೂರ ಅವರು ಒಬ್ಬರಾಗಿದ್ದಾರೆ.ಇವರು ನಾಟಕಕಾರರು, ಕವಿಗಳು ಮತ್ತು ಕಾದಂಬರಿಕಾರರಾಗಿರುವುದು ಇವರ ಬಹುಮುಖ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ ಎನ್ನಬಹುದು. ಇವರು ೧೯೩೧ ರಲ್ಲಿ ಬೆಳಗಾವಿಯಲ್ಲಿ ಜನಿಸಿದರು. ಪ್ರಾಥಮಿಕ ಮತ್ತು ಫ್ರೌಡ ಶಾಲಾ ಶಿಕ್ಷಣವನ್ನು ಬೆಳಗಾವಿಯಲ್ಲಿ ಪೂರೈಸಿದರು. ಮುಂದೆ ಜೆ.ಜೆ. ಸ್ಕೂಲ್ ಆಫ್ ಆರ್ಟ್ ಮುಂಬೈನಲ್ಲಿ ಎಮ್.ಎ.ಬಿ.ಈಡಿ ಕಲಾ ಶಿಕ್ಷಣ ಮುಗಿಸಿದರು. ಇವರು ಕನ್ನಡ, ಮರಾಠಿ, ಇಂಗ್ಲೀಷ, ಗುಜಾರಾತಿ, ಉರ್ದು, ಹಿಂದಿ ಹೀಗೆ ಬಹುಭಾಷಾ ಪಂಡಿತರಾಗಿದ್ದಾರೆ.

ಇವರ ಕಲಾಕೃತಿಗಳಲ್ಲಿ ಹೆಚ್ಚಾಗಿ ಭಾರತೀಯ ಸಂಸ್ಕೃತಿಯನ್ನು ಪ್ರತಿಬಿಂಬಿಸುವಂತ ಚಿತ್ರಗಳಾಗಿವೆ. ಉದಾಹರಣೆಗೆ ಸೃಷ್ಟಿ, ಶೃಂಗಾರ, ರಥಸಪ್ತಮಿ, ವಸಂತ ಹೀಗೆ ಇನ್ನೂ ಮುಂತಾದ ಕಲಾಕೃತಿಗಳನ್ನು ಕುಸನೂರರ ಕುಂಚದಿಂದ ಮೂಡಿಬಂದಿರುವುದನ್ನು ಕಾಣಬಹುದಾಗಿದೆ. ಇವರ ಕಲಾಕೃತಿಗಳಲ್ಲಿ ಹಸಿರು, ಹಳದಿ, ಕೆಂಪು, ಬಿಳಿ, ಕಪ್ಪು ಈ ವರ್ಣಗಳ ಬಳಕೆ ಹೆಚ್ಚಾಗಿ ಕಂಡುಬರುತ್ತದೆ. ಹಾಗೂ ಇವರ ಕಲಾಕೃತಿಗಳಲ್ಲಿ ಕೆಲವೊಂದು ಜನಪದ ಹಿನ್ನೆಲೆಯ ಧಾರ್ಮಿಕ ಆಚರಣೆಯ ಚಿತ್ರಗಳು ಆಗಿರಬಹುದೆಂಬದು ಭಾಸವುಂಟಾಗುತ್ತದೆ. ಇವುಗಳಲ್ಲದೇ ಇವರು ನಿಸರ್ಗ, ರೇಖಾಚಿತ್ರ, ಭಾವಚಿತ್ರ, ಸೃಜನಾತ್ಮಕ ಚಿತ್ರಕಲಾಕೃತಿಗಳನ್ನು ರಚಿಸಿರುವರು.



## ಕಲಾವಿದ ಚಂದ್ರಕಾಂತ ಕುಸನೂರ ಮತ್ತು ಅವರ ಕಲಾಕೃತಿಗಳು





ಸೃಷ್ಟಿ



ಶೃಂಗಾರ



**ಸೃಷ್ಟಿ :**

ಕುಸನೂರರು ರಚಿಸಿದ ಈ ಕಲಾಕೃತಿಯಲ್ಲಿ ಸೃಷ್ಟಿಯಲ್ಲಿರುವಂತಹ ಅಥವಾ ನಿಸರ್ಗದಲ್ಲಿ ಕಾಣಬಹುದಾದ ಪರಿಸರ, ಪ್ರಾಣಿ, ಮನುಷ್ಯಾಕೃತಿಗಳು, ಹಿನ್ನೆಲೆಯಲ್ಲಿ ಆಕಾಶ ಮತ್ತು ಆಕಾಶದಲ್ಲಿ ಅರ್ಧಚಂದ್ರನನ್ನು ತೋರಿಸಲಾಗಿದೆ. ಈ ಕಲಾಕೃತಿಯಲ್ಲಿ ವರ್ಣಗಳ ಮಹತ್ವ ಎದ್ದು ಕಾಣುತ್ತಿದ್ದು, ಅವುಗಳು ಜನಪದ ಸಂಸ್ಕೃತಿಯನ್ನು ಮತ್ತು ಜನಪದ ಆಚರಣೆಯನ್ನು ಪ್ರತಿಬಿಂಬಿಸುತ್ತವೆ. ಅಲ್ಲದೇ ಅವರ ಈ ಕಲಾಕೃತಿಯನ್ನು ಗಮನಿಸಿದರೆ ಎರಡು ರೀತಿಯ ಕಲ್ಪನೆಗಳನ್ನು ಕಾಣಬಹುದು. ಅವುಗಳಲ್ಲಿ ಒಂದು ದೈವಿಸಂಬಂಧಿ ಇನ್ನೊಂದು ಮಾಂತ್ರಿಕ ಕಟ್ಟಳೆಯ ಹಿನ್ನೆಲೆ ಇರುವುದು ಕಂಡುಕೊಳ್ಳಬಹುದು. ಒಟ್ಟಾರೆಯಾಗಿ ಈ ಕಲಾಕೃತಿಯಲ್ಲಿ ಬಳಕೆಗೊಂಡ ಬಣ್ಣಗಳು ಪ್ರಖರವಾಗಿದ್ದರು, ಹಿನ್ನೆಲೆ ಮಾತ್ರ ತಂಪು ವಾತಾವರಣವನ್ನು ವ್ಯಕ್ತಪಡಿಸುತ್ತದೆ. ಅಲ್ಲದೇ ಈ ಕಲಾಕೃತಿಯು ನೋಡುಗರನ್ನು ಆಲೋಚನೆಗೆ ಒಳಪಡಿಸುತ್ತದೆ.

**ಎಸ್. ಅಪ್ಪಾಸಾಹೇಬ ಬ. ಕಾಡಾಪುರಕರ :**

ಆಧ್ಯಾತ್ಮ ಜೀವಿಯಾದ ಬಸವಂತಪ್ಪ ಶಾಸ್ತ್ರಿ ಹಾಗೂ ಶ್ರೀಮತಿ ಕಾಳಿಕಾ ದಂಪತಿಗಳ ಎರಡನೆಯ ಮಗನಾಗಿ ಅಪ್ಪಾಸಾಹೇಬ ೨೧-೧೦-೧೯೩೬ ರಂದು ಕಾಡಾಪೂರದಲ್ಲಿ ಜನಿಸಿದರು. ಬಾಲ್ಯದಿಂದಲೇ ಚಿತ್ರ ಬರೆಯುವ ಹವ್ಯಾಸವನ್ನು ಬೆಳೆಸಿಕೊಂಡಿದ್ದ ಇವರು ಮುಂದೆ ಚಿತ್ರಕಲೆಯನ್ನೇ ತಮ್ಮ ವೃತ್ತಿಯಾನ್ನಾಗಿ ಮಾಡಿಕೊಂಡರು. ಕಾಡಾಪುರದಲ್ಲಿ ಪ್ರಾಥಮಿಕ, ನಿಪ್ಪಾಣಿಯಲ್ಲಿ ಪ್ರೌಢ ಶಾಲಾಶಿಕ್ಷಣವನ್ನು ಮುಗಿಸಿದರು. ಇವರ ಆರ್ಥಿಕ ಸ್ಥಿತಿಯ ಅನಾನುಕೂಲದಿಂದ ತಮಗೆ ಬಂದ ಯಾವುದೇ ಕೆಲಸವನ್ನು ತಿರಸ್ಕರಿಸುತ್ತಿರಲಿಲ್ಲ. ಬಂಗಾರ, ಬೆಳ್ಳಿ, ಹಿತ್ತಾಳೆ, ಮರ, ಕಲ್ಲು, ಮಣ್ಣು, ಕಾಸ್ಟಿಂಗ್, ಎಂಬೋಸಿಂಗ್, ಭಾವಚಿತ್ರಗಳು, ನಾಟಕದ ಪರದೆಗಳು ಹೀಗೆ ಯಾವ ಕೆಲಸ ಬಂದರೂ ಶ್ರದ್ಧೆಯಿಂದ ಮಾಡಿ, ಗ್ರಾಹಕರ ಮೆಚ್ಚುಗೆಗೆ ಪಾತ್ರರಾಗುತ್ತಿದ್ದರು.

ಈ ಕೆಲಸಗಳನ್ನು ಅಪ್ಪಾಸಾಹೇಬರು ಸವಾಲಾಗಿ ತೆಗೆದುಕೊಂಡು ಕೃತಿಯನ್ನು ರಚಿಸುತ್ತಿದ್ದರು. ಹೀಗೆ ಜೀವನೋಪಾಯವಾಗಿ ಮಾಡುತ್ತಿದಂತಹ ಕಲೆಯೇ ಇವರನ್ನು ಕಲಾಕ್ಷೇತ್ರದಲ್ಲಿ ಹೆಸರುವಾಸಿ ಕಲಾವಿದನಾಗಲು ಕಾರಣವಾಯಿತು. ಇವರು ಎಲ್ಲ ಮಾಧ್ಯಮದ ಕಲಾಕೃತಿಗಳನ್ನು ರಚಿಸಿ ಬಹುಮುಖಿ ಕಲಾವಿದರಾಗಿದ್ದು ಕಂಡುಬರುತ್ತದೆ. ಇವರ ಕಲಾಕೃತಿಗಳನ್ನು ವಿಮರ್ಶಿಸಿದಾಗ ಅವರು ಒಂದೇ ಶೈಲಿಗೆ ಅಂಟಿಕೊಂಡು ಕಲಾಕೃತಿಗಳನ್ನು ರಚಿಸಿಲ್ಲ ಎಂಬುದನ್ನು ಮನಗಾಣಬಹುದು. ಇವರು ರಚಿಸುತ್ತಿದ್ದ ಕಲಾಕೃತಿಗಳಲ್ಲಿ ರೇಖಾಚಿತ್ರ, ಸಂಯೋಜನಾ ಚಿತ್ರಗಳು, ಭಾವಚಿತ್ರಗಳನ್ನು ರಚಿಸುತ್ತಾರೆ. ಕಲಾಕೃತಿಯ ರಚನೆಗೆ ಬಳಸುವಂತಹ ಮಾಧ್ಯಮಗಳ ಕುರಿತು ಹೇಳುವುದಾದರೆ ಜಲವರ್ಣ, ತೈಲವರ್ಣ, ಮತ್ತು ಮಿಶ್ರ ಮಾಧ್ಯಮಗಳಿಂದಲೂ ಚಿತ್ರಗಳನ್ನು ರಚಿಸಿದ್ದು ಕಂಡುಬರುತ್ತದೆ. ಈ ಮಿಶ್ರಮಾಧ್ಯಮದಲ್ಲಿ



ಹೊಸ ಹೊಸ ಬಗೆಯ ಪ್ರಯೋಗಗಳನ್ನು ಮಾಡಿ ಯಶಸ್ಸನ್ನು ಗಳಿಸಿದ್ದಾರೆ. ಉದಾಹರಣೆಗೆ ಹೇಳುವುದಾದರೆ ದವಸ ಧಾನ್ಯಗಳಿಂದ, ಧಾನ್ಯಗಳ ಕಡ್ಡಿ, ತುಂಡು ಬಟ್ಟೆಗಳು ಇನ್ನೂ ಮುಂತಾದ ಪ್ರಯೋಗದಿಂದ ಭಾವಚಿತ್ರಗಳನ್ನು ರಚಿಸುವುದು, ಮತ್ತು ಅವುಗಳಿಗೆ ಬಣ್ಣದ ಲೇಪನದಿಂದ ನೈಜರೂಪವನ್ನು ನೀಡಿದ ಕಲಾಕೃತಿಗಳ ರಚನೆ ಕೂಡ ಕಂಡುಬರುತ್ತವೆ. ಅಲ್ಲದೇ ಇವರು ಬಟ್ಟೆಯ ಮಾಧ್ಯಮದಲ್ಲಿ ರಂಗಭೂಮಿಯ ವರ್ಣರಂಜಿತ ರಂಗಪರದೆಯ ಚಿತ್ರಗಳನ್ನು ಸಹ ರಚಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

ಅಪ್ಪಾಸಾಹೇಬ ಅವರು ಚಿತ್ರಕಲೆಯ ಜೊತೆಗೆ ಶಿಲ್ಪಕಲೆಯಲ್ಲೂ ಪರಿಣಿತಿಯನ್ನು ಹೊಂದಿದ್ದಾರೆ. ಅನೇಕ ಶಿಲ್ಪಗಳನ್ನು ರಚಿಸಿರುವರಲ್ಲದೆ, ಇಂತಹ ಶಿಲ್ಪಗಳಲ್ಲೂ ಹಲವಾರು ಮಾಧ್ಯಗಳ ಪ್ರಯೋಗಗಳು ಕಂಡುಬರುತ್ತವೆ. ಶಿಲ್ಪಕಲಾಕೃತಿಗಳನ್ನು ಕ್ರಮವಾಗಿ ಮಣ್ಣು, ವ್ಯಾಕ್ಸ್, ವುಡ್ ಕಾರ್‌ವಿಂಗ್, ಸಿಮೆಂಟ್, ಮಾರ್ಬಲ್, ಬೆಳ್ಳಿ, ಚಿನ್ನ, ತಾಮ್ರ, ಅಲ್ಯುಮಿನಿಯಮ್ ಕಾಸ್ಟಿಂಗ್, ಪ್ಲಾಸ್ಟರ್ ಆಫ್ ಪ್ಯಾರಿಸ್, ಎಂಬೋಸಿಂಗ್ ಇವುಗಳಲ್ಲದೇ ಸಿಂಹಾಸಗಳನ್ನು, ಕಿರೀಟಗಳು, ಪ್ರಭಾವಳಿಗಳು ಹೀಗೆ ಇನ್ನೂ ಮುಂತಾದವುಗಳಲ್ಲಿ ಅವರ ವೈಶಿಷ್ಟ್ಯತೆಯನ್ನು ಕಾಣಬಹುದು. ಇವರು ರಚಿಸಿದ ಭಾವಚಿತ್ರಗಳು ತಾಂತ್ರಿಕತೆಯಲ್ಲಿ ವಿಶೇಷವಾಗಿವೆ ಎನ್ನಬಹುದು. ಪಾಶ್ಚಾತ್ಯ ಶೈಲಿಯಾದ ಪಾಯಿಂಟಿಲಿಸಂ ಪ್ರಭಾವದಿಂದಾಗಿ ನೈಫ್ ಬಳಸಿ ಅನೇಕ ಭಾವಚಿತ್ರಗಳನ್ನು ರಚಿಸಿದ್ದಾರೆ. ಉದಾಹರಣಗೆ ಹೇಳುವುವದಾದರೆ ನಿಪ್ಪಾಣಿಯ ಹಿರಿಯ ಕಲಾವಿದರಾದ ದಿವಂಗತ ಬಾಲಚಂದ್ರ ಕೊಠಡಿಯ, ವಿಶ್ವೇಶ್ವರಯ್ಯ, ದೀನನಾಥಜಿ, ಲತಾಮಂಗೇಶ್ಕರ್, ಆಶಾ ಭೊಸಲೆ ಇನ್ನೂ ಮೊದಲಾದವರನ್ನು ಧಾನ್ಯ ಮತ್ತು ಕರಿಮಣಿಗಳಿಂದ ರಚಿಸಲಾಗಿದೆ.

**ಲತಾ ಮಂಗೇಶ್ಕರ್ ಅವರ ಭಾವಚಿತ್ರ :**

ಈ ಭಾವಚಿತ್ರವನ್ನು ಸಂಪೂರ್ಣವಾಗಿ ಧಾನ್ಯದಿಂದ ಮಾಡಿದ್ದಾರೆ. ಭಾವಚಿತ್ರದಲ್ಲಿ ಲತಾ ಮಂಗೇಶ್ಕರ್ ಅವರ ಮುಖದಲ್ಲಿ ಹಾವಭಾವ, ವರ್ಣ ಸಂಯೋಜನೆಯನ್ನು ವಿವಿಧ ನಮೂನೆಯ ಧಾನ್ಯಗಳನ್ನು ಆಯ್ಕೆಮಾಡಿ, ಮುಖದ ಚರ್ಮದ ವರ್ಣಕ್ಕೆ ಅನುಗುಣವಾಗಿ ಧಾನ್ಯಗಳ ಮೇಲೆ ಬಣ್ಣವನ್ನು ಲೇಪಿಸಿದ್ದಾರೆ. ಒಟ್ಟಿನಲ್ಲಿ ಈ ಕಲಾಕೃತಿಯನ್ನು ನೋಡಿದರೆ ನೈಜ ರೂಪವನ್ನು ಕಾಣಬಹುದು. ಹಾಗೂ ಈ ಕಲಾಕೃತಿಯಲ್ಲಿ ಮೈವಳಿಕೆ, ವರ್ಣ ಸಂಯೋಜನೆ, ಸಮತೋಲನ ಹಾಗೂ ನೆರಳು ಬೆಳಕಿನ ಪಾತ್ರ ತುಂಬಾ ಮಹತ್ವಪೂರ್ಣವಾಗಿದೆ.

**ಪ್ರತಿಬಿಂಬ :**

ಪ್ರತಿಬಿಂಬ ಎಂದು ಹೆಸರಿಸಿದ ಈ ಕಲಾಕೃತಿಯು ತೈಲವರ್ಣದಿಂದ ರಚಿಸಲಾಗಿದೆ. ಈ ಕಲಾಕೃತಿಯಲ್ಲಿ ಅರಮನೆಯಲ್ಲಿನ ಒಂದು ಕೋಣೆಯಾಗಿದೆ. ಆ ಕೋಣೆಯಲ್ಲಿ ರಾಣಿಯು



# ಕಲಾವಿದ ಎಸ್. ಅಪ್ಪಾಸಾಹೇಬ ಬ. ಕಾಡಾಪೂರಕರ ಹಾಗೂ ಅವರ ಕಲಾಕೃತಿಗಳು





ವಿಶ್ವ ಸಂಗೀತ ಪೋಸ್ಟರ್ ವರ್ಣ



ಪ್ರತಿಬಿಂಬ ತೈಲವರ್ಣ ಕಲಾಕೃತಿ



ಚುಕ್ಕಿ ಚಿತ್ರ



ರೇಖಾ ಚಿತ್ರ



ಧಾನ್ಯಗಳಿಂದ ರಚಿಸಿದ ಕಲಾಕೃತಿ



ಭಾವಚಿತ್ರ



ನಿಪ್ಪಾಣಿಯಲ್ಲಿರುವ ಕಲಾವಿದರ ಮನೆ



ಶೃಂಗರಿಸಿಕೊಂಡು ದೊಡ್ಡದಾದ ಕನ್ನಡಿಯ ಮುಂದೆ ನಿಂತುಕೊಂಡು ತನ್ನನ್ನು ತಾನು ನೋಡಿಕೊಳ್ಳುತ್ತಿದ್ದಾಳೆ. ರಾಣಿಯು ನಿಂತುಕೊಂಡ ಸ್ಥಳದ ಹಿಂಬದಿಯಲ್ಲಿ ಕತ್ತಾಲಾವರಿಕೊಂಡು ಅಲ್ಲಿರುವಂತಹ ವಸ್ತುಗಳು ಮಸುಕು ಮಸಕಾಗಿ ಕಾಣಿಸುತ್ತವೆ. ಆದರೆ ರಾಣಿಯ ಎದುರಿಗೆ ದೊಡ್ಡದಾದ ಕನ್ನಡಿಯಲ್ಲಿ ಮಾತ್ರ ಬೆಳಕಿನ ಪ್ರಮಾಣ ಹೆಚ್ಚಿರುವುದರಿಂದ ಅಲ್ಲಿ ಎಲ್ಲವು ಸ್ಪಷ್ಟವಾಗಿ ಕಾಣಿಸುತ್ತವೆ. ಅವುಗಳಲ್ಲಿ ಕೋಣೆ, ರಾಣಿಯು ಶೃಂಗರಿಸಿದ ಆಭರಣಗಳು, ವಸ್ತ್ರವಿನ್ಯಾಸ, ರಾಣಿಯ ಪಕ್ಕದಲ್ಲಿರುವ ಹೂದಾನಿ, ದೀಪದ ಕಂಬ, ಇನ್ನೂ ಮುಂತಾದ ವಸ್ತುಗಳು ವರ್ಣಗಳಿಂದ ಅಲಂಕಾರಗೊಂಡು ತುಂಬಾ ಸುಂದರವಾಗಿದ್ದು, ನೈಜತೆಯಿಂದ ಕೂಡಿಕೊಂಡಿವೆ.

ರಾಣಿಯ ವಸ್ತ್ರವಿನ್ಯಾಸವು ತುಂಬಾ ಅದ್ಭುತವಾಗಿ ಮೂಡಿಬಂದಿದೆ. ರಾಣಿಯ ಮುಖದಲ್ಲಿ ನಾಚಿಕೆಯ ಭಾವನೆ ಎದ್ದು ಕಾಣಿಸುತ್ತದೆ. ಈ ಕಲಾಕೃತಿಯನ್ನು ನೋಡಿದರೆ ರಾಣಿಯು ತನ್ನ ಅಂದವನ್ನು ನೋಡಿಕೊಂಡು ತಾನೆ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡಿರಬೇಕು ಎಂಬುದು ಭಾಸವಾಗುತ್ತದೆ. ಒಟ್ಟಾರೆ ಈ ಕಲಾಕೃತಿಯು ಶೃಂಗಾರಮಯವಾಗಿ ಮೂಡಿಬಂದಿರುವುದು ಕಂಡುಬರುತ್ತದೆ.

ಎಸ್. ಅಪ್ಪಾಸಾಹೇಬ ಬ. ಕಾಡಾಪುರಕರ ಅವರಿಗೆ ಸಂದ ಗೌರವಗಳು ಅನೇಕ. ಅವುಗಳಲ್ಲಿ ಮುಖ್ಯವಾಗಿ ಜೀವನ ಕಲ್ಯಾಣ ನಾಟ್ಯ ಸಂಘದ ಸಿಲ್ವರ್ ಜ್ಯುಬ್ಲಿ ಆಚರಣೆಯ ನಿಮಿತ್ಯ ಸನ್ಮಾನ ಮತ್ತು ಪ್ರಶಸ್ತಿ, ಕೊಲ್ಹಾಪುರ (೧೯೭೬) ರಂಗಬಹಾರ ಸನ್ಮಾನ ಮತ್ತು ಪ್ರಶಸ್ತಿ, ಕೊಲ್ಹಾಪೂರ (೧೯೯೯) ಅರಿಹಂತ ಪುರಸ್ಕಾರ, ನಿಪ್ಪಾಣಿ (೨೦೦೦) ದಿ ಮಾರ್ಷಲ್ ಆರ್ಟ್ ಆ್ಯಂಡ್ ಸ್ಪೋರ್ಟ್ಸ್ ಅಕಾಡೆಮಿ, ನಿಪ್ಪಾಣಿ (೨೦೦೦) ವಿಶ್ವಕರ್ಮ ಸಮಾಜ, ಹುಬ್ಬಳ್ಳಿ ಸನ್ಮಾನ ಮತ್ತು ಪ್ರಶಸ್ತಿ (೨೦೦೫) ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಳಗಾವಿ ಸನ್ಮಾನ ಮತ್ತು ಪ್ರಶಸ್ತಿ (೨೦೦೫) ಶಿರಸಂಗಿ ಕಾಳಿಕಾ ಉತ್ಸವ ಸಮೀತಿ ಪ್ರಶಸ್ತಿ (೨೦೦೫) ಇವುಗಳಲ್ಲದೇ ಇನ್ನೂ ಹಲವಾರು ಪುರಸ್ಕಾರ, ಸನ್ಮಾನ ಮತ್ತು ಪ್ರಶಸ್ತಿಗಳನ್ನು ಅನೇಕ ಸಂಘ ಸಂಸ್ಥೆಗಳು ನೀಡಿ ಇವರ ಕಲಾಭಿವ್ಯಕ್ತಿಗೆ ಗೌರವಿಸಿವೆ.

**ಭೀಮರಾವ ಮುರಗೋಡ :**

ಈ ಕಲಾವಿದರ ಪೂರ್ಣ ಹೆಸರು ಭೀಮರಾವ ಫಕೀರಪ್ಪ ಮುರಗೋಡ. ತಂದೆ ಫಕೀರಪ್ಪ, ತಾಯಿ ಯಲ್ಲವ್ವ ಅವರ ಮಗನಾಗಿ ೧-೩-೧೯೪೫ ರಂದು ಗೋಕಾಕ್ ತಾಲೂಕಿನ ಸಿಂದಿಕುರಬೇಟನಲ್ಲಿ ಜನಿಸಿದರು. ಇವರು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಗೋಕಾಕ್‌ನಲ್ಲಿ ಮುಗಿಸಿಕೊಂಡು ಪ್ರೌಢ ಶಿಕ್ಷಣಕ್ಕೆ ಧಾರವಾಡನ ಕರ್ನಾಟಕ ಹೈಸ್ಕೂಲಿನಲ್ಲಿ ಸೇರಿದರು. ಮುಂದೆ ಇವರು ಧಾರವಾಡ ಸ್ಕೂಲಿನ ಪ್ರಾಚಾರ್ಯರಾಗಿದ್ದ ಪ್ರಸಿದ್ಧ ಕಲಾವಿದ ಡಿ.ವಿ ಹಾಲಭಾವಿಯವರ ಶಿಷ್ಯತ್ವವನ್ನು ಪಡೆದುಕೊಂಡು, ನಂತರ



ಮೈಸೂರಿನ ಎಸ್.ಎಸ್. ಸುಬ್ಬುಕೃಷ್ಣರ ಮಾರ್ಗದರ್ಶನದಲ್ಲಿ ಚಿತ್ರಕಲೆಯನ್ನು ಚೆನ್ನಾಗಿ ಅಭ್ಯಾಸ ಮಾಡಿದರು. ಇವರಿಬ್ಬರ ಗುರುಗಳ ಪ್ರಭಾವದಿಂದ ಭೀಮರಾವರವರು ಕಲೆಯಲ್ಲಿ ಹೆಚ್ಚು ಪ್ರಬುದ್ಧವನ್ನು ಪಡೆದುಕೊಂಡರು. ಇವರು ತಮ್ಮ ಡ್ರಾಯಿಂಗ್ ಟೀಚರ್ಸ ಕೋರ್ಸ, ಡಿಪ್ಲೋಮಾ ಇನ್ ಡ್ರಾಯಿಂಗ್ ಆ್ಯಂಡ ಪೇಂಟಿಂಗ್ ಕೋರ್ಸನ್ನು ಬೆಂಗಳೂರಿನಲ್ಲಿ ಪೂರ್ಣಗೊಳಿಸಿದರು. ಇವುಗಳಲ್ಲದೇ ಡಿಪ್ಲೋಮಾ ಇನ್ ಫೋಟೊಗ್ರಾಫಿ, ತೈಲವರ್ಣ ಭಾವಚಿತ್ರದಲ್ಲಿ ಪ್ಯಾರಿಸ್‌ನಲ್ಲಿ ವಿಶೇಷ ಅಧ್ಯಯನ ಮಾಡಿದರು.

ಸೃಜನಶೀಲತೆ ಸೂಕ್ಷ್ಮ ಸಂವೇದನೆ, ತಾರ್ಕಿಕತೆ ಹಾಗೂ ಸಂಯೋಜನಾ ಶಕ್ತಿಯುಳ್ಳ ವ್ಯಕ್ತಿತ್ವದ ಇವರು ಭಾವಚಿತ್ರಕಲೆಯ ಅನನ್ಯ ಪ್ರತಿಭೆಯನ್ನು ಹೊಂದಿರುವುದು ತಿಳಿದುಬರುತ್ತದೆ. ಇವರ ಚಿತ್ರಕಲಾಕೃತಿಗಳಲ್ಲಿ ಮೊದಮೊದಲು ನಿಸರ್ಗ ಕುರಿತು, ಇತಿಹಾಸ ಪುರಾಣ ಪ್ರಸಂಗ ಕುರಿತು, ಶೃಂಗಾರ ಕುರಿತು ಹಲವಾರು ಚಿತ್ರಗಳನ್ನು ಬರೆದಿರುವರು. ಹಾಗೂ ರೇಖಾಚಿತ್ರಗಳನ್ನು ಕೂಡ ರಚಿಸಿದ್ದಾರೆ. ಆದರೆ ಇವರು ಸೂಕ್ಷ್ಮ ತೈಲವರ್ಣ ಭಾವಚಿತ್ರಗಳ ಕಲಾವಿದರೆಂದೆ ಗುರುತಿಸಿಕೊಂಡಿದ್ದಾರೆ. ಇದರಲ್ಲಿಯ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಿರುವರು. ಭಾವಚಿತ್ರಕಲೆಯನ್ನು ತಮ್ಮ ಉಸಿರನ್ನಾಗಿಸಿಕೊಂಡಿರುವ ಇವರು ನಾಟಕ, ಸಿನಿಮಾ, ಛಾಯಾಚಿತ್ರ, ಸಾಹಿತ್ಯ, ಸಂಗೀತ, ಸಾಮಾಜಿಕ ಸುಧಾರಣೆ ಇನ್ನೂ ಹಲವಾರು ಆಸಕ್ತಿಗಳನ್ನು ಬೆಳೆಸಿಕೊಂಡಿರುವರು.

ಇವರು ಕಲಾಸಕ್ತಿಯನ್ನು ಬೆಳೆಸಿಕೊಳ್ಳುವಲ್ಲಿ ಮಹಾನ್ ಕಲಾವಿದರಾದ ರಾಜಾ ರವಿವರ್ಮನ ಕಲಾಕೃತಿಗಳು ಹಾಗೂ ಸ್ವಂತ ಇವರ ಅಣ್ಣನಾದ ಈಶ್ವರಪ್ಪ ಮುರಗೋಡ ಇವರ ಪ್ರಭಾವವು ಕೂಡ ಇದೆ. ಏಕೆಂದರೆ ಈಶ್ವರಪ್ಪ ಅವರು ಅತ್ಯಂತ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾಗಿದ್ದರು. ಈಶ್ವರಪ್ಪನವರ ಪ್ರಭಾವ ಪ್ರೇರಣೆ ಮತ್ತು ಸಹಾಯದಿಂದಾಗಿ ಭೀಮರಾವರವರು ಹೊರ ರಾಷ್ಟ್ರಗಳಲ್ಲೂ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಲು ಸಾಧ್ಯವಾಯಿತು. ಇವರ ಕಲಾಕೃತಿಗಳು ಅತ್ಯಂಯ ಮೇದಾವಿ ಕಲಾವಿದರ ಜೊತೆಗೆ ಪ್ರದರ್ಶಿತಗೊಂಡು, ಮೆಚ್ಚುಗೆಗೆ ಪಾತ್ರವಾಗಿ ಅಗ್ರ ಸ್ಥಾನವನ್ನು ಪಡೆದುಕೊಂಡಿವೆ. ಇವರ ಕಲಾಕೃತಿಗಳು ಕರ್ನಾಟಕ ರಾಜ್ಯದ ಹಲವಾರು ಭಾಗಗಳಲ್ಲಿ ಅಲ್ಲದೇ ಕಲಕತ್ತಾ, ಚನ್ನೈ, ದೆಹಲಿ, ಅಮೇರಿಕಾ, ಇನ್ನೂ ಮುಂತಾದ ಸ್ಥಳಗಳಲ್ಲಿ ಪ್ರದರ್ಶಿತಗೊಂಡು ಮೆಚ್ಚುಗೆಯನ್ನು ಪಡೆದಿವೆ.

ಇವರು ರಚಿಸಿದಂತ ಕಲಾಕೃತಿಗಳಲ್ಲಿ ಭಾವಚಿತ್ರಗಳೇ ಪ್ರಮುಖವಾಗಿದ್ದು ಅದರಲ್ಲೂ ರಾಷ್ಟಗಳ ನಾಯಕರ ಮತ್ತು ಗಣ್ಯರ ಸಮ್ಮುಖದಲ್ಲಿ ಭಾವಚಿತ್ರಗಳನ್ನು ಚಿತ್ರಿಸಿ ಗಣ್ಯರಿಂದ ಮೆಚ್ಚುಗೆ ಮತ್ತು ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಉದಾಹರಣೆಗೆ ರಾಜೀವ ಗಾಂಧಿ, ನೆಹರು, ಅಟಲ್ ಬಿಹಾರಿ ವಾಜಪೇ, ಧರ್ಮಸಿಂಗ, ಲಾಲು ಪ್ರಸಾದ ಅಡ್ವಾಣಿ, ಕಪೀಲ್‌ದೇವ, ಮದರ್ ತೆರೆಸಾ, ಕುವೆಂಪು ಇವರಲ್ಲದೇ ಅಮೇರಿಕಾದ ಅಧ್ಯಕ್ಷ ಜಿಮ್ಮಿ ಕಾರ್ಟರ್, ರಷ್ಯಾದ



ಮೈಸೂರಿನ ಎಸ್.ಎಸ್. ಸುಬ್ಬುಕೃಷ್ಣರ ಮಾರ್ಗದರ್ಶನದಲ್ಲಿ ಚಿತ್ರಕಲೆಯನ್ನು ಚೆನ್ನಾಗಿ ಅಭ್ಯಾಸ ಮಾಡಿದರು. ಇವರಿಬ್ಬರ ಗುರುಗಳ ಪ್ರಭಾವದಿಂದ ಭೀಮರಾವರವರು ಕಲೆಯಲ್ಲಿ ಹೆಚ್ಚು ಪ್ರಬುದ್ಧವನ್ನು ಪಡೆದುಕೊಂಡರು. ಇವರು ತಮ್ಮ ಡ್ರಾಯಿಂಗ್ ಟೀಚರ್ಸ ಕೋರ್ಸ, ಡಿಪ್ಲೋಮಾ ಇನ್ ಡ್ರಾಯಿಂಗ್ ಆ್ಯಂಡ ಪೇಂಟಿಂಗ್ ಕೋರ್ಸನ್ನು ಬೆಂಗಳೂರಿನಲ್ಲಿ ಪೂರ್ಣಗೊಳಿಸಿದರು. ಇವುಗಳಲ್ಲದೇ ಡಿಪ್ಲೋಮಾ ಇನ್ ಫೋಟೊಗ್ರಾಫಿ, ತೈಲವರ್ಣ ಭಾವಚಿತ್ರದಲ್ಲಿ ಪ್ಯಾರಿಸ್‌ನಲ್ಲಿ ವಿಶೇಷ ಅಧ್ಯಯನ ಮಾಡಿದರು.

ಸೃಜನಶೀಲತೆ ಸೂಕ್ಷ್ಮ ಸಂವೇದನೆ, ತಾರ್ಕಿಕತೆ ಹಾಗೂ ಸಂಯೋಜನಾ ಶಕ್ತಿಯುಳ್ಳ ವ್ಯಕ್ತಿತ್ವದ ಇವರು ಭಾವಚಿತ್ರಕಲೆಯ ಅನನ್ಯ ಪ್ರತಿಭೆಯನ್ನು ಹೊಂದಿರುವುದು ತಿಳಿದುಬರುತ್ತದೆ. ಇವರ ಚಿತ್ರಕಲಾಕೃತಿಗಳಲ್ಲಿ ಮೊದಮೊದಲು ನಿಸರ್ಗ ಕುರಿತು, ಇತಿಹಾಸ ಪುರಾಣ ಪ್ರಸಂಗ ಕುರಿತು, ಶೃಂಗಾರ ಕುರಿತು ಹಲವಾರು ಚಿತ್ರಗಳನ್ನು ಬರೆದಿರುವರು. ಹಾಗೂ ರೇಖಾಚಿತ್ರಗಳನ್ನು ಕೂಡ ರಚಿಸಿದ್ದಾರೆ. ಆದರೆ ಇವರು ಸೂಕ್ಷ್ಮ ತೈಲವರ್ಣ ಭಾವಚಿತ್ರಗಳ ಕಲಾವಿದರೆಂದೆ ಗುರುತಿಸಿಕೊಂಡಿದ್ದಾರೆ. ಇದರಲ್ಲಿಯ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಿರುವರು. ಭಾವಚಿತ್ರಕಲೆಯನ್ನು ತಮ್ಮ ಉಸಿರನ್ನಾಗಿಸಿಕೊಂಡಿರುವ ಇವರು ನಾಟಕ, ಸಿನಿಮಾ, ಛಾಯಾಚಿತ್ರ, ಸಾಹಿತ್ಯ, ಸಂಗೀತ, ಸಾಮಾಜಿಕ ಸುಧಾರಣೆ ಇನ್ನೂ ಹಲವಾರು ಆಸಕ್ತಿಗಳನ್ನು ಬೆಳೆಸಿಕೊಂಡಿರುವರು.

ಇವರು ಕಲಾಸಕ್ತಿಯನ್ನು ಬೆಳೆಸಿಕೊಳ್ಳುವಲ್ಲಿ ಮಹಾನ್ ಕಲಾವಿದರಾದ ರಾಜಾ ರವಿವರ್ಮನ ಕಲಾಕೃತಿಗಳು ಹಾಗೂ ಸ್ವಂತ ಇವರ ಅಣ್ಣನಾದ ಈಶ್ವರಪ್ಪ ಮುರಗೋಡ ಇವರ ಪ್ರಭಾವವು ಕೂಡ ಇದೆ. ಏಕೆಂದರೆ ಈಶ್ವರಪ್ಪ ಅವರು ಅತ್ಯಂತ ಶ್ರೇಷ್ಠ ಕಲಾವಿದರಲ್ಲಿ ಒಬ್ಬರಾಗಿದ್ದರು. ಈಶ್ವರಪ್ಪನವರ ಪ್ರಭಾವ ಪ್ರೇರಣೆ ಮತ್ತು ಸಹಾಯದಿಂದಾಗಿ ಭೀಮರಾವರವರು ಹೊರ ರಾಷ್ಟ್ರಗಳಲ್ಲೂ ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಲು ಸಾಧ್ಯವಾಯಿತು. ಇವರ ಕಲಾಕೃತಿಗಳು ಅತ್ಯಂಯ ಮೇದಾವಿ ಕಲಾವಿದರ ಜೊತೆಗೆ ಪ್ರದರ್ಶಿತಗೊಂಡು, ಮೆಚ್ಚುಗೆಗೆ ಪಾತ್ರವಾಗಿ ಅಗ್ರ ಸ್ಥಾನವನ್ನು ಪಡೆದುಕೊಂಡಿವೆ. ಇವರ ಕಲಾಕೃತಿಗಳು ಕರ್ನಾಟಕ ರಾಜ್ಯದ ಹಲವಾರು ಭಾಗಗಳಲ್ಲಿ ಅಲ್ಲದೇ ಕಲಕತ್ತಾ, ಚನ್ನೈ, ದೆಹಲಿ, ಅಮೇರಿಕಾ, ಇನ್ನೂ ಮುಂತಾದ ಸ್ಥಳಗಳಲ್ಲಿ ಪ್ರದರ್ಶಿತಗೊಂಡು ಮೆಚ್ಚುಗೆಯನ್ನು ಪಡೆದಿವೆ.

ಇವರು ರಚಿಸಿದಂತ ಕಲಾಕೃತಿಗಳಲ್ಲಿ ಭಾವಚಿತ್ರಗಳೇ ಪ್ರಮುಖವಾಗಿದ್ದು ಅದರಲ್ಲೂ ರಾಷ್ಟಗಳ ನಾಯಕರ ಮತ್ತು ಗಣ್ಯರ ಸಮ್ಮುಖದಲ್ಲಿ ಭಾವಚಿತ್ರಗಳನ್ನು ಚಿತ್ರಿಸಿ ಗಣ್ಯರಿಂದ ಮೆಚ್ಚುಗೆ ಮತ್ತು ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಉದಾಹರಣೆಗೆ ರಾಜೀವ ಗಾಂಧಿ, ನೆಹರು, ಅಟಲ್ ಬಿಹಾರಿ ವಾಜಪೇ, ಧರ್ಮಸಿಂಗ, ಲಾಲು ಪ್ರಸಾದ ಅಡ್ವಾಣಿ, ಕಪೀಲ್‌ದೇವ, ಮದರ್ ತೆರೆಸಾ, ಕುವೆಂಪು ಇವರಲ್ಲದೇ ಅಮೇರಿಕಾದ ಅಧ್ಯಕ್ಷ ಜಿಮ್ಮಿ ಕಾರ್ಟರ್, ರಷ್ಯಾದ



ಅಧ್ಯಕ್ಷ ಘುಟೇನ್ ಇನ್ನೂ ಮುಂತಾದವರನ್ನು ಹೆಸರಿಸಬಹುದು. ಹಾಗೆಯೇ ದೇಶ ವಿದೇಶಗಳ ಹಲವಾರು ಭಾಷೆಗಳ ಗ್ರಂಥಗಳಿಗೆ ಮುರುಗೋಡ ಅವರು ಮುಖಪುಟ ಚಿತ್ರ ಹಾಗೂ ರೇಖಾಚಿತ್ರಗಳನ್ನು ಬರೆದಿದ್ದಾರೆ. ದೆಹಲಿಯ ಅನೇಕ ಕನ್ನಡ ಸಂಘ ಸಂಸ್ಥೆಗಳಿಗೆ ತಮ್ಮ ಸ್ವರಚಿತ ಕಲಾಕೃತಿಗಳನ್ನು ಕೊಡುಗೆಯಾಗಿ ನೀಡಿದ್ದಾರೆ. ದೆಹಲಿಯ ಕರ್ನಾಟಕ ಸಂಘದ ಲಾಂಚನ ಇವರಿಂದಲೇ ರಚಿತವಾದದ್ದು ಗಮನಾರ್ಹವಾದ ಸಂಗತಿಯಾಗಿದೆ.

ವಿದೇಶಿ ಚಿತ್ರಕಲಾವಿದರಾದ ರೆಂಬ್ರಾ, ಲಿಯೊನಾರ್ಡೊ ಡಾ ವಿಂಚಿ, ಮೈಕಲ್ ಎಂಜಿಲೊ, ರೋಧಾ ಮುಂತಾದವರ ಪ್ರಭಾವ ಮುರಗೋಡ ಅವರು ರಚಿಸುವಂತ ಭಾವಚಿತ್ರಗಳಲ್ಲಿ ಕಾಣಬಹುದು. ರಾಷ್ಟ್ರಪತಿ ಭವನ, ಸಂಸತ್ ಭವನ, ಶ್ವೇತ ಭವನ, ವಿಧಾನಸೌದ, ಅರಮನೆ, ಮಹಲ್‌ಗಳಲ್ಲಿ ಇವರ ಕಲಾಕೃತಿಗಳು ಅನಾವರಣಗೊಂಡಿರುವುದು ಇವರ ಕಲಾಪ್ರತಿಭೆಗೆ ಜೀವಂತ ಸಾಕ್ಷಿಯಾಗಿ ರಾರಾಜಿಸುತ್ತಿವೆ.

**ಬಸವಣ್ಣನವರ ಭಾವಚಿತ್ರ :**

ಈ ಕಲಾಕೃತಿಯಲ್ಲಿ ಬಸವಣ್ಣನವರು ಹಸನ್ಮುಖಿಯಾಗಿರುವುದನ್ನು ಕಾಣಬಹುದು. ಬಸವಣ್ಣನವರ ವಸ್ತ್ರವಿನ್ಯಾಸಗಳು, ಅವರು ಧರಿಸಿದಂತಹ ಆಭರಣಗಳಲ್ಲಿಯ ಬಣ್ಣಗಳನ್ನು ಗಮನಿಸಿದಾಗ ಕಲಾವಿದನ ಕಲಾ ಪಾಂಡಿತ್ಯವನ್ನು ತಿಳಿಯಬಹುದು. ಕಲಾಕೃತಿಯಲ್ಲಿ ಬಳಸಿದಂತಹ ಬಣ್ಣಗಳು ಅತೀ ಶ್ರೀಮಂತ ವರ್ಣಗಳಾಗಿದ್ದು, ಮುಖದಲ್ಲಿ ಕೆನ್ನೆಯ ಮೇಲೆ ಬಳಸಿದ ಬಣ್ಣವು ಚರ್ಮದ ನೈಜತೆಯನ್ನು ತೋರಿಸುತ್ತದೆ. ಹಿನ್ನೆಲೆಯಾಗಿ ಸಹಜವಾಗಿ ಬಣ್ಣಗಳನ್ನು ಬಳಸದೆ ಅಲ್ಲಿಯು ಮನಸೆಳೆಯುವಂತ ಬಣ್ಣಗಳ ಬಳಕೆ ಅತೀ ಸುಂದರವಾಗಿದೆ. ಒಟ್ಟಾರೆಯಾಗಿ ಈ ಕಲಾಕೃತಿಯು ಕಲಾವಿದನ ಕಲಾ ಪ್ರತಿಭೆಯನ್ನು ಎತ್ತಿ ತೋರಿಸುವಂತೆದೆ.

**ದೇವಿ ಸರಸ್ವತಿಯ ಕಲಾಕೃತಿ :**

ನಿಸರ್ಗದ ಮಧ್ಯದಲ್ಲಿ ಹರಿಯುವ ನೀರಿನ ದಡದ ಮೇಲಿರುವ ಬಂಡೆಯ ಮೇಲೆ ವೀಣೆಯನ್ನು ಕೈಯಲ್ಲಿ ಹಿಡಿದುಕೊಂಡು ಪ್ರಸನ್ನತೆಯ ಮುಖವನ್ನು ಹೊಂದಿರುವ ಕಲಾಕೃತಿ ಇದಾಗಿದೆ. ಈ ಕಲಾಕೃತಿಯಲ್ಲಿ ನಿಸರ್ಗವನ್ನು ಚಿತ್ರಿಸಿರುವುದನ್ನು ಗಮನಿಸಿದರೆ ಇದು ನೈಜತೆಗೆ ತುಂಬಾ ಹತ್ತಿರವಾಗಿದೆ. ಸರಸ್ವತಿಯ ದೇವಿಯು ಒಂದು ಕಾಲ ಮೇಲೆ ಇನ್ನೊಂದು ಕಾಲನ್ನು ಇರಿಸಿ ಕೈಯಲ್ಲಿಯ ವೀಣೆಯನ್ನು ತನ್ನ ತೊಡೆಯ ಬದಿಗಿಟ್ಟು ಬೆರಳುಗಳಿಂದ ನುಡಿಸುತ್ತಿರುವಂತೆ ಚಿತ್ರಿಸಲಾಗಿದೆ. ಈಕೆಯು ನುಡಿಸಿದ ವೀಣೆಯ ನಾದಸ್ವರಕ್ಕೆ ವನ್ಯ ಜೀವಿಗಳು, ಜಲಚರ ಪ್ರಾಣಿ, ಪಕ್ಷಿಗಳು ಕಿವಿಗೊಟ್ಟು ಕೇಳುತ್ತಿರುವಂತೆ ಈ ಕಲಾಕೃತಿಯಲ್ಲಿ ಕಾಣಬಹುದು. ಈ ಕಲಾಕೃತಿಯಲ್ಲಿರುವ ನವಿಲು ಮತ್ತು ಬಿಳಿ ಬಣ್ಣದ ಹಂಸ ಪಕ್ಷಿಗಳಿಗೆ ತುಂಬಿರುವಂತ ಬಣ್ಣಗಳು ಜೀವಂತ ಕಳೆಯನ್ನು ಸೂಚಿಸುತ್ತವೆ. ವಿದ್ಯಾದೇವತೆಯ ತಲೆಯ



ಮೇಲೆ ಚಿನ್ನದ ಕಿರೀಟ, ಕೊರಳಿನಲ್ಲಿ ಹಾರಗಳು, ಬಂಗಾರದ ಒಡವೆಗಳನ್ನು ಕೊರಳು, ಸೊಂಟ, ಕೈಗಳಿಗೆ ಧರಿಸಿರುವಳು ಹಾಗೂ ಬಿಳಿ ಬಣ್ಣದ ಬಂಗಾರದ ಅಂಚಿರುವ ಸೀರೆಯನ್ನು ಉಟ್ಟು ಸುಂದರವಾಗಿ ಕಂಗೊಳಿಸುತ್ತಿರುವ ದೃಶ್ಯ ಕಲಾವಿದನ ಕೈಚಳಕಕ್ಕೆ ಸಾಕ್ಷಿಯಾಗಿದೆ.

ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರಗಳ ಮಟ್ಟದ ಇಂತಹ ಕಲಾವಿದರಿಗೆ ಸಂದ ಗೌರವಗಳು, ಪ್ರಶಸ್ತಿಗಳು ಹಲವಾರು. ಅವುಗಳಲ್ಲಿ ಮುಖ್ಯವಾಗಿ ಕೆಲವೊಂದನ್ನು ಹೇಳುವುದಾದರೆ ರಾಜ್ಯೋತ್ಸವ ಪ್ರಶಸ್ತಿ, (೧೯೯೦) ರಾಮದುರ್ಗ ತಾಲೂಕಿನ ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ, ಸನ್ಮಾನ ಮತ್ತು ಪ್ರಶಸ್ತಿ (೨೦೦೪) ಕಾಂಗ್ರೆಸ್ ಸೇವಾದಳ ಮೈಸೂರು ಪ್ರದೇಶ ಸನ್ಮಾನ ಮತ್ತು ಪ್ರಶಸ್ತಿ (೧೯೬೦) ದೆಹಲಿಯ ಕರ್ನಾಟಕ ಸಂಘ (೧೯೯೦) ಸನ್ಮಾನ ಮತ್ತು ಪ್ರಶಸ್ತಿ, ಸೆಂಟ್ರಲ್ ಸಿವಿಲ್ ಸರ್ವಿಸ್ ಸ್ಪೋರ್ಟ್ಸ್ ಕಂಟ್ರೋಲ್ ಬೋರ್ಡ್, ಸನ್ಮಾನ ಮತ್ತು ಪ್ರಶಸ್ತಿ (೧೯೭೦) ಮಾನವ ಸೇವಾ ಪರಿಷತ್ ಸನ್ಮಾನ ಮತ್ತು ಪ್ರಶಸ್ತಿ (೧೯೯೧) ರಾಣಿ ಜಾನ್ಸಿ ಬಲಿದಾನ ಸ್ಮೃತಿ ಸಮ್ಮೇಳನ (೧೯೯೨) ಸನ್ಮಾನ ಮತ್ತು ಪ್ರಶಸ್ತಿ, ಜ್ಞಾನ ಮಂದಾರ ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಅಕಾಡೆಮಿ (೨೦೦೫) ಸನ್ಮಾನ ಮತ್ತು ಪ್ರಶಸ್ತಿ ಅಂತರ್‌ರಾಷ್ಟ್ರೀಯ ಬಸವ ಸಂಘ, ದೆಹಲಿ (೨೦೦೬) ಸನ್ಮಾನ ಮತ್ತು ಪ್ರಶಸ್ತಿ, ಇವುಗಳಲ್ಲದೇ ಇನ್ನೂ ಹಲವಾರು ಸನ್ಮಾನ, ಪ್ರಶಸ್ತಿ ಮತ್ತು ಗೌರವಗಳು ಲಭಿಸಿವೆ.

ಇಂತಹ ಹಿರಿಯ ಕಲಾವಿದರ ಸಮಕಾಲೀನರಾದ ಕೆ.ಬಿ. ಕುಲಕರ್ಣಿ, ಹಾಗೂ ಇಂದಿರಾ ಕುಲಕರ್ಣಿ ಸಂಕೇಶ್ವರದ ನಾಗನಗೌಡರ, ಹುಕ್ಕೇರಿ ತಾಲೂಕಿನ ಹೆಬ್ಬಾಳ ಗ್ರಾಮದ ಎಂ.ಆರ್. ಬಾಳಿಕಾಯಿ ಇನ್ನೂ ಮುಂತಾದ ಕಲಾವಿದರು ಬೆಳಗಾವಿ ಜಿಲ್ಲೆಯ ಕಲಾಕ್ಷೇತ್ರಕ್ಕೆ ತಮ್ಮ ಕೊಡುಗೆಯನ್ನು ನೀಡುತ್ತಾ ಬಂದಿದ್ದಾರೆ. ಒಟ್ಟಾರೆಯಾಗಿ ಬೆಳಗಾವಿ ಜಿಲ್ಲೆಗೆ ಕಲಾವಿದರ ನಾಡು ಎಂದು ಕರೆದರೆ ಅತಿಶಯೋಕ್ತಿಯಾಗಲಾರದು. ಬೆಳಗಾವಿಯಲ್ಲಿರು ಪ್ರಸ್ತುತದಲ್ಲಿರುವ ಕಲಾವಿದರು ಬೆಳಗಾವಿ ಆರ್ಟ್ ಸೊಸೈಟಿ, ಪ್ಯಾಲೇಟ್ ಆರ್ಟಿಸ್ಟ್ ಗ್ರೂಪ್ ಇವುಗಳ ಮೂಲಕ ಕಲಾ ಚಟುವಟಿಕೆಗಳಿಗೆ ಕಾರಣರಾಗಿದ್ದಾರೆ. ಅಲ್ಲದೆ ಈ ಜಿಲ್ಲೆಯ ಕಲೆಯ ಬೆಳವಣಿಗೆಗಾಗಿ ಶ್ರಮಿಸುತ್ತಿದ್ದಾರೆ.

ಯುವ ಕಲಾವಿದರು ಕಲೆಯ ಬೆಳವಣಿಗೆಗಾಗಿ ಇತ್ತೀಚಿನ ದಿನಗಳಲ್ಲಿ ಸಪ್ತರಂಗ ಕಲಾವಿದರ ಸಂಘವೊಂದನ್ನು ಪ್ರಾರಂಭಿಸಿದರು. ಈ ಸಪ್ತರಂಗ ಸಂಘದಲ್ಲಿ ಶೇಖರ ಕದಡಿ, ಡಿ.ವಿ. ಕುಲಕರ್ಣಿ, ಶಿವ ಹಿರೇಮಠ, ಬಾಬುರಾವ ನಡೋಣಿ, ವಿಶ್ವನಾಥ ಗುಜಾರಿ, ಮಹೇಶ ಅಗಸಿಮನಿ, ರಾಜು ಮುತಗೇಕರ, ಸಚಿನ್ ಉಪಾಧ್ಯೆ, ದೊಡಕನ್ನವರ, ಸುಭಾಷ ಕಮ್ಮಾರ, ಇನ್ನೂ ಮುಂತಾದವರು. ಸಪ್ತರಂಗ ಕಲಾವಿದರ ಸಂಘದಿಂದ ಸಾಕಷ್ಟು ಕಲಾ ಚಟುವಟಿಕೆಗಳು ಜನಸಾಮಾನ್ಯರ ಗಮನ ಸೆಳೆದವು. ಈ ಜಿಲ್ಲೆಯಲ್ಲಿ ಚಿತ್ರಕಲಾವಿದರು ಮಾತ್ರವಲ್ಲದೆ ಶಿಲ್ಪಕಲಾವಿದರು, ಕರಕುಶಲ ಕಲಾವಿದರು ಇರುವುದು ತಿಳಿದುಬರುತ್ತದೆ. ಕೆಲವು ಪ್ರಮುಖರನ್ನು



ಕಲಾವಿದ ಭೀಮರಾವ ಮುರಗೋಡ ಹಾಗೂ ಅವರ ಕಲಾಕೃತಿಗಳು





ಭಾವಚಿತ್ರಣದಲ್ಲಿ ನಿರತರಾದ ಕಲಾವಿದ ಭೀಮರಾವ





ಸರಸ್ವತಿಯ ಕಲಾಕೃತಿ, (ತೈಲವರ್ಣ)



ಬಸವಣ್ಣನ ಭಾವಚಿತ್ರ



ಹೆಸರಿಸುವುದಾದರೆ ಶಂಕ್ರಪ್ಪ ಪತ್ತಾರ ಬೈಲಹೊಂಗಲ, ಹೂವಪ್ಪ ಕಂಚಗಾರ ಬೈಲಹೊಂಗಲ, ಸಿದ್ದಪ್ಪಾ ಜಿ. ಪತ್ತಾರ ಬೆಳಗಾವಿ, ಸಾಬಣ್ಣವರ ಶಾಪೂರ, ಮಹದೇವ ಪತ್ತಾರ ರಾಜಾಪೂರ, ಸುರೇಶಪ್ಪಾ ದೇಶನೂರು ಬೆಳಗಾವಿ, ಜಿ.ಎ. ಪತ್ತಾರ. ಚಂದ್ರಯ್ಯ ಕಾಡಯ್ಯ ಯರಗಟ್ಟಿಮಠ, ಬೈಲಹೊಂಗಲ ಇವರಲ್ಲದೇ ಜಿಲ್ಲೆಯಲ್ಲಿರುವ ಬೆಳಕಿಗೆ ಬರಬೇಕಾದ ಅನೇಕ ಕಲಾವಿದರಿದ್ದಾರೆ. ಅವರಿಗೆ ಸರ್ಕಾರ, ಲಲಿತಕಲಾ ಅಕಾಡೆಮಿ, ಶಿಲ್ಪಕಲಾ ಅಕಾಡೆಮಿ ಹಾಗೂ ಸಂಘ ಸಂಸ್ಥೆಗಳು ಅವಕಾಶ ದೊರಕಿಸಿಕೊಟ್ಟರೆ ಶ್ರೇಷ್ಠ ಕಲಾವಿದರಾಗಲು ಸಾಧ್ಯವಾಗುವುದು. ಇದರಿಂದಾಗಿ ಬೆಳಗಾವಿ ಜಿಲ್ಲೆಯ ಕಲೆಯ ಇನ್ನೂ ಸಮೃದ್ಧಿ ಹೊಂದುವುದರ ಜೊತೆಗೆ ರಾಷ್ಟ್ರ ಮತ್ತು ಅಂತರ್‌ರಾಷ್ಟ್ರ ಮಟ್ಟದಲ್ಲಿ ಬೆಳಗಾವಿ ಜಿಲ್ಲೆಯ ಕೀರ್ತಿ ಇನ್ನಷ್ಟು ಹೆಚ್ಚಿಸಬಹುದು.

* * * * *



ಒಂದು ದೇಶದ ಭವಿತವ್ಯ ಯಾವ ಕಾಲದಲ್ಲಿಯೇ ಆಗಲಿ ಅವಲಂಬಿಸಿರುವುದು ಆ ದೇಶ ಜನ್ಮವಿಯಬಲ್ಲ ಬುದ್ಧಿವಂತರ ಮೇಲೆ, ವಿದ್ಯಾವಂತರ ಮೇಲೆಯೇ. ಯಾವುದೇ ದೇಶದ ಇತಿಹಾಸವನ್ನು ನೋಡಿದರೂ ಈ ವಾಸ್ತವಿಕತೆ ಸ್ಪಷ್ಟವಾಗಿ ಕಂಡುಬರುತ್ತದೆ. ಮಾನವ ಜೀವನ ವಿಕಾಸಕ್ಕೆ ಆಶನ, ವಸನ, ವಸತಿಗಳಷ್ಟೇ ಮುಖ್ಯವಲ್ಲ. ಅನ್ನ-ಅರಿವೆಗಳ ಜೊತೆಗೆ ಅರಿವು ಮುಖ್ಯ. ನಮ್ಮ ಬದುಕನ್ನು ಸರ್ವಾಂಗ ಸುಂದರವನ್ನಾಗಿ ಮಾಡಿಕೊಂಡು, “ಬಹುಜನ ಹಿತಾಯ, ಬಹುಜನ ಸುಖಾಯ”ವಾದ ಬಾಳನ್ನು ಸಾಗಿಸಬೇಕಾದರೆ ಶಿಕ್ಷಣದ ಅಗತ್ಯವಿದೆ. ಮನುಹೇಳುವಂತೆ ವಿದ್ಯೆ ಅಥವಾ ಶಿಕ್ಷಣವಿಲ್ಲದ ಮನುಷ್ಯ ಪಶುವಿಗೆ ಸಮಾನವೆನ್ನುವಲ್ಲಿ ಶಿಕ್ಷಣದ ಗೊತ್ತಾಗುತ್ತದೆ.[೧]

ಭಾವಿ ಜಗತ್ತಿನ ಮಹಾನ್ ಕಲಾವಿದ/ಕಲಾವಿದೆಯರು ವರ್ಗದ ಕೋಣೆಗಳಲ್ಲಿ ಸಿದ್ಧರಾಗುತ್ತಾರೆ. ಎನ್ನುವಂತಹ ಮಾತು ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತಕ್ಕೆ ಅನ್ವಯಿಸಿ ಹೇಳಬಹುದಾದ ಉಕ್ತಿಯಾಗಿದೆ. ಶಾಲೆ ಸಮಾಜ ಮತ್ತು ಸಮುದಾಯದ ಒಂದು ಪ್ರಮುಖ ಅಂಗ. ಸಮಾಜವು ತನ್ನ ಒಳಿತಿಗಾಗಿ, ಏಳ್ಗೆಗಾಗಿ ತಾನೇ ರೂಪಿಸಿಕೊಂಡ ಒಂದು ವ್ಯವಸ್ಥೆಯೇ ಶಾಲೆ ಎನ್ನಬಹುದು. ಹೀಗಾಗಿ ಶಾಲೆ ಸಾಮಾಜಿಕ ಸಂರಚನೆಯ ಮೇಲೆ ರೂಪುಪಡೆದಿರುವಂತಹದು. ಶಾಲೆಯಲ್ಲಿ ಮಕ್ಕಳು ಬೆಳೆದು ಸರ್ವಾಂಗೀಣ ತರಬೇತಿಯನ್ನು

---

೧. ಡಾ.ಎಸ್.ಸಿ. ಪಾಟೀಲ : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, (ಲೇ) ಚಿತ್ರಕಲೆ ಮತ್ತು ಶಿಕ್ಷಣ, ಪುಟ,೧೧೨



ಪಡೆದು ಸಮಾಜಕ್ಕೆ ಬರುತ್ತಾರೆ. ಸಮಾಜದ ವಿವಿಧ ಸ್ಥರಗಳಲ್ಲಿ ಅವರು ಕಾರ್ಯನಿರ್ವಹಿಸುತ್ತಾರೆ. ಹಾಗಾಗಿ ಶಾಲೆಯು ಒಂದು ಪುಟ್ಟ ಸಮಾಜವೇ ಆಗಿದೆ ಎಂದರೆ ತಪ್ಪಾಗಲಾರದು. ಶಾಲೆಗೂ ಮತ್ತು ಸಮಾಜಕ್ಕೂ ಒಂದು ಬಿಡಿಸಲಾಗದ ನಂಟುತನವಿದೆ.[೨]

ಶಾಲೆಯಿಂದ ಹೊರಬಂದ ಮಕ್ಕಳು ಉತ್ತಮ ಸಂಸ್ಕಾರ ಪಡೆದು ಸಮಾಜಕ್ಕೆ ಬಂದರೆ ಸಮಾಜದ ಸ್ವಾಸ್ಥ್ಯ ಉತ್ತಮವಾಗಿರುತ್ತದೆ. ಸಮಾಜದ ಅಳಿವು ಉಳಿವುಗಳನ್ನು ನಿರ್ಧರಿಸುವ ಅಂಶಗಳಲ್ಲಿ ಶಾಲೆಯ ಪಾತ್ರವನ್ನು ಗಂಭೀರವಾಗಿ ಪರಿಗಣಿಸಲಾಗುತ್ತದೆ. ಹೀಗಾಗಿ ಶಾಲೆಯಲ್ಲಿ ಕೊಡುವ ಶಿಕ್ಷಣವು ಸಮಾಜಮುಖಿಯಾಗಿ ಸುಸಂಸ್ಕೃತ ಸಮಾಜವನ್ನು ನಿರ್ಮಿಸುವ ಸದಾಶಯವನ್ನು ಹೊಂದಿರಬೇಕಾಗುತ್ತದೆ. ಅದಕ್ಕಾಗಿ ಶಾಲೆಯ ಗುರಿಗಳು ಹೊಸ ಹೊಸ ರೀತಿಯ ಸಾಮಾಜಿಕ ಸ್ಪಂದನೆಗೆ ಅನುಸರಿಸಿ ಆಗಾಗ ಪುನರ್‌ರಚನೆಯಾಗುತ್ತ ಇರಬೇಕಾಗುತ್ತದೆ. ಅಂದಾಗ ಮಾತ್ರ ಶಾಲೆ ಮತ್ತು ಸಮಾಜದ ನಡುವೆ ಉತ್ತಮ ಸಂಬಂಧ ಬೆಳೆಯಲು ಸಾಧ್ಯ. ಯಾವುದೇ ಸಮಾಜದ ಉತ್ಕೃಷ್ಟತೆಯ ಮೇಲೆ ಆಯಾ ದೇಶದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಅಳೆಯಲಾಗುತ್ತದೆ. ಒಂದು ಸಾಂಸ್ಕೃತಿಕ ಸಂಬಂಧ ಇಲ್ಲವೆ, ವೈಯಕ್ತಿಕ ಮನೋಲಹರಿಗಳನ್ನು ಮೀರಿ ಸದಾವಕಾಲದಲ್ಲಿಯೂ ಮಾನವ ಸ್ವಭಾವವನ್ನು ಹೊಕ್ಕು ನಿಲ್ಲುವ ಜ್ಞಾನಗಮ್ಯವಾದ ಮೌಲ್ಯಗಳು ವಿಶೇಷವಾಗಿ ಲಲಿತಕಲೆಗಳಲ್ಲಿ ಇರುವುದನ್ನು ಸಂಶೋಧನೆಗಳು ದೃಢಪಡಿಸಿವೆ. ಇಂತಹ ಅಭಿವ್ಯಕ್ತಿ ಮಾಧ್ಯಮ ವಿಷಯವನ್ನು ಹಂತದಲ್ಲಿ ಮಕ್ಕಳಿಗೆ ಬೋಧಿಸುವ ಕ್ರಮದ ಬಗ್ಗೆ ಬ್ರಿಟಿಷರ ಕಾಲದಿಂದಲೂ ನಮ್ಮಲ್ಲಿ ಪ್ರಯತ್ನಗಳು ನಡೆದುಬಂದಿವೆ.

**ಕಲಾಶಾಲೆಗಳ ಉಗಮ :**

ಭಾರತದಲ್ಲಿ ಪ್ರಪ್ರಥಮವಾಗಿ ಕಲೆಗಾಗಿಯೇ ಮಿಸಲಾದ ಚಿತ್ರಕಲಾ ಶಾಲೆಗಳು ಕ್ರಿ.ಶ. ೧೮೫೪ರ ಜೂನ್ ತಿಂಗಳಲ್ಲಿ ಪ್ರಾರಂಭಗೊಡವು. ಅವುಗಳಲ್ಲಿ ಸರಕಾರಿ ಚಿತ್ರಕಲಾ ಶಾಲೆ ಕಲ್ಕತ್ತಾ, ಕ್ರಿ.ಶ. ೧೮೫೪ರ ಡಿಸೆಂಬರ್ ತಿಂಗಳಲ್ಲಿ ಮದ್ರಾಸ್ (ಚೆನ್ನೈ)ದಲ್ಲಿ ಕೈಗಾರಿಕಾ ಕರಕುಶಲ ಮತ್ತು ಚಿತ್ರಕಲಾ ಶಿಕ್ಷಣದ ಕಲಾ ಶಾಲೆ, ಕ್ರಿ.ಶ. ೧೮೫೭ರ ಮಾರ್ಚ್ ೨ರಂದು ಸರ್ ಜೆಮ್‌ಸೇಟ್ ಜೀಜಾಬಾಯಿ (ಜೆ.ಜೆ. ಕಲಾಶಾಲೆ) ಚಿತ್ರಕಲಾ ಶಾಲೆ ಮುಂಬೈಯಲ್ಲಿ ಹಾಗೂ ಕ್ರಿ.ಶ. ೧೮೭೮ ರಲ್ಲಿ ಲಾಹೋರ್‌ನಲ್ಲಿ ಮಾಯೊ ಚಿತ್ರಕಲಾ ಶಾಲೆಗಳನ್ನು ಬ್ರಿಟಿಷರು ಪ್ರಾರಂಭಿಸಿ ಕಲಾಶಾಲೆಗಳಿಗೆ ಚಾಲನೆ ನೀಡಿದರು. ಹಾಗೂ ಈ ಕಲಾಶಾಲೆಗಳಿಗೆ ಲಾರ್ಡ್ ಕರ್ಜನ್‌ನು ಇನ್ನಷ್ಟು ಪ್ರೋತ್ಸಾಹಿಸಿದನೆಂದು ತಿಳಿದುಬರುತ್ತದೆ.

ಕರ್ನಾಟಕ ರಾಜ್ಯದಲ್ಲಿ ಕಲಾ ಶಿಕ್ಷಣವನ್ನು ಬೇರೆ ಬೇರೆ ಹಂತಗಳಲ್ಲಿ ಗುರುತಿಸಬಹುದು. ಹಿಂದಿನ ಸಾಂಪ್ರದಾಯಿಕ ಕಲಾ ಶಿಕ್ಷಣ, ವಂಶ ಪರಂಪರೆಯಾಗಿ ಮುಂದುವರೆಯುತ್ತಿದ್ದ

೨. ಡಾ.ಎಸ್.ಸಿ.ಪಾಟೀಲ : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, (ಲೇ) ಚಿತ್ರಕಲೆ ಮತ್ತು ಶಿಕ್ಷಣ, ಪುಟ, ೧೧೫



ಪದ್ಧತಿಯಿತ್ತು. ಬ್ರಿಟಿಷರ ಆಗಮನದಿಂದ ಬದಲಾದ ಪರಿಸ್ಥಿತಿಯಲ್ಲಿ ಅದಕ್ಕೆ ನಮ್ಮ ದೇಶದ ರಾಜ ಮನೆತನದ ಹಾಗೂ ಆಗಿನ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳ ಒತ್ತಾಸೆ ದೊರಕಿತು. ಇದರಿಂದ ಒಂದು ರೀತಿಯ ಪಾಶ್ಚಾತ್ಯ ಪ್ರಭಾವವಿರುವ ಕಲೆಯ ಶಿಕ್ಷಣ ಬೆಳೆಯಲು ನೆರವಾಗಿದೆ.[೩]

**ಬೆಳಗಾವಿ ಜಿಲ್ಲೆಯ ಚಿತ್ರಕಲಾ ಶಿಕ್ಷಣ ಕೇಂದ್ರಗಳು :**

೧. ಉಮರ್ ಖಯಾಂ ಕಲಾಶಾಲೆ, ಬೆಳಗಾವಿ ಪ್ರಸ್ತುತದಲ್ಲಿ ಇಲ್ಲ.
೨. ಉಮಾ ಲಲಿತಕಲಾ ಮಹಾವಿದ್ಯಾಲಯ, ಬೆಳಗಾವಿ ಪ್ರಸ್ತುತದಲ್ಲಿ ಇಲ್ಲ.
೩. ಬೆನಾನ್ ಸ್ಮಿತ್ ಕಾಲೇಜ್ ಆಫ್ ಫೈನ್ ಆರ್ಟ್ಸ್, ಬೆಳಗಾವಿ (೧೯೭೩)
೪. ಶ್ರೀ ವಿವೇಕಾನಂದ ಕಲಾಮಂದಿರ, ರಾಯಬಾಗ (೧೯೮೪)
೫. ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯ, ಗೋಕಾಕ್ (೧೯೮೭)
೬. ಡಾ. ಅಂಬೇಡ್ಕರ ಶತಮಾನೋತ್ಸವ ಲಲಿತಕಲಾ ಮಹಾವಿದ್ಯಾಲಯ, ಸಂಕೇಶ್ವರ(೧೯೯೧)
೭. ಶ್ರೀ ಶಿವಯೋಗೇಶ್ವರ ಲಲಿತಕಲಾ ಮಹಾವಿದ್ಯಾಲಯ, ಬೈಲಹೊಂಗಲ್ಲ (೧೯೯೨)
೮. ಸಿದ್ಧಾರ್ಥ ಲಲಿತಕಲಾ ಮಹಾವಿದ್ಯಾಲಯ, ಗೋಕಾಕ್ (೧೯೯೩
೯. ನಾಗನೂರು ಸ್ವಾಮಿಗಳ ಪೂರ್ಣಿಮಾ ಕಲಾಶಾಲೆ ಪ್ರಸ್ತುತದಲ್ಲಿ ಇಲ್ಲ.
೧೦. ಕರ್ನಾಟಕ ಗಡಿನಾಡು ಶಿಕ್ಷಣ ಸಂಸ್ಥೆ ಚಿತ್ರಕಲಾ ಮಹಾವಿದ್ಯಾಲಯ, ನಿಪ್ಪಾಣಿ
೧೧. ನೂತನ ಲಲಿತಕಲಾ ಮಹಾವಿದ್ಯಾಲಯ, ನಿಪ್ಪಾಣಿ ಪ್ರಸ್ತುತದಲ್ಲಿ ಇಲ್ಲ.
೧೨. ಚನ್ನಮ್ಮ ಮಹಿಳಾ ಶಿಕ್ಷಣ ಸಂಸ್ಥೆಯ ಲಲಿತಕಲಾ ಮಹಾವಿದ್ಯಾಲಯ, ಚಿಕ್ಕೋಡಿ
೧೩. ಶ್ರೀ ಮುರುಘೇಂದ್ರ ಲಲಿತಕಲಾ ಮಂದಿರ, ಅಥಣಿ
೧೪. ಸವದತ್ತಿ ಚಿತ್ರಕಲಾ ಶಾಲೆ ಪ್ರಸ್ತುತದಲ್ಲಿ ಇಲ್ಲ.
೧೫. ಉತ್ತುಂಗ ಲಲಿತಕಲಾ ಮಹಾವಿದ್ಯಾಲಯ, ಕಾಗವಾಡ

**ಬೆಳಗಾವಿ ಜಿಲ್ಲೆಯ ಕಲಾಶಾಲೆಗಳು ಮತ್ತು ಚಟುವಟಿಕೆಗಳು :**

ಬೆಳಗಾವಿ ಜಿಲ್ಲೆಯು ಇತರೆ ಜಿಲ್ಲೆಯಲ್ಲಿರು ಕಲಾಶಾಲೆಯಂತೆಯೇ ಕಲಾ ಶಿಕ್ಷಣಕ್ಕೆ ನೀಡಿರುವ ಕೊಡುಗೆ ಅನನ್ಯವಾದುದು. ಬೆಳಗಾವಿ ಜಿಲ್ಲೆಯಲ್ಲಿ ಪ್ರಪ್ರಥಮವಾಗಿ ಅಸ್ತಿತ್ವಕ್ಕೆ ಬಂದ ಕಲಾಶಾಲೆ ಎಂದರೆ ಉಮರ್ ಖಯಾಂ ಕಲಾಶಾಲೆ. ಈ ಶಾಲೆಯು ಸುಮಾರು ೧೯೭೫ರ ಅವಧಿಯವರೆಗೆ ಚಿತ್ರಕಲಾ ಶಿಕ್ಷಣ ಕ್ಷೇತ್ರಕ್ಕೆ ಅಪಾರ ಸೇವೆಯನ್ನು ಸಲ್ಲಿಸಿತ್ತು. ೧೯೭೫ರ ನಂತರ ಈ ಕಲಾಶಾಲೆಯು ತನ್ನ ಅಸ್ಥಿತ್ವವನ್ನು ಕಳೆದುಕೊಂಡಿತು. ಇದರ ನಂತರ ಆರಂಭವಾದ ಕಲಾಶಾಲೆಗಳೆಂದರೆ ಬೆನಾನ್ ಸ್ಮಿತ್ ಕಲಾಶಾಲೆ ಮತ್ತು ಉಮಾ

೩. ಪಿ.ಆರ್. ತಿಪ್ಪೇಸ್ವಾಮಿ, (ಸಂ) ಚಿತ್ರಕಲಾ ಪ್ರಪಂಚ, ಎಂ.ಎಸ್. ನಂಜುಂಡರಾವ್, (ಲೇ) ಕರ್ನಾಟಕದಲ್ಲಿ ಕಲಾ ವಿದ್ಯಾಭ್ಯಾಸ, ಪುಟ, ೭೧೪



ಲಲಿತಕಲಾ ಮಹಾವಿದ್ಯಾಲಯ ಪ್ರಾರಂವಾದವು. ಆದರೆ ಉಮಾ ಲಲಿತಕಲಾ ಮಹಾವಿದ್ಯಾಲಯವು ೨೦೦೧ರ ವರೆಗೂ ತನ್ನ ಸೇವೆಯನ್ನು ಕಲಾ ಶಿಕ್ಷಣಕ್ಕೆ ನೀಡಿ, ಸೌಕರ್ಯಗಳ ಕೊರತೆಯಿಂದಾಗಿ ಈ ಶಾಲೆಯು ಕುಂಟಿತಗೊಂಡಿತು.

ಆದರೆ ಸರಕಾರದ ಅನುದಾನದ ಅಡಿಯಲ್ಲಿ ಬೆನಾನ್ ಸ್ಮಿತ್ ಕಲಾಶಾಲೆಯು ಇತ್ತೀಚಿನವರೆಗೂ ಕಲಾ ಶಿಕ್ಷಣ ನೀಡುತ್ತಾ ಬಂದಿದೆ.[೪] ಇದು ಕನ್ನಡ ವಿಶ್ವವಿದ್ಯಾಲಯದ ಅಡಿಯಲ್ಲಿ ಕಲಾ ಶಿಕ್ಷಣವನ್ನು ನೀಡುತ್ತಿದೆ. ಇದೊಂದೆ ಅಲ್ಲದೇ ಕರ್ನಾಟಕ ರಾಜ್ಯದಲ್ಲಿರುವಂತಹ ಎಲ್ಲ ಕಲಾ ಶಾಲೆಗಳು ಕನ್ನಡ ವಿಶ್ವವಿದ್ಯಾಲಯದ ಅಡಿಯಲ್ಲಿ ೨೦೦೩-೦೪ರಲ್ಲಿ ಸೇರ್ಪಡೆಯಾಗಿ ಕಲಾ ಶಿಕ್ಷಣವನ್ನು ಮುಂದುವರೆಸುತ್ತಿವೆ.

**ಬೆನಾನ್ ಸ್ಮಿತ್ ಕಾಲೇಜ್ ಆಫ್ ಫೈನ್ ಆರ್ಟ್ಸ್** (ಬೆಳಗಾವಿ) ಎಂಬ ಕಲಾ ಶಾಲೆಯು ಮೆಥೋಡಿಸ್ಟ್ ಚರ್ಚ್ ಇನ್ ಇಂಡಿಯಾ ಸಂಸ್ಥೆಯು ಅಡಿಯಲ್ಲಿ ೧೯೭೩ರಲ್ಲಿ ಪ್ರಾರಂಭವಾಯಿತು. ಆದರೆ ಈ ಕಲಾ ಶಾಲೆಯು ೧೯೮೬ ರಲ್ಲಿ ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ವತಿಯಿಂದ ಅನುದಾನ ಪಡೆದುಕೊಂಡಿತು. ಆದರೆ ಈ ಕಲಾ ಶಾಲೆಯು ಸಂಪೂರ್ಣವಾಗಿ ಅನುದಾನ ಪಡೆದು, ಎಲ್ಲ ರೀತಿಯ ಸೌಕರ್ಯಗಳನ್ನು ಹೊಂದಿದ್ದು ೧೯೯೧ ರಲ್ಲಿ. ಕರ್ನಾಟಕದ ಗಡಿಭಾಗದಲ್ಲಿರುವ ಬೆನಾನ್ ಸ್ಮಿತ್ ಕಾಲೇಜ್ ಆಫ್ ಫೈನ್ ಆರ್ಟ್ಸ್ ಈ ಭಾಗದ ಕಲಾ ಶಿಕ್ಷಣದ ಅವಶ್ಯಕತೆಗಳನ್ನು ಪೂರೈಸುವ ದೆಸೆಯಲ್ಲಿ ಆರಂಭವಾಗಿದೆ. ಕಲಾ ಬೆಳವಣಿಗೆಯಲ್ಲಿ ತನ್ನದೆಯಾದ ವಿಶಿಷ್ಟ ಸ್ಥಾನಮಾನ ಕಾಯ್ದುಕೊಂಡಿದೆ. ಕಲಾ ಶಿಕ್ಷಣ, ಚಿತ್ರಕಲಾ ಪ್ರದರ್ಶನ, ಕಾರ್ಯಗಾರ, ಶಿಬಿರಗಳು, ಪ್ರಾತ್ಯಕ್ಷಿಕೆಗಳು ಜೊತೆಗೆ ಇನ್ನುಳಿದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಕಲಾ ವಿದ್ಯಾರ್ಥಿಗಳು ಸದಾ ಚಟುವಟಿಕೆಗಳಿಂದ ಕೂಡಿರಲು ಸಹಾಯಕವಾಗಿದೆ. ಹೀಗೆ ಕಲಾ ಕ್ಷೇತ್ರದ ಬೆಳವಣಿಗೆಗೆ ಈ ಕಲಾ ಶಾಲೆಯ ಕೊಡುಗೆ ಅಪಾರವಾದುದು.

ಬೆಳಗಾವಿ ಜಿಲ್ಲೆಯಲ್ಲಿ ಅತ್ಯಂತ ಹೆಸರುವಾಸಿಯಾದಂತಹ ಕಲಾ ಶಾಲೆ, ಬೆನಾನ್ ಸ್ಮಿತ್ ಕಾಲೇಜ್ ಆಫ್ ಫೈನ್ ಆರ್ಟ್ಸ್ ಎಂದರೆ ತಪ್ಪಾಗಲಾರದು. ಈ ಕಲಾ ಶಾಲೆಯು ಪ್ರಾರಂಭವಾಗಲು ಮೆಥೋಡಿಸ್ಟ್ ಚರ್ಚ್ ಇನ್ ಇಂಡಿಯಾ ಸಂಸ್ಥೆಯು ಕಾರಣವೆನ್ನಬಹುದು. ಏಕೆಂದರೆ ಈ ಕಲಾ ಶಾಲೆಯು ಆರಂಭದಲ್ಲಿ ಸರ್ಕಾರದಿಂದ ಯಾವುದೇ ಸೌಲಭ್ಯವು ಇಲ್ಲದೇ ಇರುವಾಗ ಈ ಸಂಸ್ಥೆಯು ಸಾಕಷ್ಟು ಶ್ರಮವಹಿಸಿ ಕಲಾ ಶಾಲೆಯ ಅಭಿವೃದ್ಧಿಗೆ ಸಹಾಯ ಹಸ್ತ ನೀಡಿದೆ. ಈ ಸಂಸ್ಥೆಯು ಕಲೆಗೆ ಸಂಬಂಧಿಸಿದಂತ ಶಾಲೆಗಳು ಮಾತ್ರವಲ್ಲದೆ ಇನ್ನೂ ಹಲವಾರು ಶಾಲಾ ಕಾಲೇಜುಗಳನ್ನು ಸ್ಥಾಪಿಸಿದೆ. ಉದಾಹರಣೆಗೆ ಕನ್ನಡ ಮತ್ತು

೪. ಪಿ.ಆರ್. ತಿಪ್ಪೇಸ್ವಾಮಿ, (ಸಂ) ಚಿತ್ರಕಲಾ ಪ್ರಪಂಚ, ಎಂ.ಎಸ್. ನಂಜುಂಡರಾವ್, (ಲೇ) ಕರ್ನಾಟಕದಲ್ಲಿ ಕಲಾ ವಿದ್ಯಾಭ್ಯಾಸ, ಪುಟ, ೭೧೬



ಇಂಗ್ಲೀಷ ಮಾಧ್ಯಮದ ಪ್ರಾಥಮಿಕ, ಪ್ರೌಢಶಾಲೆಗಳು, ಸಿ.ಪಿ.ಈಡ್, ಬಿ.ಪಿ.ಈಡ್, ಪದವಿ ಪೂರ್ವ, ಪದವಿ ಕಲೇಜುಗಳು ಈ ಸಂಸ್ಥೆಯ ಅಡಿಯಲ್ಲಿ ಹುಟ್ಟಿಕೊಂಡಿವೆ.

ಈ ಕಲಾಶಾಲೆಯು ತನ್ನದೇ ಆದ ಸ್ವಂತ ಕಟ್ಟಡವನ್ನು ಹೊಂದಿದ್ದು, ಪ್ರಾಚಾರ್ಯರಾಗಿ ಅನಿಲ ಪ್ರಕಾಶ್, ಜಿ.ಕೆ. ಹಜರತಬಾಯ್, ಡಿ.ವಿ. ಕುಲಕರ್ಣಿ, ಪಿ.ಬಿ. ಸಾಬಣ್ಣನವರ, ಒಟ್ಟು ನಾಲ್ಕು ಜನ ಅಧ್ಯಾಪಕರು ಹಾಗೂ ಬೋಧಕೇತರ ಸಿಬ್ಬಂದಿಗಳಲ್ಲಿ ಶ್ರೀಮತಿ ಪರವಿನ್ ಕಚ್ಚೆ, ಎ.ಎಸ್. ಮೊಹರೆ, ಎಂ.ಆರ್. ಚಿನಗಿ. ಹೀಗೆ ಎಲ್ಲ ರೀತಿಯ ಸೌಲಭ್ಯಗಳನ್ನು ಪಡೆದುಕೊಂಡು, ಕಲಾ ಶಿಕ್ಷಣ ಕ್ಷೇತ್ರದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕಲಾ ಶಾಲೆಗಳಲ್ಲೊಂದಾಗಿದೆ.

ಮೊದಲು ಈ ಕಲಾ ಶಾಲೆಯಲ್ಲಿ ಡಿ.ಎಂ.ಸಿ. ತರಗತಿಗಳು ಮಾತ್ರ ನಡೆಯುತ್ತಿದ್ದವು. ನಂತರದಲ್ಲಿ ಚಿತ್ರಕಲಾ ಶಿಕ್ಷಣದ ತರಬೇತಿಗೆ ಮಾತ್ರ ಸೀಮಿತವಾಗದೆ ಮುಂದೆ ಪೇಂಟಿಂಗ್ ಡಿಪ್ಲೋಮಾ ತರಗತಿಗಳನ್ನು ಹಾಗೂ ಅನ್ವಯಿಕ ಕಲಾಮೂಲ ತರಗತಿಗಳನ್ನು ಕೂಡ ಪ್ರಾರಂಭಿಸಲಾಯಿತು. ಅಲ್ಲದೇ ಈ ಕಲಾ ಶಾಲೆಗೆ ಕನ್ನಡ ವಿಶ್ವವಿದ್ಯಾಲಯವು ೨೦೦೬-೦೭ನೆಯ ಸಾಲಿನಲ್ಲಿ ಬಿ.ವಿ.ಎ. ಪದವಿ ತರಗತಿಗೆ ಅನುಮತಿ ನಿಡಿತು. ಸುಮಾರು ಈ ಕಲಾಶಾಲೆಯಲ್ಲಿ ವರ್ಷಕ್ಕೆ ಶೇಕಡಾ ೭೫ರಷ್ಟು ವಿದ್ಯಾರ್ಥಿಗಳ ಹಾಜರಾತಿ ಇದೆ. ಈ ಕಲಾ ಶಾಲೆಗೆ ಉತ್ತಮ ಫಲಿತಾಂಶವನ್ನು ವಿದ್ಯಾರ್ಥಿಗಳು ನೀಡುತ್ತಾ ಬಂದಿದ್ದಾರೆ. ಈ ಶಾಲೆಗೆ ಹಾಗೂ ಈ ಸಂಸ್ಥೆಗೆ ಉತ್ತಮ ಫಲಿತಾಂಶ ದೊರಕಲು ಕಾರಣ ಇಲ್ಲಿರುವಂತ ಕಲಾ ಶಿಕ್ಷಣದ ಸೌಲಭ್ಯಗಳೇ ಕಾರಣವೆನ್ನಬಹುದು.

**ಕಲಾ ಚಟುವಟಿಕೆಗಳು** : ೧೯೭೩ರಲ್ಲಿ ಪ್ರಾರಂಭವಾದ ಈ ಕಲಾ ಸಂಸ್ಥೆಯು ಅನೇಕ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುತ್ತಾ ಬಂದಿದೆ. ಅವುಗಳಲ್ಲಿ ವಾರ್ಷಿಕೋತ್ಸವ ಕಲಾ ಪ್ರದರ್ಶನ, ರಂಗೋಲಿ ಸ್ಪರ್ಧೆ, ಚಿತ್ರಕಲಾ ಸ್ಪರ್ಧೆ ಹೀಗೆ ವೈವಿಧ್ಯಮಯವಾದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪ್ರಾರಂಭಿಕ ಹಂತದಲ್ಲಿ ಹಮ್ಮಿಕೊಳ್ಳುತ್ತಾ ಬಂದಿರುತ್ತದೆ. ಹಾಗೂ ವಿದ್ಯಾರ್ಥಿಗಳಿಗೆ ಹಿರಿಯ ಕಲಾವಿದರಾದ, ವಿಜಯ ಸಿಂಧೂರ, ಜೆ.ಎಸ್. ಖಂಡೇರಾವ್, ವಿ.ಜಿ. ಅಂದಾನಿ, ಎಂ.ಬಿ. ಲೋಹಾರ, ಚಂದ್ರನಾಥ ಆಚಾರ್ಯ, ಪಾಲ್ ಕೊಳಿ (ಬಾಂಬೆ), ಎಸ್.ಕೆ. ಸಾಳ್ವೆ (ಬಾಂಬೆ), ಬಿ.ಎಲ್. ಜಾನಿ, ರಾಮಚಂದ್ರನ್, ಶ್ರೀ ಎನ್.ಎಂ. ಖರ್ಡೆ, ಎಂ.ಬಿ. ಪಾಟೀಲ, ಡಾ. ಎಸ್.ಸಿ. ಪಾಟೀಲ, ಹೀಗೆ ಇನ್ನೂ ಮುಂತಾದ ಹಿರಿಯ ಕಲಾವಿದರಿಂದ ಶಿಲ್ಪ ಮತ್ತು ಚಿತ್ರ ಕಾರ್ಯಾಗಾರ, ಕಲಾ ಪ್ರಾತ್ಯಕ್ಷಿಕೆ, ಮತ್ತು ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಾರೆ.

ಇಂತಹ ಕಾರ್ಯಕ್ರಮಗಳಲ್ಲದೇ ಈ ಕಲಾ ಶಾಲೆಯು ವರ್ಷದಲ್ಲಿ ೪ ಬಾರಿ ಹಂಪಿ, ಬಾದಾಮಿ, ಬಿಜಾಪುರು, ಪಟ್ಟದಕಲ್ಲು, ಚಿತ್ರದುರ್ಗ, ಬಾಂಬೆ, ಕಲಕತ್ತಾ, ಬೆಂಗಳೂರು ಈ ಸ್ಥಳಗಳಲ್ಲಿ ನಿಸರ್ಗ ಚಿತ್ರಕಲಾ ಶಿಬಿರಗಳನ್ನು ಮತ್ತು ಪ್ರದರ್ಶನಗಳನ್ನು



ಹಮ್ಮಿಕೊಳ್ಳಲಾಗುವುದು. ಇಷ್ಟೇ ಅಲ್ಲದೆ ಈ ಕಲಾಶಾಲೆಯು ವಿದ್ಯಾರ್ಥಿಗಳ ಕಲಾಕೃತಿಗಳು ರಾಜ್ಯ, ರಾಷ್ಟ್ರಮಟ್ಟದ ಕಲಾ ಪ್ರದರ್ಶನಕ್ಕೆ ಆಯ್ಕೆಯಾಗಿ, ಪ್ರಶಸ್ತಿಗಳನ್ನು ಪಡೆದು ಈ ಕಲಾಶಾಲೆಯ ಕೀರ್ತಿಯನ್ನು ಹೆಚ್ಚಿಸಿದೆ.

ಒಟ್ಟಾರೆ ಈ ಕಲಾಶಾಲೆಯು ಇಂತಹ ಕಾರ್ಯಕ್ರಮಗಳನ್ನು ಏರ್ಪಡಿಸುವ ಮೂಲಕ ವಿದ್ಯಾರ್ಥಿಗಳನ್ನು ಸದಾ ಚಟುವಟಿಕೆಯಿಂದ ಕೂಡಿರಲು ಅವಕಾಶ ಮಾಡಿಕೊಟ್ಟಿದೆ. ಇದರಿಂದ ವಿದ್ಯಾರ್ಥಿಗಳು ಪೂರ್ಣ ಕಲಾವಿದರನಾಗುವ ಜೊತೆಗೆ ಈ ಕಲಾ ಶಾಲೆಯ ಬೆಳವಣಿಗೆಗಾಗಿ ಪ್ರಯತ್ನಿಸುತ್ತಿದ್ದಾರೆ. ಈ ದಿಸೆಯಲ್ಲಿ ಉಪನ್ಯಾಸಕರ ಮತ್ತು ಸಂಸ್ಥೆಯ ಪಾತ್ರ ಮಹತ್ವದ್ದಾಗಿದೆ.

**ಶ್ರೀ ವಿವೇಕಾನಂದ ಕಲಾಮಂದಿರವು** (ರಾಯಬಾಗ) ೧೯೮೮ರಲ್ಲಿ ಪ್ರಾರಂಭವಾಯಿತು. ಆದರೆ ಕಲಾಮಂದಿರವು ೦೧-೦೩-೧೯೯೧ರಲ್ಲಿ ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ವತಿಯಿಂದ ಅನುದಾನ ಪಡೆದುಕೊಂಡಿತು. ಕರ್ನಾಟಕದ ಗಡಿಭಾಗದಲ್ಲಿರುವ ಶ್ರೀ ವಿವೇಕಾನಂದ ಕಲಾಮಂದಿರವು ಈ ಭಾಗದ ಕಲಾ ಶಿಕ್ಷಣದ ಅವಶ್ಯಕತೆಗಳನ್ನು ಪೂರೈಸುವ ದೆಸೆಯಲ್ಲಿ ಆರಂಭವಾಗಿದೆ. ಕಲಾ ಬೆಳವಣಿಗೆಯಲ್ಲಿ ತನ್ನದೆಯಾದ ವಿಶಿಷ್ಟ ಸ್ಥಾನಮಾನ ಕಾಯ್ದುಕೊಂಡಿದೆ. ಕಲಾ ಶಿಕ್ಷಣ, ಚಿತ್ರಕಲಾ ಪ್ರದರ್ಶನ, ಕಾರ್ಯಗಾರ, ಶಿಬಿರಗಳು, ಪ್ರಾತ್ಯಕ್ಷಿಕೆಗಳು ಜೊತೆಗೆ ಇನ್ನುಳಿದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಸಾಂಸ್ಕೃತಿಕ ಪ್ರತಿನಿಧಿಯಂತೆ ಈ ಭಾಗದ ಕಲಾ ಚಟುವಟಿಕೆಗಳಿಗೆ ಸಹಾಯಕವಾಗಿದೆ. ಇದರಿಂದ ಕಲಾ ಕ್ಷೇತ್ರದ ಬೆಳವಣಿಗೆಗೆ ತನ್ನ ಕೊಡುಗೆಯನ್ನು ನೀಡುತ್ತಿದೆ.

ಈ ಕಲಾ ಶಾಲೆಯನ್ನು ಪ್ರಾರಂಭವಾಗಲು ಕಾರಣರಾದವರೆಂದರೆ ಶ್ರೀ ವಿವೇಕರಾವ್ ಪಾಟೀಲ. ಹಾಗೂ ಎಚ್.ಬಿ. ಹೊಸಮನಿ ಚಿತ್ರಕಲಾ ಶಿಕ್ಷಕರು, ಇವರ ಮಾರ್ಗದರ್ಶನದಂತೆ ರಾಯಬಾಗದಲ್ಲಿ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯದ ಒಂದು ಕೋಣೆಯಲ್ಲಿ ಪ್ರಾರಂಭವಾಯಿತು. ಎಚ್.ಬಿ. ಹೊಸಮನಿಯವರ ಸತತ ಪರಿಶ್ರಮದಿಂದ ಈ ಕಲಾಮಂದಿರವು ಬೋಧಕ ಸಿಬ್ಬಂದಿ ಕೊರತೆಯಿಂದ ಹಾಗೂ ಪಾಠೋಪಕರಣ, ಪಿಠೋಪಕರಣಗಳ, ಕೊಠಡಿಗಳ ಅವಶ್ಯಕತೆಗಳ ಕೊರತೆಯ ನಡುವೆಯೂ ಸಹ ಸಾಗಿಸಿಕೊಂಡು ಬಂದರು.

ವಿವೇಕಾನಂದ ಕಲಾಮಂದಿರವನ್ನು ಸ್ಥಾಪಿಸಲು ಮುಖ್ಯ ಉದ್ದೇಶವೆನೆಂದರೆ, ಬೆಳಗಾವಿ, ಧಾರವಾಡ, ಗದಗ, ಬೆಂಗಳೂರು, ಮೈಸೂರು, ಗುಲ್ಬರ್ಗಾ ಮುಂತಾದ ನಗರಗಳಲ್ಲಿ ಕಲಾಶಾಲೆಗಳಿವೆ. ಆದರೆ ಈ ನಗರಗಳಲ್ಲಿರುವ ಕಲಾಶಾಲೆಗಳಿಗೆ ಹೋಗಿ ಕಲಾ ಶಿಕ್ಷಣ ಪಡೆಯುವುದು ಈ ಭಾಗದ ವಿದ್ಯಾರ್ಥಿಗಳಿಗೆ ಕಷ್ಟ ಸಾಧ್ಯವಾಯಿತು. ಸಕಲ ಸೌಲತ್ತುಗಳಿಂದ ಕೂಡಿದ ಚಿತ್ರಕಲಾ ಅಧ್ಯಯನ ಕೇಂದ್ರಗಳು ಈ ಪ್ರಾಂತ್ಯದಲ್ಲಿರಲಿಲ್ಲ. ೨೮-೩೦ ವರ್ಷಗಳ ಹಿಂದೆ ಚಿತ್ರಕಲೆಯ ಅಧ್ಯಯನಕ್ಕಾಗಿ ಬೆಂಗಳೂರು, ಹುಬ್ಬಳ್ಳಿ-ಧಾರವಾಡ, ಗದಗ, ಬೆಳಗಾವಿ ಹೋಗಬೇಕಾದ ಪರಿಸ್ಥಿತಿ ಎದುರಾಗಿತ್ತು. ಹೀಗಾಗಿ ಕರ್ನಾಟಕ ಮಹಾರಾಷ್ಟ್ರ ಗಡಿಯಲ್ಲಿರುವ



ಈ ಪ್ರದೇಶದ ಜನರಿಗೆ ಸಾರಿಗೆ ಸಂಪರ್ಕ ಕೂಡ ತೀರ ಕಡಿಮೆ. ಅಲ್ಲದೆ ಈ ಪ್ರದೇಶ ಕರ್ನಾಟಕದಲ್ಲಿಯೇ ತೀರ ಹಿಂದುಳಿದ ಪ್ರದೇಶವಾಗಿತ್ತು. ಚಿತ್ರಕಲೆಯ ಆಸಕ್ತರಿಗೆ ಇಲ್ಲಿ ಕಲಾ ಶಿಕ್ಷಣ ದೊರಕುವುದು ಸುಲಭವಿರಲಿಲ್ಲ. ರಾಯಬಾಗದಲ್ಲಿ ಹೈಸ್ಕೂಲ್, ಜೂನಿಯರ್ ಕಾಲೇಜು, ಪದವಿ ಕಾಲೇಜು, ಐ.ಟಿ.ಐ, ಡಿಪ್ಲೋಮಾ ಶಿಕ್ಷಣದ ಸೌಲಭ್ಯವಿತ್ತು. ಆದರೆ ಚಿತ್ರಕಲೆಯ ಅಧ್ಯಯನದ ಸೌಲಭ್ಯವಿರಲಿಲ್ಲ. ಹಾಗಾಗಿ ಚಿತ್ರಕಲಾ ಶಿಕ್ಷಣದ ಆಸಕ್ತರಿಗೆ, ಚಿತ್ರಕಲಾ ಬೆಳವಣಿಗೆಗೋಸ್ಕರ ಈ ಸಂಸ್ಥೆಯನ್ನು ಪ್ರಾರಂಭಿಸಿದರು. ಈ ಕಲಾ ಸಂಸ್ಥೆಯನ್ನು ಪ್ರಾರಂಭಿಸಿರುವ ಮತ್ತೊಂದು ಕಾರಣವೆನೆಂದರೆ ಚಿತ್ರಕಲೆಯಲ್ಲಿ ಉನ್ನತ ಮಟ್ಟದ ಶಿಕ್ಷಣ ದೊರೆಯಬೇಕು. ಹಾಗೂ ಚಿತ್ರಕಲಾ ಶಿಕ್ಷಣದಿಂದ ಗ್ರಾಮೀಣ ಭಾಗದ ಜನರು ವಂಚಿತರಾಗಬಾರದೆಂಬ ಉದ್ದೇಶದಿಂದ ಈ ಕಲಾಶಾಲೆಯನ್ನು ತೆರೆಯಲಾಯಿತು.

ಈ ಕಲಾಶಾಲೆಯಲ್ಲಿ ಮೊದಲು ಡಿ.ಎಂ.ಸಿ. ತರಗತಿಗಳು ಮಾತ್ರ ನಡೆಯುತ್ತಿದ್ದವು. ನಂತರದಲ್ಲಿ ಚಿತ್ರಕಲಾ ಶಿಕ್ಷಣದ ತರಬೇತಿಗೆ ಮಾತ್ರ ಸೀಮಿತವಾಗದೆ ಮುಂದೆ ಪೇಂಟಿಂಗ್ ಡಿಪ್ಲೋಮಾ ತರಗತಿಗಳನ್ನು ಕೂಡ ಪ್ರಾರಂಭಿಸಲಾಯಿತು. ಅಲ್ಲದೇ ಈ ಕಲಾಮಂದಿರಕ್ಕೆ ಕನ್ನಡ ವಿಶ್ವವಿದ್ಯಾಲಯವು ೨೦೦೭-೦೮ನೆಯ ಸಾಲಿನಲ್ಲಿ ಎ.ಟಿ.ಸಿ, ತರಬೇತಿಗೆ, ಬಿ.ವಿ.ಎ. ಪದವಿ ತರಗತಿಗೆ ಅನುಮತಿ ನಿಡಿತು. ಹಾಗೂ ಈ ಕಲಾಮಂದಿರವು ವ್ಯವಸ್ಥಿತವಾದ ಕಟ್ಟಡ, ಪೀಠೋಪಕರಣಗಳು, ಗ್ರಂಥಾಲಯ, ಪಾಠೋಪಕರಣಗಳು, ಉದ್ಯಾನವನ, ಕ್ರೀಡಾ ಮೈದಾನ ಮುಂತಾದ ಸೌಲಭ್ಯಗಳನ್ನು ಹೊಂದಿದೆ. ವಿವೇಕಾನಂದ ಕಲಾಮಂದಿರದಲ್ಲಿ ಒಟ್ಟು ೭ ಜನ ಹೆಸರಾಂತ ಅನುಭವಿ ಕಲಾ ಬೋಧಕ ಮತ್ತು ೨ ಜನ ಬೋಧಕೇತರ ಸಿಬ್ಬಂದಿಗಳಿರುವರು.

೧. ವ್ಹಿ.ಡಿ. ಸಾಲಿ. ಪ್ರಾಚಾರ್ಯರು, ಶಿಲ್ಪಕಲೆ ಕಲಾತತ್ವ ಉಪನ್ಯಾಸಕರು ೨. ಪಿ.ಐ. ಪತ್ತಾರ. ಕಲಾ ಇತಿಹಾಸ, ಪ್ರಾಯೋಗಿಕ ಉಪನ್ಯಾಸಕರು ೩. ಬಿ.ವ್ಹಿ. ನಿಡೋಣಿ. ಶಿಲ್ಪಕಲೆ, ಭಿತ್ತಿಚಿತ್ರಕಲಾ ಉಪನ್ಯಾಸಕರು ೪. ಯು.ಆರ್. ವಾಘಧಾರೆ. ವಿನ್ಯಾಸ ಮೂಲ ತತ್ವಗಳು, ಪ್ರಾಯೋಗಿಕ ಉಪನ್ಯಾಸಕರು ೫. ಎ.ಎಸ್. ಕರಿಹೋಳಿ. ಪ್ರಾಯೋಗಿಕ ಉಪನ್ಯಾಸಕರು ೬. ಪಿ.ಬಿ. ಗವಾನಿ. ಪ್ರಾಯೋಗಿಕ ಉಪನ್ಯಾಸಕರು ೭. ಐ.ಜಿ. ನದಾಫ. ವಿನ್ಯಾಸ ಮೂಲ ತತ್ವಗಳು, ಪ್ರಾಯೋಗಿಕ ಉಪನ್ಯಾಸಕರು ೮. ಎಸ್.ಜಿ. ನದಾಫ. ಗುಮಾಸ್ತರು ೯. ಎನ್. ಎಸ್. ಬಣಪ್ಪನವರ. ಸಿಪಾಯಿ ಈ ಸಿಬ್ಬಂದಿಯ ಹೊರತಾಗಿಯೂ ಪ್ರಥಮ/ದ್ವಿತಿಯ ವರ್ಷದ ಕಲಾ ಮೂಲ ತರಗತಿಗಳಿಗೆ ಭಾಷಾ ವಿಷಯದ ಕುರಿತು ಕನ್ನಡ, ಇಂಗ್ಲೀಷ, ಹಿಂದಿ ಅರೆಕಾಲಿಕ ಅಥವಾ ಅತಿಥಿ ಉಪನ್ಯಸಕರನ್ನು ನೇಮಕ ಮಾಡಿಕೊಳ್ಳಲಾಗಿದೆ. ಅಲ್ಲದೇ ಈ ಕಲಾಶಾಲೆಯಲ್ಲಿ ಪ್ರಾರಂಭದ ದಿನಗಳಲ್ಲಿ ವಿದ್ಯಾರ್ಥಿಗಳ ಕೊರತೆಯನ್ನು ಅನುಭವಿಸುತ್ತಿತ್ತು. ಆದರೆ ಪ್ರಸ್ತುತದಲ್ಲಿ ವಿದ್ಯಾರ್ಥಿಗಳ ಕೊರತೆಯನ್ನು ನೀಗಿಸಿಕೊಳ್ಳುವಲ್ಲಿ ಸಂಪೂರ್ಣವಾಗಿ



ಯಶಸ್ವಿಯಾಗಿದೆ. ಅದರಿಂದಾಗಿ ಈ ಭಾಗದಲ್ಲಿಯೇ ಒಂದು ವಿಶಿಷ್ಟ ಕಲಾಮಂದಿರ ಇದಾಗಿದೆ. ಸುಮಾರು ಈ ಕಲಾಶಾಲೆಯಲ್ಲಿ ವರ್ಷಕ್ಕೆ ೪೫ ರಿಂದ ೫೫ ವಿದ್ಯಾರ್ಥಿಗಳು ಕಲಾ ಶಿಕ್ಷಕರ ತರಬೇತಿಯನ್ನು ಪಡೆದು ಹೊರಬರುತ್ತಾರೆ.

**ಕಲಾ ಚಟುವಟಿಕೆಗಳು** : ೧೯೮೪ರಲ್ಲಿ ಪ್ರಾರಂಭವಾದ ಶ್ರೀ ವಿವೇಕಾನಂದ ಕಲಾಮಂದಿರದಲ್ಲಿ ಅನೇಕ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುತ್ತಾ ಬಂದಿದೆ. ಅವುಗಳಲ್ಲಿ ವಾರ್ಷಿಕೋತ್ಸವ ಕಲಾ ಪ್ರದರ್ಶನ, ಗಾಯನ ಸ್ಪರ್ಧೆ, ರಂಗೋಲಿ ಸ್ಪರ್ಧೆ, ಚಿತ್ರಕಲಾ ಸ್ಪರ್ಧೆ ಹೀಗೆ ವೈವಿಧ್ಯಮಯವಾದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪ್ರಾರಂಭಿಕ ಹಂತದಲ್ಲಿ ಹಮ್ಮಿಕೊಳ್ಳುತ್ತಾ ಬಂದಿರುತ್ತದೆ. ಹಾಗೂ ವಿದ್ಯಾರ್ಥಿಗಳಿಗೆ ಹಿರಿಯ ಕಲಾವಿದರು, ವಿಜಯ ಸಿಂಧೂರ, ಶ್ರೀ ಎನ್.ಎಂ. ಖರ್ಡೆ, ಎಂ.ಬಿ. ಪಾಟೀಲ, ಧನಂಜಯ ಶಿಲ್ಪಿ, ಆರ್. ಎಂ. ಹಡಪದ, ಎಂ.ಆರ್. ಬಾಳಿಕಾಯಿ, ಡಾ. ಎಸ್.ಸಿ. ಪಾಟೀಲ, ಹುಬ್ಬಳ್ಳಿಕರ, ವ್ಹಿ.ಬಿ. ಹಿರೇಗೌಡರ್, ಹಾಲಬಾವಿ ಇನ್ನೂ ಮುಂತಾದ ಕಲಾವಿದರಿಂದ ಶಿಲ್ಪ ಮತ್ತು ಚಿತ್ರ ಕಾರ್ಯಾಗಾರ, ಕಲಾ ಪ್ರಾತ್ಯಕ್ಷಿಕೆ, ಮತ್ತು ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿತ್ತು.

ಇಂತಹ ಕಾರ್ಯಕ್ರಮಗಳನ್ನು ನಾಲ್ಕು ಗೋಡೆಗಳ ಮಧ್ಯೆ ಅಲ್ಲದೇ ನಿಸರ್ಗದ ಮಡಿಲ್ಲಿರುವ ಆವರಣದಲ್ಲಿಯೂ ಹಮ್ಮಿಕೊಳ್ಳಲಾಗುತ್ತಿತ್ತು. ಹಾಗೂ ಈ ಕಲಾಮಂದಿರವು ವರ್ಷದಲ್ಲಿ ೪ ಬಾರಿ ಹಂಪಿ, ಬಾದಾಮಿ, ಬಿಜಾಪುರು ಇಂತಹ ಐತಿಹಾಸಿಕ ಸ್ಥಳಗಳಲ್ಲಿ ನಿಸರ್ಗ ಚಿತ್ರಕಲಾ ಶಿಬಿರವನ್ನು ಹಮ್ಮಿಕೊಳ್ಳಲಾಗುವುದು. ಇಷ್ಟೇ ಅಲ್ಲದೆ ಈ ಕಲಾಶಾಲೆಯು ವಿದ್ಯಾರ್ಥಿಗಳಿಗೆ ರಾಜ್ಯ ಮತ್ತು ರಾಷ್ಟ್ರಮಟ್ಟಗಳಲ್ಲಿ ಕಲಾ ಪ್ರದರ್ಶನಕ್ಕೆ ಅನುವು ಮಾಡಿಕೊಟ್ಟಿದೆ. ಇದರಿಂದಾಗಿ ಈ ಕಲಾಮಂದಿರದ ವಿದ್ಯಾರ್ಥಿಗಳು ರಾಜ್ಯ, ರಾಷ್ಟ್ರಮಟ್ಟದ ಕಲಾ ಪ್ರದರ್ಶನಕ್ಕೆ ಆಯ್ಕೆಯಾಗಿ, ಪ್ರಶಸ್ತಿಗಳನ್ನು ಪಡೆದು ಈ ಕಲಾಶಾಲೆಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

ಒಟ್ಟಾರೆ ಈ ಕಲಾಶಾಲೆಯು ಇಂತಹ ಪ್ರಯೋಜನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ವಿದ್ಯಾರ್ಥಿಗಳನ್ನು ಪೂರ್ಣ ಕಲಾವಿದರನ್ನಾಗಿ ಮಾಡಲು ಶ್ರಮಿಸುತ್ತಿದೆ. ಈ ದಿಸೆಯಲ್ಲಿ ಉಪನ್ಯಾಸಕರ ಪಾತ್ರ ಮಹತ್ವದ್ದಾಗಿದೆ. ಈ ಕಲಾಮಂದಿರದ ಸಿಬ್ಬಂದಿಯವರು ರಾಯಬಾಗ ಪ್ರದೇಶದ ಜನರ ಕಲೆಯ ಬಗ್ಗೆ ಇರುವ ಆಸಕ್ತಿ, ಉತ್ಸಾಹ ಕಂಡು ಇಲ್ಲಿ ಲಲಿತಕಲಾ ಸಂಘವನ್ನು ಹುಟ್ಟುಹಾಕಿದ್ದಾರೆ. ಈ ಕಲಾಶಾಲೆಯ ಹೆಸರುವಾಸಿಯಾಗಲು ವಿದ್ಯಾರ್ಥಿಗಳು ಮಾತ್ರವಲ್ಲದೆ ಇಲ್ಲಿಯ ಉತ್ತಮ ಶಿಕ್ಷಕರು ಕೂಡ ಕಾರಣರೆನ್ನಬಹುದು.

**ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯ**ವು ಗೋಕಾಕ್‌ನಲ್ಲಿ ೧೯೮೭ರಲ್ಲಿ ನ್ಯಾಶನಲ್ ಎಜ್ಯುಕೇಶನ್ ಸೊಸೈಟಿ ಆಶ್ರಯದಲ್ಲಿ ಅಸ್ತಿತ್ವಕ್ಕೆ ಬಂದಿತು. ಆದರೆ ಈ ಮಹಾವಿದ್ಯಾಲಯವು ಸರ್ಕಾರದ ಅನುದಾನ ಪಡೆದುಕೊಂಡಿದ್ದು ೧೯೯೨ರಲ್ಲಿ. ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯದಲ್ಲಿ ಉತ್ತಮ ಕಲಾವಿದರೆಂದು ಹೆಸರು ಗಳಸಿರುವ ಕಲಾಶಿಕ್ಷಕರನ್ನು



ಯಶಸ್ವಿಯಾಗಿದೆ. ಆದರಿಂದಾಗಿ ಈ ಭಾಗದಲ್ಲಿಯೇ ಒಂದು ವಿಶಿಷ್ಟ ಕಲಾಮಂದಿರ ಇದಾಗಿದೆ. ಸುಮಾರು ಈ ಕಲಾಶಾಲೆಯಲ್ಲಿ ವರ್ಷಕ್ಕೆ ೪೫ ರಿಂದ ೫೫ ವಿದ್ಯಾರ್ಥಿಗಳು ಕಲಾ ಶಿಕ್ಷಕರ ತರಬೇತಿಯನ್ನು ಪಡೆದು ಹೊರಬರುತ್ತಾರೆ.

**ಕಲಾ ಚಟುವಟಿಕೆಗಳು** : ೧೯೮೪ರಲ್ಲಿ ಪ್ರಾರಂಭವಾದ ಶ್ರೀ ವಿವೇಕಾನಂದ ಕಲಾಮಂದಿರದಲ್ಲಿ ಅನೇಕ ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುತ್ತಾ ಬಂದಿದೆ. ಅವುಗಳಲ್ಲಿ ವಾರ್ಷಿಕೋತ್ಸವ ಕಲಾ ಪ್ರದರ್ಶನ, ಗಾಯನ ಸ್ಪರ್ಧೆ, ರಂಗೋಲಿ ಸ್ಪರ್ಧೆ, ಚಿತ್ರಕಲಾ ಸ್ಪರ್ಧೆ ಹೀಗೆ ವೈವಿಧ್ಯಮಯವಾದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಪ್ರಾರಂಭಿಕ ಹಂತದಲ್ಲಿ ಹಮ್ಮಿಕೊಳ್ಳುತ್ತಾ ಬಂದಿರುತ್ತದೆ. ಹಾಗೂ ವಿದ್ಯಾರ್ಥಿಗಳಿಗೆ ಹಿರಿಯ ಕಲಾವಿದರು, ವಿಜಯ ಸಿಂಧೂರ, ಶ್ರೀ ಎನ್.ಎಂ. ಖರ್ಡೆ, ಎಂ.ಬಿ. ಪಾಟೀಲ, ಧನಂಜಯ ಶಿಲ್ಪಿ, ಆರ್. ಎಂ. ಹಡಪದ, ಎಂ.ಆರ್. ಬಾಳಿಕಾಯಿ, ಡಾ. ಎಸ್.ಸಿ. ಪಾಟೀಲ, ಹುಬ್ಬಳ್ಳಿಕರ, ವ್ಹಿ.ಬಿ. ಹಿರೇಗೌಡರ್, ಹಾಲಬಾವಿ ಇನ್ನೂ ಮುಂತಾದ ಕಲಾವಿದರಿಂದ ಶಿಲ್ಪ ಮತ್ತು ಚಿತ್ರ ಕಾರ್ಯಾಗಾರ, ಕಲಾ ಪ್ರಾತ್ಯಕ್ಷಿಕೆ, ಮತ್ತು ಉಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಲಾಗುತ್ತಿತ್ತು.

ಇಂತಹ ಕಾರ್ಯಕ್ರಮಗಳನ್ನು ನಾಲ್ಕು ಗೋಡೆಗಳ ಮಧ್ಯೆ ಅಲ್ಲದೇ ನಿಸರ್ಗದ ಮಡಿಲ್ಲಿರುವ ಆವರಣದಲ್ಲಿಯೂ ಹಮ್ಮಿಕೊಳ್ಳಲಾಗುತ್ತಿತ್ತು. ಹಾಗೂ ಈ ಕಲಾಮಂದಿರವು ವರ್ಷದಲ್ಲಿ ೪ ಬಾರಿ ಹಂಪಿ, ಬಾದಾಮಿ, ಬಿಜಾಪುರು ಇಂತಹ ಐತಿಹಾಸಿಕ ಸ್ಥಳಗಳಲ್ಲಿ ನಿಸರ್ಗ ಚಿತ್ರಕಲಾ ಶಿಬಿರವನ್ನು ಹಮ್ಮಿಕೊಳ್ಳಲಾಗುವುದು. ಇಷ್ಟೇ ಅಲ್ಲದೆ ಈ ಕಲಾಶಾಲೆಯು ವಿದ್ಯಾರ್ಥಿಗಳಿಗೆ ರಾಜ್ಯ ಮತ್ತು ರಾಷ್ಟ್ರಮಟ್ಟಗಳಲ್ಲಿ ಕಲಾ ಪ್ರದರ್ಶನಕ್ಕೆ ಅನುವು ಮಾಡಿಕೊಟ್ಟಿದೆ. ಇದರಿಂದಾಗಿ ಈ ಕಲಾಮಂದಿರದ ವಿದ್ಯಾರ್ಥಿಗಳು ರಾಜ್ಯ, ರಾಷ್ಟ್ರಮಟ್ಟದ ಕಲಾ ಪ್ರದರ್ಶನಕ್ಕೆ ಆಯ್ಕೆಯಾಗಿ, ಪ್ರಶಸ್ತಿಗಳನ್ನು ಪಡೆದು ಈ ಕಲಾಶಾಲೆಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

ಒಟ್ಟಾರೆ ಈ ಕಲಾಶಾಲೆಯು ಇಂತಹ ಪ್ರಯೋಜನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ವಿದ್ಯಾರ್ಥಿಗಳನ್ನು ಪೂರ್ಣ ಕಲಾವಿದರನ್ನಾಗಿ ಮಾಡಲು ಶ್ರಮಿಸುತ್ತಿದೆ. ಈ ದಿಸೆಯಲ್ಲಿ ಉಪನ್ಯಾಸಕರ ಪಾತ್ರ ಮಹತ್ವದ್ದಾಗಿದೆ. ಈ ಕಲಾಮಂದಿರದ ಸಿಬ್ಬಂದಿಯವರು ರಾಯಬಾಗ ಪ್ರದೇಶದ ಜನರ ಕಲೆಯ ಬಗ್ಗೆ ಇರುವ ಆಸಕ್ತಿ, ಉತ್ಸಾಹ ಕಂಡು ಇಲ್ಲಿ ಲಲಿತಕಲಾ ಸಂಘವನ್ನು ಹುಟ್ಟುಹಾಕಿದ್ದಾರೆ. ಈ ಕಲಾಶಾಲೆಯ ಹೆಸರುವಾಸಿಯಾಗಲು ವಿದ್ಯಾರ್ಥಿಗಳು ಮಾತ್ರವಲ್ಲದೆ ಇಲ್ಲಿಯ ಉತ್ತಮ ಶಿಕ್ಷಕರು ಕೂಡ ಕಾರಣರೆನ್ನಬಹುದು.

**ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯವು** ಗೋಕಾಕ್‌ನಲ್ಲಿ ೧೯೮೭ರಲ್ಲಿ ನ್ಯಾಶನಲ್ ಎಜ್ಯುಕೇಶನ್ ಸೊಸೈಟಿ ಆಶ್ರಯದಲ್ಲಿ ಅಸ್ತಿತ್ವಕ್ಕೆ ಬಂದಿತು. ಆದರೆ ಈ ಮಹಾವಿದ್ಯಾಲಯವು ಸರ್ಕಾರದ ಅನುದಾನ ಪಡೆದುಕೊಂಡಿದ್ದು ೧೯೯೨ರಲ್ಲಿ. ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯದಲ್ಲಿ ಉತ್ತಮ ಕಲಾವಿದರೆಂದು ಹೆಸರು ಗಳಿಸಿರುವ ಕಲಾಶಿಕ್ಷಕರನ್ನು

ಹೊಂದಿದೆ. ಈ ಶಿಕ್ಷಕರು ರಾಜ್ಯ ಮತ್ತು ರಾಷ್ಟ್ರಮಟ್ಟದ ಚಿತ್ರಕಲಾ ಪ್ರದರ್ಶನದಲ್ಲಿ ಭಾಗವಹಿಸಿ, ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಅವರುಗಳೆಂದರೆ ೧. ಪ್ರಾಚಾರ್ಯರಾಗಿ ಎಸ್.ಎನ್. ಮುತ್ನಾಳ ೨. ಎಸ್.ವಿ. ಹಾದಿಮನಿ ೩. ವಿ.ಕೆ ಪತ್ತಾರ ೪. ಎಸ್.ವಾಯ್. ಬಂಗ್ಗೆನ್ನವರ ೫. ವಿ.ಸಿ. ಬೀಳಗಿ ೬. ಪಿ.ವ್ಹಿ. ಬಡಿಗೇರ ೭. ಎ.ಕೆ. ಬಡಿಗೇರ ೮. ಶ್ರೀಮತಿ ಎ.ಎಸ್. ಸುತಾರ, ಹಾಗೂ ಬೋಧಕೇತರ ಸಿಬ್ಬಂದಿ ವರ್ಗವಿಲ್ಲ.

ಅನುದಾನ ಪಡೆದುಕೊಂಡಿದ್ದರು ಸಹ ಈ ಮಹಾವಿದ್ಯಾಲಯವು ತನ್ನದೇ ಆದ ಪ್ರತ್ಯೇಕ ಕಟ್ಟಡವನ್ನು ಇದುವರೆಗೆ ಹೊಂದಿರಲಿಲ್ಲ. ಆದರೆ ೨೦೦೭-೦೮ನೆಯ ಸಾಲಿನಲ್ಲಿ ವಿದ್ಯಾಲಯವು ತನ್ನದೇ ಆದ ಕಟ್ಟಡವನ್ನು ಹೊಂದಿದೆ. ಹಾಗೆಯೇ ಕಲಾ ಶಾಲೆಗಳಿಗೆ ಇರಬೇಕಾದಂತಹ ಎಲ್ಲ ರೀತಿಯ ಸೌಕರ್ಯಗಳಾದ ಗ್ರಂಥಾಲಯ, ಪೀಠೋಪಕರಣಗಳು, ಪಾಠೋಪಕರಣಗಳು, ಕಲಾ ಗ್ಯಾಲರಿ, ಕ್ರೀಡಾ ಮೈದಾನ ಮುಂತಾದವುಗಳನ್ನು ಒಳಗೊಂಡಿದೆ. ಈ ಮಹಾವಿದ್ಯಾಲಯದ ವಿದ್ಯಾರ್ಥಿಗಳ ಒಟ್ಟು ಸಂಖ್ಯೆ ೭೧. ಇಲ್ಲಿ ನಡೆಸುವಂತಹ ತರಗತಿಗಳೆಂದರೆ ಕಲಾ ಮೂಲ ತರಗತಿಗಳ, ಡಿಪ್ಲೋಮಾ ಜೊತೆಗೆ ಕನ್ನಡ ವಿಶ್ವವಿದ್ಯಾಲಯದಿಂದ ಅಂಗೀಕಾರ ಪಡೆದು ೨೦೦೭-೦೮ ರಿಂದ ಬಿ.ವಿ.ಎ ತರಗತಿಗಳನ್ನು ಆರಂಭಮಾಡಲಾಗಿದೆ.

ವ್ಯವಸ್ಥಿತವಾದಂತಹ ಈ ಕಲಾ ಮಹಾವಿದ್ಯಾಲಯವು ವಿದ್ಯಾರ್ಥಿಗಳ ಕ್ರಿಯಾಶೀಲತೆಯನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವಹಿಸಿದೆ. ವಿದ್ಯಾರ್ಥಿಗಳು ಸದಾ ಚಟುವಟಿಕೆಯಿಂದ ಕೂಡಿರಲು ಮಹಾವಿದ್ಯಾಲಯವು ಹಲವಾರು ಸಾಂಸ್ಕೃತಿಕ ಕಾರ್ಯಕ್ರಮ, ಕಲಾ ಚಟುವಟಿಕೆಗಳನ್ನು ಹಮ್ಮಿಕೊಂಡಿರುವುದು. ಇಲ್ಲಿನ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಅನೇಕ ರಾಜ್ಯ ಮತ್ತು ರಾಷ್ಟ್ರಮಟ್ಟದ ಚಿತ್ರಕಲಾ ಪ್ರದರ್ಶನ, ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಶೈಕ್ಷಣಿಕ ಅವಧಿಯಲ್ಲಿ ಅನೇಕ ಕಲಾ ಶಿಬಿರಗಳು, ವಿಚಾರ ಸಂಕಿರಣಗಳು, ಉಪನ್ಯಾಸಗಳು, ಕಾರ್ಯಾಗಾರಗಳು ಮತ್ತು ಪ್ರಾತ್ಯಕ್ಷಿಕೆಗಳನ್ನು ಆಯೋಜಿಸಲಾಗುತ್ತದೆ. ಇಂತಹ ಕಲಾ ಚಟುವಟಿಕೆಗಳನ್ನು ವರ್ಷಕ್ಕೆ ಎರಡು ಭಾರಿ ನಡೆಸಲಾಗುವುದು. ಈ ಕಲಾಶಾಲೆಯು ಈ ಗೋಕಾಕ್ ನಗರದಲ್ಲಿ ತನ್ನ ಅಸ್ಥಿತ್ವವನ್ನು ಉಳಿಸಿಕೊಂಡಿದೆ.

**ಡಾ. ಅಂಬೇಡ್ಕರ ಶತಮಾನೋತ್ಸವ ಲಲಿತಕಲಾ ಮಹಾವಿದ್ಯಾಲಯವು (ಸಂಕೇಶ್ವರ)** ಡಾ. ಅಂಬೇಡ್ಕರ ಅವರ ಜನ್ಮ ಶತಾಬ್ಧಿಯ ಪ್ರಯುಕ್ತ ೧೯೯೧ರಲ್ಲಿ ಪ್ರಾರಂಭವಾಯಿತು. ಈ ಚಿತ್ರಕಲಾ ಮಹಾವಿದ್ಯಾಲಯವು ಕರ್ನಾಟಕ ಸರ್ಕಾರದಿಂದ ಮಂಜೂರಾತಿ ಪಡೆದ, ಸರ್ಕಾರದಿಂದ ಅನುದಾನ ರಹಿತ ಕಲಾ ಶಾಲೆಯಾಗಿದೆ. ಈ ಮಹಾವಿದ್ಯಾಲಯವು ಭಾರತ ರತ್ನ ಡಾ. ಬಿ.ಆರ್. ಅಂಬೇಡ್ಕರ ಇನ್ಸ್ಟಿಟ್ಯೂಟ್ ಆಫ್ ಎಜುಕೇಶನ್ ಆ್ಯಂಡ್ ಸೋಶಿಯಲ್



ಕಾರ್ಯಕ್ರಮ. ಶಾಲಾ ಚಟುವಟಿಕೆಗಳ ವರದಿಗಾಗಿ ವಾರ್ಷಿಕ ಸ್ಮರಣ ಸಂಚಿಕೆಯನ್ನು ಪ್ರಕಟಿಸಿದೆ.

**ಸಿದ್ಧಾರ್ಥ ಲಲಿತಕಲಾ ಮಹಾವಿದ್ಯಾಲಯವು** (ಗೋಕಾಕ) ಸರ್ಕಾರದ ಮಾನ್ಯತೆ ಪಡೆದ, ಅನುದಾನ ರಹಿತ ಕಲಾ ಶಾಲೆಯಾಗಿದೆ. ಈ ಮಾಹಾವಿದ್ಯಾಲಯವು ೧೯೯೩ರಲ್ಲಿ ಕರ್ನಾಟಕ ರೂರಲ್ ಎಜ್ಯುಕೇಶನ್ ಸೊಸೈಟಿಯ ಆಶ್ರಯದಲ್ಲಿ ನಡೆಯುತ್ತಿದೆ. ಗೋಕಾಕ್ ನಗರವು ಕರಕುಶಲ ಕಲೆಗೆ ಮತ್ತು ಬಣ್ಣಗಾರಿಕೆಗೆ ಹೆಸರುವಾಸಿಯಾಗಿದೆ. ಅಲ್ಲದೇ ಕಲೆ, ಸಾಹಿತ್ಯ, ಸಂಸ್ಕೃತಿಯ ತಾಣವಾದ ಈ ನಗರದಲ್ಲಿ ಕಲೆಯ ಉಳಿವಿಗಾಗಿ ಶ್ರಮಿಸುತ್ತಿರುವ ಕುಟುಂಬಗಳು ಇನ್ನೂ ಇವೆ. ಹಾಗಾಗಿ ಕಲಾವಿದರ ನೆಲೆಯಾಗಿರುವ ಈ ನಗರದಲ್ಲಿ ಕಲಾಶಾಲೆಯು ಸ್ಥಾಪನೆಯಾಗಿರುವುದು ಔಚಿತ್ಯವಾಗಿದೆ. ಹೆಚ್ಚಾಗಿ ಇಲ್ಲಿ ಕಲೆಯನ್ನು ಪ್ರೋತ್ಸಾಹಿಸುವಂತಹ ಜನರಿದ್ದಾರೆ. ಆದ್ದರಿಂದ ಗೋಕಾಕ್‌ನಲ್ಲಿ ಎರಡು ಚಿತ್ರಕಲಾ ಶಾಲೆಗಳು ಇವೆ. ೧. ಸಿದ್ಧಾರ್ಥ ಲಲಿತಕಲಾ ಮಹಾವಿದ್ಯಾಲಯ ೨. ಕರ್ನಾಟಕ ಲಲಿತಕಲಾ ಮಹಾವಿದ್ಯಾಲಯ.

ಸಿದ್ಧಾರ್ಥ ಲಲಿತಕಲಾ ಮಹಾವಿದ್ಯಾಲಯವು ಈ ಪ್ರದೇಶದಲ್ಲಿ ಒಂದು ಕ್ರಮಬದ್ಧವಾದ ಶಿಕ್ಷಣ ನೀಡುವ ಉದ್ದೇಶದಿಂದ ಗೋಕಾಕ್ ನಗರದಲ್ಲಿ ಪ್ರಾರಂಭವಾಗಿದೆ. ಈ ಕಲಾ ಮಹಾವಿದ್ಯಾಲಯದಲ್ಲಿ ಒಟ್ಟು ೭ ಜನ ಸಿಬ್ಬಂದಿ ವರ್ಗದವರನ್ನು ಹೊಂದಿರುತ್ತದೆ. ಇವರಲ್ಲಿ ೬ ಜನ ಅನುಭವಿ, ನುರಿತ ಕಲಾ ಶಿಕ್ಷಕರುಗಳಾದ ೧. ಜಯಾನಂದ ಎಸ್. ಮಾದರ, ಪ್ರಾಚಾರ್ಯರು ೨. ಅಲ್ಲಪ್ಪಾ ಎಸ್. ಕಂಬಾರ, ಉಪನ್ಯಾಸಕರು ೩. ಲಕ್ಷ್ಮಣ ಸಿದ್ಲಿಂಗಪ್ಪಾ ಬಡಿಗೇರ, ಉಪನ್ಯಾಸಕರು ೪. ಶ್ರೀಮತಿ. ಅರುಣಾ ಬಾಳಗೊಂಡ ಹಲಗಿ, ಉಪನ್ಯಾಸಕಿ ೫. ರಾಮಪ್ಪಾ ಬಸಲಿಂಗಪ್ಪಾ ಹಳ್ಳೂರ, ಉಪನ್ಯಾಸಕರು ೬. ವಿಜಯಕುಮಾರ ಔದಪ್ಪಾ ನಾಯಿಕ, ಉಪನ್ಯಾಸಕರು ಮತ್ತು ಬೋಧಕೇತರ ಸಿಬ್ಬಂದಿಯಾದ ೭. ಸದಾನಂದ ಸಿದಲಿಂಗಪ್ಪಾ ಮಳಗಲಿ, ದ್ವಿತೀಯ ದರ್ಜೆ ಸಹಾಯಕರು. ಮಹಾವಿದ್ಯಾಲಯದ ವಿದ್ಯಾರ್ಥಿಗಳ ಹಾಜರಾತಿ ಪ್ರಮಾಣ ಶೇಕಡಾ ೮೨. ಇಲ್ಲಿ ನಡೆಯುವಂತಹ ತರಗತಿಗಳೆಂದರೆ, ಎರಡು ವರ್ಷದ ಕಲಾ ಮೂಲ ತರಗತಿಗಳು, ೩ ವರ್ಷದ ವಿಶೇಷ ಪರಿಣಿತಿಯ ತರಗತಿಗಳನ್ನು ನಡೆಸಲಾಗುತ್ತಿದ್ದು, ಈ ಲಲಿತಕಲಾ ಮಹಾವಿದ್ಯಾಲಯವು ಕನ್ನಡ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಡುತ್ತದೆ.

ಈ ಕಲಾ ಮಹಾವಿದ್ಯಾಲಯವು ಸರ್ಕಾರದ ಅನುದಾನವಿಲ್ಲ. ಕಾರಣ ಸಾಕಷ್ಟು ಸೌಲಭ್ಯಗಳ ಕೊರತೆಯಿದೆ. ಉದಾಹರಣೆಯಾಗಿ ಮೊದಲಿಗೆ ಕಲಾಶಾಲೆಗೆ ಪ್ರತ್ಯೇಕ ಕಟ್ಟಡ, ತರಗತಿಯ ಕೋಣೆಗಳ ಕೊರತೆ, ಪೀಠೋಪಕರಣ, ಪಾಠೋಪಕರಣ, ಗ್ರಂಥಾಲಯ, ಮೈದಾನ ಮುಂತಾದ ಕೊರತೆಗಳಿಂದ ಕೂಡಿದೆ. ಸರ್ಕಾರ ಅನುದಾನವನ್ನು ನೀಡಿದರೆ ಇವೆಲ್ಲಾ ಕೊರತೆಗಳನ್ನು ನಿಗಿಸಿಕೊಂಡು ಒಂದು ಪ್ರಸಿದ್ಧ ಲಲಿತಕಲಾ ಮಹಾವಿದ್ಯಾಲಯವಾಗಿ,

ಪ್ರತಿವರ್ಷ ಪ್ರತಿಶತ ಶೇಕಡಾ ೮೦ ರಷ್ಟು ಫಲಿತಾಂಶವನ್ನು ಪಡೆದುಕೊಂಡಿದೆ.

ಈ ಕಲಾ ಮಹಾವಿದ್ಯಾಲಯವು ಸರ್ಕಾರದ ಅನುದಾನವಿಲ್ಲದ ಕಾರಣ ಸಾಕಷ್ಟು ಅನಾನುಕೂಲತೆಯ ಸ್ಥಿತಿಯಲ್ಲಿದೆ. ಉದಾಹರಣೆಗೆ ತರಗತಿಯ ಕೋಣೆಗಳ ಕೊರತೆ, ಪೀಠೋಪಕರಣ, ಪಾಠೋಪಕರಣ, ಗ್ರಂಥಾಲಯ, ಖಾಯಂ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ, ಮೈದಾನ ಮುಂತಾದ ಕೊರತೆಗಳಿಂದ ಕೂಡಿದೆ. ಬಹುಶಃ ಸರ್ಕಾರದ ಅನುದಾನವನ್ನು ಪಡೆದುಕೊಂಡರೆ ಇವೆಲ್ಲಾ ಕೊರತೆಗಳನ್ನು ನಿಗಿಸಿಕೊಂಡು ಒಂದು ಪ್ರಸಿದ್ಧ ಲಲಿತಕಲಾ ಮಹಾವಿದ್ಯಾಲಯಗಳಲ್ಲಿ ಒಂದಾಗಬಹುದು. ಇವೆಲ್ಲಾ ಕೊರತೆಗಳಿದ್ದರೂ ಈ ಕಲಾಶಾಲೆಯು ವಿದ್ಯಾರ್ಥಿಗಳ ಕಲಾ ಶಿಕ್ಷಣಕ್ಕಾಗಿ ಸಾಕಷ್ಟು ಶ್ರಮಿಸುತ್ತಿದೆ.

ಸಂಸ್ಥೆಯ ವತಿಯಿಂದ ಬರುವಂತಹ ಸೌಲಭ್ಯಗಳನ್ನು ಮಾತ್ರ ಬಳಸಿಕೊಂಡು ವಿದ್ಯಾರ್ಥಿಗಳನ್ನು ಕ್ರಿಯಾಶೀಲರನ್ನಾಗಿ ಮಾಡಲು ಹಲವಾರು ಕಲಾಚಟುವಟಿಕೆಗಳಲ್ಲಿ ತೊಡಗಿದೆ. ಉದಾಹರಣೆಗೆ ಪ್ರತಿವರ್ಷ ಜಿಲ್ಲೆ ಮತ್ತು ರಾಜ್ಯಮಟ್ಟದ ಚಿತ್ರಕಲಾ ಪ್ರದರ್ಶನ, ಪ್ರತಿ ತಿಂಗಳು ಕಲೆಗೆ ಸಂಬಂಧಿಸಿದ ವಿಚಾರ ಸಂಕಿರಣ, ವರ್ಷದಲ್ಲಿ ಎರಡು ಭಾರಿ ಹಿರಿಯ ಕಲಾವಿದರಿಂದ ಪ್ರಾತ್ಯಕ್ಷಿಕೆ, ಪ್ರತಿವರ್ಷ ಶೈಕ್ಷಣಿಕ ಪ್ರವಾಸ, ಹಂಪಿ ಕ್ಷೇತ್ರದಲ್ಲಿ ನಿಸರ್ಗ ಚಿತ್ರಣದ ಶಿಬಿರ. ಇದರಿಂದಾಗಿ ಈ ಕಲಾ ಮಹಾವಿದ್ಯಾಲಯದ ವಿದ್ಯಾರ್ಥಿಗಳು ರಾಜ್ಯ, ರಾಷ್ಟ್ರಮಟ್ಟದ ಕಲಾ ಪ್ರದರ್ಶನಕ್ಕೆ ಆಯ್ಕೆಯಾಗಿ, ಪ್ರಶಸ್ತಿಗಳನ್ನು ಪಡೆದು ಈ ಕಲಾಶಾಲೆಯ ಕೀರ್ತಿಯನ್ನು ಹೆಚ್ಚಿಸುತ್ತಿದ್ದಾರೆ. ಹಲವಾರು ಕೊರತೆಗಳಿಂದ ಕೂಡಿರುವ ಈ ಲಲಿತಕಲಾ ಮಾಹಾವಿದ್ಯಾಲಯವು ತನ್ನ ಕೀರ್ತಿಯನ್ನು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಹರಡುತ್ತಿರುವುದು ವಿಶೇಷವೆನ್ನಬಹುದು.

**ಶಿವಯೋಗಿಶ್ವರ ಲಲಿತಕಲಾ ಮಹಾವಿದ್ಯಾಲಯವು** (ಬೈಲಹೊಂಗಲ) ೧೯೯೨ರಲ್ಲಿ ಸ್ಥಾಪನೆಯಾಯಿತು. ಈ ಲಲಿತಕಲಾ ಮಹಾವಿದ್ಯಾಲಯವು ಶ್ರೀ ಶಿವಾನಂದ ಭಾರತಿ ಶಿಕ್ಷಣ ಸಂಸ್ಥೆಯ, (ಇಂಚಲ) ವತಿಯಿಂದ ಬೈಲಹೊಂಗಲದಲ್ಲಿ ಆರಂಭವಾಗಿದೆ. ಬೈಲಹೊಂಗಲವು ತಾಲೂಕು ಸ್ಥಳವಿದ್ದು ೪೦,೦೦೦ ಜನಸಂಖ್ಯೆ ಇರುವ ಸ್ಥಳವಾಗಿದೆ. ಇಲ್ಲಿ ಸ್ಥಳೀಯವಾಗಿ ೪ ಪ್ರೌಢಶಾಲೆಗಳು ಸುತ್ತಲಿನ ೨೮ ಪ್ರೌಢಶಾಲೆಗಳಿವೆ. ಚಿತ್ರಕಲೆಯಲ್ಲಿ ಅಭಿರುಚಿಯಿರುವ, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಈ ಚಿತ್ರಕಲಾ ಮಹಾವಿದ್ಯಾಲಯವು ಪ್ರಾರಂಭವಾಗಿದೆ. ಶ್ರೀ ಶಿವಾನಂದ ಭಾರತಿ ಶಿಕ್ಷಣ ಸಂಸ್ಥೆಯ ಅಡಿಯಲ್ಲಿ ಇಂಚಲ ಮತ್ತು ಬೈಲಹೊಂದಲದಲ್ಲಿ ಪ್ರಾಥಮಿಕ ಶಾಲೆಗಳು, ಪ್ರೌಢಶಾಲೆಗಳು, ಪದವಿ ಪೂರ್ವ, ಪದವಿ, ಆಯುರ್ವೇದ ಕಾಲೇಜುಗಳು ಇವೆ. ಒಟ್ಟಾರೆಯಾಗಿ ಈ ಪ್ರದೇಶದ ಶೈಕ್ಷಣಿಕ ಅಭಿವೃದ್ಧಿಗಾಗಿ ಈ ಸಂಸ್ಥೆಯ ಸೇವೆ ಅಪಾರ.

ಸಾಮಾಜಿಕವಾಗಿ ಪ್ರಾಚೀನ ಕಾಲದಿಂದಲೂ ಇಲ್ಲಿ ಸಾಂಸ್ಕೃತಿಕ ನೆಲೆಯು ಸಮೃದ್ಧವಾಗಿ



ಬೆಳೆದುಬಂದಿದೆ. ಈ ದಿಸೆಯಲ್ಲಿ ಕಲೆಯ ಸಮೃದ್ಧಿಗಾಗಿ, ಅಭಿವೃದ್ಧಿಗಾಗಿ ಶ್ರೀ ಶಿವಾನಂದ ಭಾರತಿ ಸ್ವಾಮಿಗಳು ಇಲ್ಲಿ ಕಲಾಶಾಲೆಯನ್ನು ಆರಂಭಿಸಿದರು[೫] ಈ ಲಲಿತಕಲಾ ಮಹಾವಿದ್ಯಾಲಯದಲ್ಲಿ ಅನುಭವಿ ಶಿಕ್ಷಕರಿದ್ದಾರೆ. ಅವರಲ್ಲಿ ೧. ಪ್ರಾಚಾರ್ಯರಾದ ಬ್ರಹ್ಮನಾಯಕ. ಆರ್. ಮುಳ್ಳೂರ ೨. ಎನ್.ಬಿ. ನಾಗನಗೌಡರ ೩. ಬಿ.ಜಿ. ಹುಣಸಿಕಟ್ಟಿ ೪. ಭೀಮಪ್ಪರಾಯಪ್ಪ ಮಹಾದೇವಪ್ಪಾ ಪತ್ತಾರ ಬೋಧಕೇತರ ಸಿಬ್ಬಂದಿಗಳಲ್ಲಿ ೧. ಗೋಪಾಲ ವೀರಭದ್ರಪ್ಪ ಕಿತ್ತೂರು. ಈ ಮಹಾವಿದ್ಯಾಲಯದಲ್ಲಿ ಕಲಾಮೂಲ ತರಗತಿಗಳು, ಎ.ಎಂ, ತರಗತಿ, ಜಿ.ಡಿ. ತರಗತಿಗಳನ್ನು ನಡೆಸಲಾಗುತ್ತದೆ. ವರ್ಷಕ್ಕೆ ಈ ಕಲಾಶಾಲೆಯಲ್ಲಿ ೪೦ ರಿಂದ ೪೫ ವಿದ್ಯಾರ್ಥಿಗಳು ಪ್ರವೇಶ ಪಡೆಯುತ್ತಾರೆ. ಅಲ್ಲದೆ ಪ್ರತಿವರ್ಷ ಪ್ರತಿಶತ ಶೇಕಡಾ ೮೨ ರಷ್ಟು ಫಲಿತಾಂಶವನ್ನು ಪಡೆದುಕೊಂಡಿದೆ.

ಈ ಕಲಾ ಮಹಾವಿದ್ಯಾಲಯವು ಸರ್ಕಾರದ ಅನುದಾನವಿಲ್ಲದ ಕಾರಣ ಸಾಕಷ್ಟು ಅನಾನುಕೂಲತೆಯ ಸ್ಥಿತಿಯಲ್ಲಿದೆ. ಉದಾಹರಣೆಗೆ ತರಗತಿಯ ಕೋಣೆಗಳ ಕೊರತೆ, ಪೀಠೋಪಕರಣ, ಪಾಠೋಪಕರಣ, ಗ್ರಂಥಾಲಯ, ಬೋಧಕ ಮತ್ತು ಬೋಧಕೇತರ ಸಿಬ್ಬಂದಿ, ಮೈದಾನ ಮುಂತಾದ ಕೊರತೆಗಳಿಂದ ಕೂಡಿದೆ. ಬಹುಶಃ ಸರ್ಕಾರದ ಅನುದಾನವನ್ನು ಪಡೆದುಕೊಂಡರೆ ಇವೆಲ್ಲಾ ಕೊರತೆಗಳನ್ನು ನಿಗಿಸಿಕೊಂಡು ಒಂದು ಪ್ರಸಿದ್ಧ ಲಲಿತಕಲಾ ಮಹಾವಿದ್ಯಾಲಯಗಳಲ್ಲಿ ಒಂದಾಗಬಹುದು. ಇವೆಲ್ಲಾ ಕೊರತೆಗಳಿದ್ದರೂ ಈ ಕಲಾಶಾಲೆಯು ವಿದ್ಯಾರ್ಥಿಗಳ ಕಲಾ ಶಿಕ್ಷಣಕ್ಕಾಗಿ ಸಾಕಷ್ಟು ಶ್ರಮಿಸುತ್ತಿದೆ.

ಸಂಸ್ಥೆಯ ವತಿಯಿಂದ ಬರುವಂತಹ ಸೌಲಭ್ಯಗಳನ್ನು ಬಳಸಿಕೊಂಡು ವಿದ್ಯಾರ್ಥಿಗಳನ್ನು ಕ್ರಿಯಾಶೀಲರನ್ನಾಗಿ ಮಾಡಲು ಹಲವಾರು ಕಲಾಚಟುವಟಿಕೆಗಳಲ್ಲಿ ತೊಡಗಿದೆ. ಉದಾಹರಣೆಗೆ ಹೇಳುವುದಾದರೆ ಪ್ರತಿವರ್ಷ ಫೆಬ್ರವರಿ ತಿಂಗಳಲ್ಲಿ ಜಿಲ್ಲೆ ಮತ್ತು ರಾಜ್ಯಮಟ್ಟದ ಚಿತ್ರಕಲಾ ಪ್ರದರ್ಶನ, ಪ್ರತಿ ತಿಂಗಳು ಕಲೆಗೆ ಸಂಬಂಧಿಸಿದ ವಿಚಾರ ಸಂಕಿರಣ, ವರ್ಷದಲ್ಲಿ ಎರಡು ಭಾರಿ ಹಿರಿಯ ಕಲಾವಿದರಿಂದ ಪ್ರಾತ್ಯಕ್ಷಿಕೆ, ಪ್ರತಿವರ್ಷ ಶೈಕ್ಷಣಿಕ ಪ್ರವಾಸ, ಹಂಪಿ ಮತ್ತು ಬಾದಾಮಿ ಕ್ಷೇತ್ರದಲ್ಲಿ ನಿಸರ್ಗ ಚಿತ್ರಣದ ಶಿಬಿರ. ಇದರಿಂದಾಗಿ ಈ ಕಲಾ ಮಹಾವಿದ್ಯಾಲಯದ ವಿದ್ಯಾರ್ಥಿಗಳು ರಾಜ್ಯ, ರಾಷ್ಟ್ರಮಟ್ಟದ ಕಲಾ ಪ್ರದರ್ಶನಕ್ಕೆ ಆಯ್ಕೆಯಾಗಿ, ಪ್ರಶಸ್ತಿಗಳನ್ನು ಪಡೆದು ಈ ಕಲಾಶಾಲೆಯ ಕೀರ್ತಿಯನ್ನು ಹೆಚ್ಚಿಸುತ್ತಿದ್ದಾರೆ. ಹಲವಾರು ಕೊರತೆಗಳಿಂದ ಕೂಡಿರುವ ಈ ಲಲಿತಕಲಾ ಮಾಹಾವಿದ್ಯಾಲಯವು ತನ್ನ ಕೀರ್ತಿಯನ್ನು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಹರಡುತ್ತಿರುವುದು ವಿಶೇಷವೆನ್ನಬಹುದು. ಅಭಿವೃದ್ಧಿ ಹೊಂದುತ್ತಿರುವ ಈ ಮಹಾವಿದ್ಯಾಲಯವು ತನ್ನದೇ ಆದ ಪ್ರತ್ಯೇಕ ವಸ್ತು ಸಂಗ್ರಹಾಲಯ ನಿರ್ಮಾಣ ಮಾಡುವ ಪ್ರಯತ್ನದಲ್ಲಿದೆ. ಅಲ್ಲದೆ ಶಿವಯೋಗೀಶ್ವರ ಲಲಿತಕಲಾ ಮಹಾವಿದ್ಯಾಲಯವು ವಿಶೇಷ

೫. ವೀರಯ್ಯ ಸ್ವಾಮಿಗಳು : (ಸಂ), ಗುರುದೇವ, ಪುಟ, ೨೦, ೨೧



ಕಾರ್ಯಕ್ರಮ, ಶಾಲಾ ಚಟುವಟಿಕೆಗಳ ವರದಿಗಾಗಿ ವಾರ್ಷಿಕ ಸ್ಮರಣ ಸಂಚಿಕೆಯನ್ನು ಪ್ರಕಟಿಸಿದೆ.

**ಸಿದ್ಧಾರ್ಥ ಲಲಿತಕಲಾ ಮಹಾವಿದ್ಯಾಲಯವು** (ಗೋಕಾಕ) ಸರ್ಕಾರದ ಮಾನ್ಯತೆ ಪಡೆದ, ಅನುದಾನ ರಹಿತ ಕಲಾ ಶಾಲೆಯಾಗಿದೆ. ಈ ಮಾಹಾವಿದ್ಯಾಲಯವು ೧೯೯೩ರಲ್ಲಿ ಕರ್ನಾಟಕ ರೂರಲ್ ಎಜ್ಯುಕೇಶನ್ ಸೊಸೈಟಿಯ ಆಶ್ರಯದಲ್ಲಿ ನಡೆಯುತ್ತಿದೆ. ಗೋಕಾಕ್ ನಗರವು ಕರಕುಶಲ ಕಲೆಗೆ ಮತ್ತು ಬಣ್ಣಗಾರಿಕೆಗೆ ಹೆಸರುವಾಸಿಯಾಗಿದೆ. ಅಲ್ಲದೇ ಕಲೆ, ಸಾಹಿತ್ಯ, ಸಂಸ್ಕೃತಿಯ ತಾಣವಾದ ಈ ನಗರದಲ್ಲಿ ಕಲೆಯ ಉಳಿವಿಗಾಗಿ ಶ್ರಮಿಸುತ್ತಿರುವ ಕುಟುಂಬಗಳು ಇನ್ನೂ ಇವೆ. ಹಾಗಾಗಿ ಕಲಾವಿದರ ನೆಲೆಯಾಗಿರುವ ಈ ನಗರದಲ್ಲಿ ಕಲಾಶಾಲೆಯು ಸ್ಥಾಪನೆಯಾಗಿರುವುದು ಔಚಿತ್ಯವಾಗಿದೆ. ಹೆಚ್ಚಾಗಿ ಇಲ್ಲಿ ಕಲೆಯನ್ನು ಪ್ರೋತ್ಸಾಹಿಸುವಂತಹ ಜನರಿದ್ದಾರೆ. ಆದ್ದರಿಂದ ಗೋಕಾಕ್‌ನಲ್ಲಿ ಎರಡು ಚಿತ್ರಕಲಾ ಶಾಲೆಗಳು ಇವೆ. ೧. ಸಿದ್ಧಾರ್ಥ ಲಲಿತಕಲಾ ಮಹಾವಿದ್ಯಾಲಯ ೨. ಕರ್ನಾಟ್ಟಕ ಲಲಿತಕಲಾ ಮಹಾವಿದ್ಯಾಲಯ.

ಸಿದ್ಧಾರ್ಥ ಲಲಿತಕಲಾ ಮಹಾವಿದ್ಯಾಲಯವು ಈ ಪ್ರದೇಶದಲ್ಲಿ ಒಂದು ಕ್ರಮಬದ್ಧವಾದ ಶಿಕ್ಷಣ ನೀಡುವ ಉದ್ದೇಶದಿಂದ ಗೋಕಾಕ್ ನಗರದಲ್ಲಿ ಪ್ರಾರಂಭವಾಗಿದೆ. ಈ ಕಲಾ ಮಹಾವಿದ್ಯಾಲಯದಲ್ಲಿ ಒಟ್ಟು ೭ ಜನ ಸಿಬ್ಬಂದಿ ವರ್ಗದವರನ್ನು ಹೊಂದಿರುತ್ತದೆ. ಇವರಲ್ಲಿ ೬ ಜನ ಅನುಭವಿ, ನುರಿತ ಕಲಾ ಶಿಕ್ಷಕರುಗಳಾದ ೧. ಜಯಾನಂದ ಎಸ್. ಮಾದರ, ಪ್ರಾಚಾರ್ಯರು ೨. ಅಲ್ಲಪ್ಪಾ ಎಸ್. ಕಂಬಾರ, ಉಪನ್ಯಾಸಕರು ೩. ಲಕ್ಷ್ಮಣ ಸಿದ್ಲಿಂಗಪ್ಪಾ ಬಡಿಗೇರ, ಉಪನ್ಯಾಸಕರು ೪. ಶ್ರೀಮತಿ. ಅರುಣಾ ಬಾಳಗೊಂಡ ಹಲಗಿ, ಉಪನ್ಯಾಸಕಿ ೫. ರಾಮಪ್ಪಾ ಬಸಲಿಂಗಪ್ಪಾ ಹಳ್ಳೂರ, ಉಪನ್ಯಾಸಕರು ೬. ವಿಜಯಕುಮಾರ ಔದಪ್ಪಾ ನಾಯಿಕ, ಉಪನ್ಯಾಸಕರು ಮತ್ತು ಬೋಧಕೇತರ ಸಿಬ್ಬಂದಿಯಾದ ೭. ಸದಾನಂದ ಸಿದಲಿಂಗಪ್ಪಾ ಮಳಗಲಿ, ದ್ವಿತೀಯ ದರ್ಜೆ ಸಹಾಯಕರು. ಮಹಾವಿದ್ಯಾಲಯದ ವಿದ್ಯಾರ್ಥಿಗಳ ಹಾಜರಾತಿ ಪ್ರಮಾಣ ಶೇಕಡಾ ೮೨. ಇಲ್ಲಿ ನಡೆಯುವಂತಹ ತರಗತಿಗಳೆಂದರೆ, ಎರಡು ವರ್ಷದ ಕಲಾ ಮೂಲ ತರಗತಿಗಳು, ೩ ವರ್ಷದ ವಿಶೇಷ ಪರಿಣಿತಿಯ ತರಗತಿಗಳನ್ನು ನಡೆಸಲಾಗುತ್ತಿದ್ದು, ಈ ಲಲಿತಕಲಾ ಮಹಾಪಿದ್ಯಾಲಯವು ಕನ್ನಡ ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಡುತ್ತದೆ.

ಈ ಕಲಾ ಮಹಾಪಿದ್ಯಾಲಯವು ಸರ್ಕಾರದ ಅನುದಾನವಿಲ್ಲ. ಕಾರಣ ಸಾಕಷ್ಟು ಸೌಲಭ್ಯಗಳ ಕೊರತೆಯಿದೆ. ಉದಾಹರಣೆಯಾಗಿ ಮೊದಲಿಗೆ ಕಲಾಶಾಲೆಗೆ ಪ್ರತ್ಯೇಕ ಕಟ್ಟಡ, ತರಗತಿಯ ಕೋಣೆಗಳ ಕೊರತೆ, ಪೀಠೋಪಕರಣ, ಪಾಠೋಪಕರಣ, ಗ್ರಂಥಾಲಯ, ಮೈದಾನ ಮುಂತಾದ ಕೊರತೆಗಳಿಂದ ಕೂಡಿದೆ. ಸರ್ಕಾರ ಅನುದಾನವನ್ನು ನೀಡಿದರೆ ಇವೆಲ್ಲಾ ಕೊರತೆಗಳನ್ನು ನಿಗಿಸಿಕೊಂಡು ಒಂದು ಪ್ರಸಿದ್ಧ ಲಲಿತಕಲಾ ಮಹಾವಿದ್ಯಾಲಯವಾಗಿ,



ಕಲಾ ಶಿಕ್ಷಣಕ್ಕೆ ಹೆಚ್ಚಿನ ಕೊಡುಗೆಯನ್ನು ನೀಡಬಹುದು. ಸಂಸ್ಥೆಯು ಈ ಮಹಾವಿದ್ಯಾಲಯದಲ್ಲಿರುವ ಕೊರತೆಗಳನ್ನು ನಿವಾರಿಸಿ ಅಗತ್ಯ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟರೆ ಈಗಿರುವ ಸ್ಥಿತಿಗಿಂತಲೂ ಉತ್ತಮವಾಗಬಹುದು. ಮತ್ತು ಜಿಲ್ಲೆಯಲ್ಲಿ ಪ್ರತ್ಯೇಕವಾದ ಸ್ಥಾನಮಾನವನ್ನು ಪಡೆಯಬಹುದು. ಆದರು ಕೂಡ ಇವೆಲ್ಲಾ ಕೊರತೆಗಳಿದ್ದರೂ ಕಲಾ ಮಹಾವಿದ್ಯಾಲಯವು ವಿದ್ಯಾರ್ಥಿಗಳ ಕಲಾ ಶಿಕ್ಷಣಕ್ಕಾಗಿ ಸಾಕಷ್ಟು ಶ್ರಮಿಸುತ್ತಿದೆ.

ಪ್ರಸ್ತುತದಲ್ಲಿರುವ ಸೌಲಭ್ಯಗಳನ್ನು ಉಪಯೋಗಿಸಿಕೊಂಡು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು ಒಟ್ಟಾಗಿ ಶ್ರಮಿಸಿದರೆ ಈ ಶಾಲೆ ಬೆಳವಣಿಗೆಗೆ ಸಾಧ್ಯವಾಗಬಹುದು. ಈ ಮಹಾವಿದ್ಯಾಲಯವು ವಿದ್ಯಾರ್ಥಿಗಳನ್ನು ಕ್ರಿಯಾಶೀಲರನ್ನಾಗಿ ಮಾಡಲು ಹಲವಾರು ಕಲಾಚಟುವಟಿಕೆಗಳಲ್ಲಿ ತೊಡಗಿದೆ. ಉದಾಹರಣೆಗೆ ಹೇಳುವುದಾದರೆ ಪ್ರತಿವರ್ಷ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುವುದು. ಜಿಲ್ಲೆ ಮತ್ತು ರಾಜ್ಯಮಟ್ಟದ ಚಿತ್ರಕಲಾ ಪ್ರದರ್ಶನ, ಕಲೆಗೆ ಸಂಬಂಧಿಸಿದ ವಿಚಾರ ಸಂಕಿರಣ, ವರ್ಷದಲ್ಲಿ ಎರಡು ಭಾರಿ ಹಿರಿಯ ಕಲಾವಿದರಿಂದ ಪ್ರಾತ್ಯಕ್ಷಿಕೆ, ಪ್ರತಿವರ್ಷ ಶೈಕ್ಷಣಿಕ ಪ್ರವಾಸ, ಹಂಪಿ ಕ್ಷೇತ್ರದಲ್ಲಿ ನಿಸರ್ಗ ಚಿತ್ರಣದ ಶಿಬಿರ. ಇದರಿಂದಾಗಿ ಈ ಕಲಾ ಮಹಾವಿದ್ಯಾಲಯದ ವಿದ್ಯಾರ್ಥಿಗಳು ರಾಜ್ಯ, ರಾಷ್ಟ್ರಮಟ್ಟದ ಕಲಾ ಪ್ರದರ್ಶನಕ್ಕೆ ಆಯ್ಕೆಯಾಗಿ, ಹಲವಾರು ಪ್ರಶಸ್ತಿಗಳನ್ನು ಗಳಿಸಿದ್ದಾರೆ. ಈ ಕಲಾಶಾಲೆಯ ಅಭಿವೃದ್ಧಿಗೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಪ್ರಯತ್ನದಲ್ಲಿದ್ದಾರೆ. ಇಷ್ಟೆಲ್ಲಾ ಹಲವಾರು ಕೊರತೆಗಳಿಂದ ಕೂಡಿರುವ ಈ ಲಲಿತಕಲಾ ಮಾಹಾವಿದ್ಯಾಲಯವು ತನ್ನದೇ ಆದ ಸ್ಥಾನವನ್ನು ಗಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದೆ ಎನ್ನಬಹುದು.

ಈ ಕಲಾ ಸಂಸ್ಥೆಗಳು ಅಲ್ಲದೇ ಬೆಳಗಾವಿ ಜಿಲ್ಲೆಯಲ್ಲಿರುವ ಕರ್ನಾಟಕ ಗಡಿನಾಡು ಶಿಕ್ಷಣ ಸಂಸ್ಥೆ ಚಿತ್ರಕಲಾ ಮಹಾವಿದ್ಯಾಲಯ ನಿಪ್ಪಾಣಿ, ಚನ್ನಮ್ಮ ಮಹಿಳಾ ಶಿಕ್ಷಣ ಸಂಸ್ಥೆಯ ಲಲಿತಕಲಾ ಮಹಾವಿದ್ಯಾಲಯ ಚಿಕ್ಕೋಡಿ, ಶ್ರೀ ಮುರುಘೇಂದ್ರ ಲಲಿತಕಲಾ ಮಂದಿರ ಅಥಣಿ, ಉತ್ತುಂಗ ಲಲಿತಕಲಾ ಮಹಾವಿದ್ಯಾಲಯ ಕಾಗವಾಡ ಇವುಗಳು ಕೂಡ ಬೆಳಗಾವಿ ಜಿಲ್ಲೆಯ ಕಲಾ ಶಿಕ್ಷಣ ಕ್ಷೇತ್ರದ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆಯನ್ನು ನೀಡುತ್ತಾ ಬಂದಿವೆ. ಈ ಕಲಾ ಸಂಸ್ಥೆಗಳು ಬೆಳಗಾವಿ ಜಿಲ್ಲೆಯ ಇತರೆ ಕಲಾ ಶಾಲೆಗಳನ್ನು ಹೋಲಿಸಿದರೆ ಕೆಲವೊಂದು ಅತ್ಯಂತ ದುಸ್ಥಿತಿಯಲ್ಲಿವೆ. ಕಾರಣ ಸರ್ಕಾರದ ಅನುದಾನವಿಲ್ಲದಿರುವುದರಿಂದ. ಆದರೂ ಕೂಡ ಈ ಕಲಾ ಶಾಲೆಗಳು ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಕಲಾ ಶಿಕ್ಷಣದ ಬೆಳವಣಿಗೆಗೆ ತಮ್ಮ ಸೇವೆಯನ್ನು ಸಲ್ಲಿಸುತ್ತಿರುವುದು ಪ್ರಸಂಶನೀಯ.

ಬೆಳಗಾವಿಯು ಪ್ರತಿಯೊಂದು ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಹೊಂದಿದಂತೆ, ಶೈಕ್ಷಣಿಕವಾಗಿಯೂ ಕೂಡ ಪ್ರಗತಿ ಹೊಂದಿರುವ ಜಿಲ್ಲೆಯಾಗಿದೆ. ಇತರ ಜಿಲ್ಲೆಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಚಿತ್ರಕಲಾ ಶಾಲೆಗಳು ಇಲ್ಲಿರುವುದು ವಿಶೇಷವಾಗಿದೆ. ಈ ಕಲಾ



ಶಾಲೆಗಳು ಬೆಳಗಾವಿಯ ಭವ್ಯ ಪರಂಪರೆಯ ಸಂಪ್ರದಾಯ ಕಲೆಗೆ ಆಧುನಿಕ ಮೆರಗು ನೀಡುತ್ತಾ ಸಾಗಿದೆ. ಸರ್ಕಾರದಿಂದ ಅನುದಾನ ಪಡೆದ, ಅನುದಾನ ಪಡೆಯದೆ ಇರುವ ಕಲಾ ಶಾಲೆಗಳು ಬೆಳಗಾವಿ ಜಿಲ್ಲೆಯಲ್ಲಿ ಇವೆ. ಅನುದಾನ ಪಡೆದ ಕಲಾ ಕಾಲೇಜುಗಳು ಉತ್ತಮ ಸ್ಥಿತಿಯಲ್ಲಿವೆ. ಅವು ಸದಾ ಕಾಲ ಕಲಾ ಚಟುವಟಿಕೆಯಿಂದ ಕೂಡಿದ್ದು, ಕಲಾ ಶಿಕ್ಷಣದ ಅಭಿವೃದ್ಧಿಗಾಗಿ ಶ್ರಮಿಸುತ್ತಿವೆ. ಹಾಗೂ ತಮ್ಮ ಕಲಾ ಮಹಾವಿದ್ಯಾಲಯದ ವಿದ್ಯಾರ್ಥಿ ಮತ್ತು ಶಿಕ್ಷಕರ ಕಲಾ ಪ್ರತಿಭೆಯನ್ನು ಕಲಾ ಪ್ರದರ್ಶನಗಳ ಮೂಲಕ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದಾರೆ.

ಅನುದಾನ ರಹಿತ ಕಲಾ ಶಾಲೆಗಳಲ್ಲಿ ಹಲವಾರು ಕುಂದು ಕೊರತೆಗಳನ್ನು ಎದುರಿಸುತ್ತಿವೆ. ಅಗತ್ಯ ಸೌಲಭ್ಯಗಳ ಕೊರತೆಯಿಂದಾಗಿ ಸರಿಯಾಗಿ ತರಗತಿಗಳು ನಡೆಯದೆ ಹೋಗುತ್ತಿವೆ. ಅದರಿಂದ ಕೆಲವು ಕಲಾ ಶಾಲೆಗಳು ಕುಂಟಿತಗೊಂಡಿವೆ. ಉದಾಹರಣೆಗೆ ಬೆಳಗಾವಿಯ ಉಮರ ಖಯಾಂ, ಉಮಾ ಲಲಿತಕಲಾ ಮಹಾವಿದ್ಯಾಲಯ, ನಾಗನ್ನೂರು ಸ್ವಾಮಿಗಳ ಪೂರ್ಣಿಮಾ ಕಲಾಶಾಲೆ, ಸವದತ್ತಿ ಚಿತ್ರಕಲಾ ಶಾಲೆ ಮುಂತಾದವುಗಳು. ಈಗಿರುವ ಅನುದಾನ ರಹಿತ ಕಲಾ ಶಾಲೆಗಳು ತಮ್ಮ ಕುಂದುಕೊರತೆಗಳ ನಡುವೆಯು, ಇರುವಂತ ಸೌಲಭ್ಯಗಳನ್ನು ಬಳಸಿಕೊಂಡು ವಿದ್ಯಾರ್ಥಿಗಳು ಸದಾ ಕಲಾ ಚಟುವಟಿಕೆಗಳಿಂದ ಕೂಡಿಕೊಳ್ಳಲು ಶ್ರಮಿಸುತ್ತಿದ್ದಾರೆ. ದುಸ್ಥಿತಿಯಲ್ಲಿರುವ ಕಲಾ ಮಹಾವಿದ್ಯಾಲಯಗಳಿಗೆ ಸರ್ಕಾರವು ಅಗತ್ಯವಾದ ಸೌಲಭ್ಯಗಳನ್ನು ಕಲ್ಪಿಸಿದರೆ ಅವುಗಳ ಪರಿಸ್ಥಿತಿ ಸುಧಾರಿಸಬಹುದು. ಇದರಿಂದ ಕಲಾ ಮಹಾವಿದ್ಯಾಲಯಗಳು ಸದಾ ಚಟುವಟಿಕೆಯಿಂದ ಕೂಡಿರಲು ಸಾಧ್ಯವಾಗುತ್ತದೆ.

ಒಟ್ಟಾರೆಯಾಗಿ ಬೆಳಗಾವಿ ಜಿಲ್ಲೆಯಲ್ಲಿರುವ ಕಲಾ ಮಹಾವಿದ್ಯಾಲಯಗಳಲ್ಲಿ ನುರಿತ ಕಲಾ ಶಿಕ್ಷಕರಿದ್ದಾರೆ. ಇಂತಹ ಕಲಾ ಶಿಕ್ಷಕರಿಂದ ಶಿಕ್ಷಣ ಪಡೆದ ಕಲಾ ವಿದ್ಯಾರ್ಥಿಗಳು ಶ್ರೇಷ್ಠ ಕಲಾವಿದರಾಗಿ ಹೊರಬರಲು ಸಹಾಯಕವಾವುದು. ಹೀಗೆ ಹೊರಬಂದ ಕಲಾವಿದರು ತಮ್ಮ ಪ್ರತಿಭೆಯನ್ನು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಂಡಿದ್ದಾರೆ. ಇದರಿಂದ ಬೆಳಗಾವಿ ಜಿಲ್ಲೆಯು ಚಿತ್ರಕಲೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಆ ಚಿತ್ರಕಲೆಯಿಂದ ಪ್ರಭಾವಿತಗೊಂಡ ಕಲಾವಿದರು ಇಂದಿಗೂ ಕೂಡ ಚಿತ್ರಕಲೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಬೆಳಗಾವಿ ಜಿಲ್ಲೆಯ ಪ್ರಮುಖ ಕಲಾಶಾಲೆಗಳು ಈ ಜಿಲ್ಲೆಯ ಕಲಾ ಬೆಳವಣಿಗೆಗೆ ಸಲ್ಲಿಸಿದ ಸೇವೆ ಅಪಾರ.

* * * * *



ಯಾವುದೇ ಒಂದು ನಾಡಿನ ಸಂಸ್ಕೃತಿಕ ಅಧ್ಯಯನದಲ್ಲಿ ಕಲೆಗಿರುವ ಪಾತ್ರ ಮಹತ್ವ ಪೂರ್ಣವಾದುದು. ಈ ಒಂದು ಕಲಾಪ್ರಕಾರವನ್ನು ಬೆಳೆಸುವಲ್ಲಿ, ಅದನ್ನು ಉಳಿಸುವಲ್ಲಿ ಕರ್ನಾಟಕದ ಬೆಳಗಾವಿ ಜಿಲ್ಲೆಯ ಪಾಲು ಕೂಡ ಸಣ್ಣದಲ್ಲ. ಪ್ರಾಗೈತಿಹಾಸಿಕ ಮಾನವರ ಕಾಲದಿಂದಲೇ ಚಿತ್ರಕಲೆಯು ಈ ಪ್ರದೇಶದಲ್ಲಿ ಕಂಡುಬಂದಿವೆ. ಕಾಲದಿಂದ ಕಾಲಕ್ಕೆ ಅವರ ರಚನಾ ವಿಧಾನ, ತಂತ್ರಗಾರಿಕೆ, ಶೈಲಿ, ಪರಿಕರಗಳಲ್ಲಿ ಬದಲಾವಣೆಗಳಾಗಿವೆ. ಅಲ್ಲದೆ ಚಿತ್ರರಚನಾ ಮಾಧ್ಯಮಗಳ ಆಯ್ಕೆಯಲ್ಲಿಯೂ ಬೇರೆ ಬೇರೆ ಮಾಧ್ಯಮಗಳು ಭಿತ್ತಿಚಿತ್ರ, ಜನಪದ ಚಿತ್ರಗಳು, ಕರಕುಶಲ ಕಲೆಗಳ ರಚನೆಯಲ್ಲಿ ಬಳಕೆಗೊಂಡಿದ್ದು ಕಂಡುಬರುತ್ತದೆ. ಜೊತೆಗೆ ವಸ್ತುವಿಷಯಗಳ ಆಯ್ಕೆಯ ಸಂದರ್ಭದಲ್ಲಿಯೂ ಆಯಾ ಕಾಲದಲ್ಲಿ ಬದಲಾವಣೆಯಾಗಿರುವುದನ್ನು ಗಮನಿಸಬಹುದು. ಅಲ್ಲದೇ ಶಿಕ್ಷಣ ಕ್ಷೇತ್ರದಲ್ಲಿ ಕಲೆಯ ಉಗಮ, ಕಲಾ ಶಿಕ್ಷಣದಿಂದ ಕಲೆಗಳಲ್ಲಿ ಕಂಡುಕೊಂಡಂತಹ ಬದಲಾವಣೆಗಳನ್ನು ತಿಳಿದುಕೊಳ್ಳಬಹುದು. ಈ ಕಲಾ ಶಿಕ್ಷಣಕ್ಕೆ ಕಲಾಶಾಲೆಗಳು, ಕಲಾವಿದರು ಹಾಗೂ ಪರಿಸರವೇ ಕಾರಣವೆಂದು ಹೇಳಬಹುದಾಗಿದೆ. ಪ್ರಸ್ತುತ ಅಧ್ಯಯನವು "ಬೆಳಗಾವಿ ಜಿಲ್ಲೆಯ ಚಿತ್ರಕಲೆ"ಯ ಕುರಿತದ್ದಾಗಿದೆ. ಅಂದರೆ ಬೆಳಗಾವಿ ಜಿಲ್ಲೆಯ ಸಾಂಸ್ಕೃತಿಕ ಪರಿಸರ, ಪ್ರಾಗೈತಿಹಾಸಿಕ ಮತ್ತು ಜನಪದ ಚಿತ್ರಕಲೆ, ಭಿತ್ತಿಚಿತ್ರಕಲೆ, ಕಲಾ ಶಾಲೆಗಳು, ಕಲಾ ಚಟುವಟಿಕೆಗಳು ಮತ್ತು ಕಲಾವಿದರ ಕುರಿತು ಚರ್ಚಿಸಲಾಗಿದೆ. ಈ ಪ್ರಬಂಧವು ಒಟ್ಟು ಏಳು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರತಿಯೊಂದು ಅಧ್ಯಾಯವು ಅದರ ವ್ಯಾಪ್ತಿಗೆ ಸಂಬಂಧಿಸಿದಂತೆ ಪ್ರಮುಖ ಅಂಶಗಳು ವಿವೇಚನೆಗೊಂಡಿವೆ.



ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನು ಕಟ್ಟಿಕೊಡಲಾಗಿದೆ.

ಎರಡನೆಯ ಅಧ್ಯಾಯವು ಬೆಳಗಾವಿ ಜಿಲ್ಲೆಯ ಭೌಗೋಳಿಕ ಹಿನ್ನೆಲೆ ಮತ್ತು ಸಾಂಸ್ಕೃತಿಕ ಪರಿಸರದ ಕುರಿತಾಗಿದ್ದು, ಅಧ್ಯಾಯನದಲ್ಲಿ ಬೆಳಗಾವಿ ಜಿಲ್ಲೆಯನ್ನು ಆಳ್ವಿಕೆ ಮಾಡಿದಂತಹ ಅರಸು ಮನೆತನಗಳು ಮತ್ತು ಸಾಮಂತರು ಸಾಂಸ್ಕೃತಿಕ ಕ್ಷೇತ್ರಕ್ಕೆ ಕೊಟ್ಟಂತಹ ಕೊಡುಗೆಗಳನ್ನು, ಸಾಂಸ್ಕೃತಿಕ ಪರಂಪರೆ ಚಿತ್ರಕಲೆಗೆ ಹೇಗೆ ಪೂರಕವಾದ ವಾತಾವರಣ ನಿರ್ಮಾಣ ಮಾಡಿತ್ತು ಎಂಬುದನ್ನು ಕಂಡುಕೊಳ್ಳಲಾಗಿದೆ. ಈ ಜಿಲ್ಲೆಯು ಪ್ರಾಚೀನ ಕಾಲದಿಂದ ಆಧುನಿಕ ಕಾಲಾವಧಿಯ ಇತಿಹಾಸವನ್ನು ಹೊಂದಿರುವ ಪ್ರಾಚೀನ ಮತ್ತು ಭವ್ಯ ಪರಂಪರೆಯ ನಾಡಾಗಿದೆ. ಇಂತಹ ಭವ್ಯ ಪರಂಪರೆಯನ್ನು ಹೊಂದಿರುವ ಬೆಳಗಾವಿ ಜಿಲ್ಲೆಯು ಎಲ್ಲಾ ಕ್ಷೇತ್ರಗಳಲ್ಲೂ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿರುವುದನ್ನು ಕಂಡುಕೊಳ್ಳಲಾಗಿದೆ. ಸಾಂಸ್ಕೃತಿಕ ಕರ್ನಾಟಕ ಆಗುವಲ್ಲಿ ಬೆಳಗಾವಿ ಜಿಲ್ಲೆಯ ಪಾತ್ರ ಮಹತ್ವವ್ವಾದದ್ದು. ಹಾಗೂ ಸಂಸ್ಕೃತಿಗೆ ನೀಡಿದ ಕೊಡುಗೆಯನ್ನು ಸ್ಥೂಲವಾಗಿ ಹೇಳಲಾಗಿದೆ.

ಅಧ್ಯಾಯ ಮೂರರಲ್ಲಿ ಬೆಳಗಾವಿ ಜಿಲ್ಲೆಯ ಪ್ರಾಗೈತಿಹಾಸಿಕ ಹಾಗೂ ಜನಪದ ಚಿತ್ರಕಲೆಯ ಕುರಿತು ವಿವೇಚಿಸಲಾಗಿದೆ. ಬೆಳಗಾವಿ ಜಿಲ್ಲೆಯು ಜನಪದ ಚಿತ್ರಕಲೆಯಿಂದ ರಾಷ್ಟ್ರಮಟ್ಟದಲ್ಲಿ ತನ್ನದೆ ಆದ ಛಾಪು ಮೂಡಿಸಿ, ಕಲಾ ಜಗತ್ತಿಗೆ ಒಂದು ವಿಶಿಷ್ಟವಾದ ಕೊಡುಗೆಯನ್ನು ಸಲ್ಲಿಸಿದೆ. ಈ ಮೂಲಕ ಬೆಳಗಾವಿಯು ಕಲೆಗಳ ಮುಖಾಂತರ ನಾಡಿಗೆ ರಾಷ್ಟ್ರಮಟ್ಟದ ಸ್ಥಾನಮಾನವನ್ನು ಕಲ್ಪಿಸಿರುವುದು ಗಮನಾರ್ಹ. ಇಲ್ಲಿರುವ ಜನಪದ ಕರಕುಶಲ ಕಲೆಯನ್ನು, ಜನಪದ ಶಿಲ್ಪಗಳ ಮೇಲಿರುವ ಚಿತ್ರಕಲೆಯನ್ನು ಗಮನಿಸಿದಾಗ ಅವುಗಳ ಉಗಮವು ಮಾನವನ ಅಗತ್ಯಗಳ ಅನ್ವೇಷಣೆಯಾದರೆ, ಅವುಗಳ ವಿಕಾಸವು ಮಾನವನ ಬುದ್ಧಿ ಬೆಳವಣಿಗೆಯನ್ನು ತಿಳಿಯಲು ಸಹಾಯಕವಾಗುತ್ತದೆ. ಇಂತಹ ಕರಕುಶಲ, ಜನಪದ ಹಿನ್ನೆಲೆಯ ಕಲೆಯನ್ನು ಇಲ್ಲಿರುವ ಕುಟುಂಬಗಳು ವೃತ್ತಿಯನ್ನಾಗಿಸಿಕೊಂಡಿರುವುದು ಕಂಡುಬರುತ್ತದೆ. ಈ ಕುಟುಂಬಗಳು ಪೂರ್ವಜರು ಬಿಟ್ಟು ಹೋಗಿರುವ ಕಲಾ ಶೈಲಿಯನ್ನು ಇಂದು ಉಳಿಸಿಕೊಂಡು ಬಂದಿರುವುದು ಪ್ರಶಂಸನೀಯ. ಆದರೆ ಈಗಿರುವ ಕಲಾ ಮನೆತನಗಳು ಪೂರ್ವಜರು ಬಿಟ್ಟು ಹೋದ ಕಲೆಗೆ ಇಂದಿನ ಆಧುನಿಕತೆಯ ಪ್ರಭಾವದಿಂದಾಗಿ ಕೆಲವೊಂದು ಬದಲಾವಣೆಯನ್ನು ಮಾಡಿಕೊಂಡಿರುವರು. ಹಾಗೆಯೇ ಆ ಕಲೆಯನ್ನು ಮುಂದುವರಿಕೊಂಡು ಹೋಗುತ್ತಿರುವುದನ್ನು ಕಂಡುಕೊಳ್ಳಲಾಗಿದೆ.

ನಾಲ್ಕನೆಯ ಅಧ್ಯಾಯವು ಬೆಳಗಾವಿ ಜಿಲ್ಲೆಯ ಭಿತ್ತಿಚಿತ್ರಕಲೆಯಾಗಿದೆ. ಭಿತ್ತಿಚಿತ್ರಕಲೆಯು ಆಯಾ ಮಾಧ್ಯಮದ, ಜನಸಮೂದಾಯದ, ಆಯಾ ಸಂಸ್ಕೃತಿಯ ಅಲ್ಲದೇ ನಾಗರಿಕತೆಯು ಬೆಳದುಬಂದಂತೆ ಅವರವರ ಅವಶ್ಯಕತೆಯ ಹಿನ್ನೆಲೆಯಲ್ಲಿ ಬೇರೆ ಬೇರೆಯಾಗಿ



ಬಳಕೆಗೊಂಡಿರುವುದು ತಿಳಿದುಬರುತ್ತದೆ. ಹಾಗೂ ಭಿತ್ತಿಚಿತ್ರಗಳಲ್ಲಿ ಬಳಸಿಕೊಂಡಿರುವ ವಸ್ತುವಿಷಯಗಳ ಬಗ್ಗೆ ಚರ್ಚಿಸಿ, ಇಲ್ಲಿರುವಂತಹ ಭಿತ್ತಿಚಿತ್ರಗಳಲ್ಲಿ ಧಾರ್ಮಿಕ, ಸಾಮಾಜಿಕ, ರಾಜಕೀಯ, ಸೌಂದರ್ಯ ಪ್ರತೀಕ ವಾಗಿರುವಂತಹ ಭಿತ್ತಿಚಿತ್ರಗಳನ್ನು ಹೆಚ್ಚಾಗಿ ಇರುವುದನ್ನು ಕಂಡುಕೊಳ್ಳಲಾಗಿದೆ. ಈ ಭಿತ್ತಿಚಿತ್ರಗಳನ್ನು ಗೋಡೆಯ ಮೇಲೆ ರಚಿಸಲಾಗಿದೆ. ಆದರೆ ಇಂತಹ ವೈಭವಯುಕ್ತ ಭಿತ್ತಿಚಿತ್ರಗಳು ನಶಿಸಿ ಹೋಗುವಂತಹ ಸ್ಥಿತಿಯಲ್ಲಿವೆ. ಅವುಗಳನ್ನು ಸಂರಕ್ಷಿಸುವಂತಹ ಜವಾಬ್ದಾರಿ ನಮ್ಮೆಲ್ಲರಮೇಲಿದೆ ಎಂದು ಹೇಳಬಹುದು.

ಅಧ್ಯಾಯ ಐದರಲ್ಲಿ ಬೆಳಗಾವಿ ಜಿಲ್ಲೆಯ ಹಿರಿಯ ಕಲಾವಿದರ ಕುರಿತು ಚರ್ಚಿಸಲಾಗಿದೆ. ಕಲೆಯ ಭವ್ಯ ಸಂಪತ್ತನ್ನು ಹೊಂದಿದಂತ ಈ ಜಿಲ್ಲೆಯಲ್ಲಿ ಕಲಾವಿದರ ಪಾತ್ರ ಮಹತ್ವದ್ದಾಗಿದೆ. ಕಲಾವಿದರು ಕಲಾ ಕ್ಷೇತ್ರಕ್ಕೆ ಸಲ್ಲಿಸಿದಂತ ಸೇವೆ ಮತ್ತು ನೀಡಿದಂತಹ ಕೊಡುಗೆ ಅಪಾರವಾದುದು. ಇಂತಹ ಕೊಡುಗೆಯನ್ನು ನೀಡಿರುವಂತಹ ಹಿರಿಯ ಕಲಾವಿದರ ಜೀವನ ಮತ್ತು ಕಲಾ ಸಾಧನೆಯನ್ನು ಚರ್ಚಿಸಲಾಗಿದೆ. ಈ ಕಲಾವಿದರ ಕಲಾಕೃತಿಗಳನ್ನು ಗಮನ್ನಿಸಿದಾಗ ಅವರ ಕಲಾ ನೈಪುಣ್ಯತೆಯು ಪ್ರಶಂಸನೀಯವಾಗಿದೆ. ಇಂತಹ ಕಲಾವಿದರ ಕಲಾಕೃತಿಗಳಿಂದ ಬೆಳಗಾವಿ ಜಿಲ್ಲೆಗೆ ರಾಷ್ಟ್ರ ಮತ್ತು ಅಂತರಾಷ್ಟ್ರಮಟ್ಟದ ಖ್ಯಾತಿ ದೊರೆತಿದೆ ಎಂದರೆ ಅತಿಶಯೋಕ್ತಿಯಾಗಲಾರದು. ಪ್ರಸ್ತುತದಲ್ಲಿರುವ ಕಲಾವಿದರು ಕಲಾಕ್ಷೇತ್ರದ ಬೆಳವಣಿಗೆಗಾಗಿ ಕಲೆಗೆ ಸಂಬಂಧಿಸಿದ ಹಲವಾರು ಸಂಘ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಕಲೆಯ ಬೆಳವಣಿಗೆಗಾಗಿ ಪ್ರೋತ್ಸಾಹಿಸುತ್ತಿವೆ. ಆದರೆ ಬೆಳಗಾವಿ ಜಿಲ್ಲೆಯಲ್ಲಿ ಬೆಳಕಿಗೆ ಬರಬೇಕಾದ ಇನ್ನೂ ಹಲವಾರು ಯುವ ಕಲಾವಿದರು ಇದ್ದಾರೆ. ಹಾಗಾಗಿ ಅವರಿಗೆ ಸೂಕ್ತ ಅವಕಾಶಗಳು ದೊರೆಯದ ಕಾರಣ ಅವರ ಪ್ರತಿಭೆ ಬೆಳಕಿಗೆ ಬಾರದೆ ಹೋಗಿರುವುದು ಖೇದದ ಸಂಗತಿ. ಇಂತಹ ಯುವ ಕಲಾವಿದರಿಗೆ ಅವಕಾಶಗಳು ದೊರಕಿಸಿದರೆ ಅವರ ಪ್ರತಿಭೆಯು ಬೆಳಕಿಗೆ ಬಂದು ಬೆಳಗಾವಿ ಜಿಲ್ಲೆಯ ಕಲಾ ಸಂಪತ್ತು ಇನ್ನೂ ವೃದ್ಧಿಯಾಗಬಹುದು ಎಂಬುದನ್ನು ವ್ಯಕ್ತಪಡಿಸಲಾಗಿದೆ.

ಆರನೆಯ ಅಧ್ಯಾಯವು ಬೆಳಗಾವಿ ಜಿಲ್ಲೆಯ ಕಲಾಶಿಕ್ಷಣ ಸಂಸ್ಥೆಗಳಿಗೆ ಸಂಬಂಧಿಸಿದೆ. ಈ ಅಧ್ಯಯನದಲ್ಲಿ ಕಲಾ ಶಾಲೆಗಳು, ಶಿಕ್ಷಕರು, ವಿದ್ಯಾರ್ಥಿಗಳು, ಕಲಾಶಿಕ್ಷಣ ಮತ್ತು ತರಗತಿಗಳ ಕುರಿತು ಚರ್ಚಿಸಲಾಗಿದೆ. ಚಿತ್ರಕಲೆಯ ಪ್ರಾಚೀನ ಇತಿಹಾಸವಿರುವ ಬೆಳಗಾವಿ ಜಿಲ್ಲೆಯಲ್ಲಿ ಉಳಿದ ಜಿಲ್ಲೆಗಳಿಗಿಂತ ಹೆಚ್ಚಾಗಿ ಚಿತ್ರಕಲಾ ಶಾಲೆಗಳು ಕಂಡುಬರುತ್ತವೆ. ಈ ಪ್ರದೇಶದಲ್ಲಿ ಕಲಾಪ್ರಿಯರು ಇರುವುದೇ ಇದಕ್ಕೆ ಕಾರಣವಾಗಿರಬಹುದು. ಚಿತ್ರಕಲಾ ಕ್ಷೇತ್ರದ ಬೆಳವಣಿಗೆಗೆ ಈ ಕಲಾಶಾಲೆಗಳ ಕೊಡುಗೆ ಅನನ್ಯವಾದದ್ದು. ಆದರೆ ಇಲ್ಲಿರುವ ಕಲಾ ಶಾಲೆಗಳಲ್ಲಿ ಕೆಲವು ಮಾತ್ರ ಸರ್ಕಾರದಿಂದ ಅನುದನವನ್ನು ಪಡೆದುಕೊಂಡಿವೆ. ಹಾಗಾಗಿ ಕೆಲವು ಚಿತ್ರಕಲಾ ಶಾಲೆಗಳ ಸ್ಥಿತಿಗತಿ ಸಾಧಾರಣವಾಗಿದೆ. ಆದಕ್ಕಾಗಿ ಸರ್ಕಾರ ಇಲ್ಲಿಯ



ಕಲಾಶಾಲೆಗಳ ಬಗ್ಗೆ ಗಮನಹರಿಸಿ, ಕುಂದುಕೊರತೆಗಳನ್ನು ನೀಗಿಸಿದರೆ ಇನ್ನೂ ಉತ್ತಮ ಮಟ್ಟದಲ್ಲಿ ಕಲೆಯ ಬೆಳವಣಿಗೆ ಆಗಬಹುದು. ಇಲ್ಲದಿದ್ದಲ್ಲಿ ಮುಂದಿನ ಪೀಳಿಗೆಯವರು ಕಲಾ ಶಿಕ್ಷಣಕ್ಕೆ ಬೇರೆಡೆ ಹೋಗುವ(ಹೊರ ರಾಜ್ಯ) ಸಾಧ್ಯತೆಯಿದೆ. ಸರ್ಕಾರವು ಸೂಕ್ತ ಕ್ರಮವನ್ನು ತೆಗೆದುಕೊಂಡರೆ ಕಲಾವಿದ್ಯಾರ್ಥಿಗಳು ಹೊರ ರಾಜ್ಯಗಳಿಗೆ ಹೋಗುವುದನ್ನು ತಪ್ಪಿಸಬಹುದು. ಒಟ್ಟಾರೆ ಈ ಕಲೆಯ ಶ್ರೀಮಂತ ಪರಂಪರೆಯನ್ನು ಉಳಿಸಿ ಬೆಳೆಸಿಕೊಂಡು ಹೋಗುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಕೇಂದ್ರ ಮತ್ತು ರಾಜ್ಯ ಸರಕಾರ, ಸಾರ್ವಜನಿಕರು, ಸಂಘ, ಸಂಸ್ಥೆಗಳು, ಕಲಾಸಕ್ತರು ಕಲೆಯ ಉಳಿವಿಕೆಗಾಗಿ ಚಿಂತಿಸಬೇಕಿದೆ. ಇವೆಲ್ಲರ ಸಹಕಾರ ಸಿಕ್ಕರೆ ಪ್ರಾಚೀನ ಕಾಲದಿಂದಲೂ ಉಳಿದುಕೊಂಡು ಬಂದಂತಹ ಈ ಕಲೆ ಇನ್ನೂ ಸಮೃದ್ಧಿ ಹೊಂದಬಹುದು. ಹಾಗೂ ಅವಕಾಶ ವಂಚಿತರಾಗಿ ಉಳಿದಿರುವ ಇನ್ನೂ ಹಲವಾರು ಕಲಾವಿದರು ಬೆಳಕಿಗೆ ಬರಲು ಸಾಧ್ಯವಾಗಬಹುದು. ಅಲ್ಲದೇ ಪ್ರಾಗೈತಿಹಾಸಿಕ ಮತ್ತು ಜನಪದ ಕರಕುಶಲ ಕಲೆ, ಭಿತ್ತಿಚಿತ್ರಕಲೆ, ಕಲಾವಿದರ, ಕಲಾ ಶಿಕ್ಷಣ ಸಂಸ್ಥೆಗಳು ಒಟ್ಟಾರೆ ಹೀಗೆ ಕಲಾ ಕ್ಷೇತ್ರಕ್ಕೆ ಸರ್ಕಾರ ಸಹಕಾರ, ಪ್ರೋತ್ಸಾಹಿಸಿದರೆ ಬೆಳಗಾವಿ ಜಿಲ್ಲೆಗೆ ಇರುವಂತಹ ಕೀರ್ತಿಯನ್ನು ಇನ್ನಷ್ಟು ಹೆಚ್ಚಿಸಬಹುದು. ಹಾಗೂ ಕಲೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡು ಜೀವನ ನಡೆಸುತ್ತಿರುವ ಕುಟುಂಬಗಳ ಆರ್ಥಿಕ ಸ್ಥಿತಿ ಉತ್ತಮಗೊಳ್ಳಬಹುದು. ಅಲ್ಲದೇ ಈ ವೃತ್ತಿಯ ಕಲಾವಿದರು ಕಲೆಯ ಬೆಳವಣಿಗೆಗಾಗಿ ಇನ್ನಷ್ಟು ಶ್ರಮಿಸುವರು.

ಅಧ್ಯಾಯ ಏಳರಲ್ಲಿ ಈ ಅಧ್ಯಯನದಿಂದ ಕಂಡುಕೊಂಡತಹ ಫಲಿತಗಳ ಕುರಿತಾಗಿದೆ.

**ಅಧ್ಯಯನದ ಫಲಿತಗಳು :**

೧. ಬೆಳಗಾವಿ ಜಿಲ್ಲೆಯ ಪರಿಸರವು ಚಿತ್ರಕಲೆಗೆ ಪೂರಕವಾದ ವಾತಾವರಣ ನಿರ್ಮಾಣ ಮಾಡಿದ್ದು ಕಂಡುಕೊಳ್ಳಲಾಗಿದೆ.

೨. ಪ್ರಾಗೈತಿಹಾಸಿಕ ಚಿತ್ರಗಳಲ್ಲಿ ಗವಿವರ್ಣ ಚಿತ್ರಗಳು ಬೇರೆ ಬೇರೆ ಕಾಲದಲ್ಲಿ ರಚನೆಗೊಂಡಿರುವುದರಿಂದ ಶೈಲಿಯಲ್ಲಿ ವ್ಯತ್ಯಾಸವಿರುವುದನ್ನು ಈ ಅಧ್ಯಾಯನದಿಂದ ತಿಳಿದುಕೊಳ್ಳಲಾಗಿದೆ.

೩. ಜನಪದರ ಕಲೆಗಳೇ ಸಂಸ್ಕಾರಗೊಳ್ಳುತ್ತಾ ಶಿಷ್ಟ ರೂಪ ಪಡೆದುಕೊಂಡಿದ್ದು ಹಾಗೂ ಧಾರ್ಮಿಕ, ಸಾಮಾಜಿಕ, ಸೌಂದರ್ಯ, ಮನರಂಜನೆಯಾಗಿರುವಂತ ಜನಪದ ಚಿತ್ರಕಲೆ ಇಂದು ಆಧುನಿಕ ಪ್ರಭಾವದಿಂದ ಹಲವಾರು ಬದಲಾಣೆಗಳನ್ನು ಕಂಡುಕೊಂಡಿದೆ.

೪. ಜನಪದ ಕಲೆಗಳಲ್ಲಿ ಒಂದಾದ ತೊಗಲು ಗೊಂಬೆಯಾಟವು ಇಂದು ಸಿನಿಮಾಗಳ



ಪ್ರಭಾವದಿಂದ ನಶಿಸಿ ಹೋಗುವಂತ ಹಂತದಲ್ಲಿರುವುದನ್ನು ಈ ಅಧ್ಯಾಯನದಿಂದ ತಿಳಿದುಕೊಳ್ಳಲಾಗಿದೆ.

೫. ಆಧುನಿಕ ಪ್ರಭಾವದಿಂದ ಜನಪದ ಚಿತ್ರಕಲೆಯಾದ ಮದರಂಗಿ ಚಿತ್ರಕಲೆಯು ಒಂದು ಫ್ಯಾಶನ್ ಆಗಿ, ನಗರಗಳಲ್ಲಿ ತುಂಬಾ ಬೇಡಿಕೆ ಇರುವುದರ ಜೊತೆಗೆ ಈ ಚಿತ್ರಕಲೆಯು ಒಂದು ಉದ್ಯೋಗವಾಗಿ ಬದಲಾವಣೆಯಾಗಿರುವುದು ಕಂಡುಕೊಳ್ಳಲಾಗಿದೆ.

೬. ಜನಪದ ಕಲೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡು ಬದುಕುತ್ತಿರುವಂತಹ ಅನೇಕ ಕುಟುಂಬಗಳು ಬೆಳಗಾವಿ ಜಿಲ್ಲೆಯಲ್ಲಿ ಇರುವುದು ಕಂಡುಬಂದಿದ್ದು, ಈ ಕುಟುಂಬಗಳಿಗೆ ಸರ್ಕಾರದಿಂದ ಅಥವಾ ಸಂಘ ಸಂಸ್ಥೆಗಳಿಂದ ಯಾವುದೇ ಸೌಲಭ್ಯ, ಸಹಕಾರಗಳು ದೊರಕದೆ ಇರುವುದನ್ನು ಮನಗಾಣಬಹುದು.

೭. ಈ ಚಿತ್ರಗಳಲ್ಲಿ ಪ್ರಮುಖವಾಗಿ ಎದ್ದು ಕಾಣುವ ಅಂಶಗಳೆಂದರೆ ಭಿತ್ತಿಚಿತ್ರಗಳ ಆಕಾರಗಳು ಚಪ್ಪಟೆಯಾಗಿದ್ದು, ದುಂಡುತನದ ಪ್ರಯತ್ನವನ್ನು ನೆರಳು ಬೆಳಕಿನ ವಿನ್ಯಾಸದಲ್ಲಿ ಮಾಡಲಾಗಿದೆ. ತೆಳ್ಳನೆಯ ದೇಹದಾಕೃತಿ, ಚಿಕ್ಕನಡು, ಆಕರ್ಷಕವಾದ ಭಂಗಿಗಳು, ಉಜ್ವಲ ವರ್ಣಗಳ ವೈವಿಧ್ಯತೆ, ಪರಸ್ಪರ ಹೊಂದಾಣಿಕೆ, ಸಂಯೋಜನೆಗಳು ಇವು ಕಲಾವಿದನ ನೈಪುಣ್ಯತೆಗೆ ಸಾಕ್ಷಿಯಾಗಿವೆ.

೮. ಅಳಿದು ಹೋದ ಒಂದು ಸಂಪ್ರದಾಯವನ್ನು ಚಿತ್ರಗಳು ಪ್ರತಿನಿಧಿಸುತ್ತವೆ. ಇಂದಿನವರೆಗೆ ಪೂರ್ವಜರ ಪರಿಚಯವಾಗುವಲ್ಲಿ ಈ ಭಿತ್ತಿಚಿತ್ರಗಳು ಪ್ರಮುಖವಾದ ದೃಶ್ಯ ಮಾಧ್ಯಮವಾಗಿವೆ.

೯. ಈ ಭಿತ್ತಿಚಿತ್ರಗಳು ಹಲವು ವೈಶಿಷ್ಟ್ಯಗಳಿಂದ ಕೂಡಿದ್ದು, ಬೆಳಗಾವಿ ಜಿಲ್ಲೆಯ ಕಲಾ ಇತಿಹಾಸದಲ್ಲಿ ತನ್ನದೇ ಒಂದು ಪ್ರತ್ಯೇಕವಾದ ಛಾಪನ್ನು ಮೂಡಿಸಿವೆ.

೧೦. ಪ್ರಸ್ತುತ ಭಿತ್ತಿಚಿತ್ರಗಳನ್ನು ಸಮ್ಮಿಶ್ರಣ ಶೈಲಿಗಳಲ್ಲಿ ರಚನೆಗೊಂಡಿವೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಂಡಿದೆ.

೧೧. ಈ ಅಧ್ಯಯನವನ್ನು ಕಲಾತ್ಮಕ ಮತ್ತು ಐತಿಹಾಸಿಕ ಹೀಗೆ ಎರಡನ್ನು ಸಮಾನ ದೃಷ್ಟಿಯಿಂದ ನೋಡಲಾಗಿದೆ. ಇಲ್ಲಿ ಚಿತ್ರಗಳು ಕಲಾತ್ಮಕ ಅಂಶಗಳಂತೆ ಐತಿಹಾಸಿಕವಾಗಿಯು ಕೂಡ ಹೆಚ್ಚಿನ ಮಹತ್ವ ಪಡೆದಿದ್ದು, ನಾಶದ ಹಾದಿಯಲ್ಲಿರುವ ಇಂತಹ ಕಲಾಸಂಪತನ್ನು ನಮ್ಮ ಮುಂದಿನ ಜನಾಂಗಕ್ಕೆ ಉಳಿಸುವಂತೆ ಮಾಡುವುದು ಇಂದು ಪ್ರಮುಖವಾದ ಕಾರ್ಯವಾಗಿದೆ.

೧೨. ಬೆಳಗಾವಿ ಜಿಲ್ಲೆಯಲ್ಲಿರುವ ಹಿರಿಯ ಕಲಾವಿದರ ಕಲಾಕೃತಿಗಳಲ್ಲಿ ತಮ್ಮ



ಭಾವಾಭಿವ್ಯಕ್ತಿಯನ್ನು ಸೃಜನಶೀಲತೆಯೊಂದಿಗೆ ಬೆರೆಸಿ ಚಿತ್ರಿಸಿರುವುದು ಸ್ಪಷ್ಟವಾಗಿ ಕಂಡುಬರುತ್ತಿದ್ದು, ಇದು ಅವರ ಕಲಾಮನೋಭಾವನೆಯನ್ನು ತೋರಿಸುವಂತಹದನ್ನು ಕಂಡುಕೊಳ್ಳಬಹುದು.

೧೩. ಇಲ್ಲಿರುವ ಕಲಾವಿದರ ಕಲಾಕೃತಿಗಳನ್ನು ವಿಮರ್ಶಿಸಿದಾಗ ಅವರು ಒಂದೇ ಶೈಲಿಗೆ ಅಂಟಿಕೊಂಡು ಕಲಾಕೃತಿಗಳನ್ನು ರಚಿಸಿಲ್ಲ ಎಂಬುದನ್ನು ಮನಗಾಣಬಹುದು.

೧೪. ಅಧ್ಯಯನದ ವ್ಯಾಪ್ತಿಗೆ ಸಂಬಂಧಿಸಿದಂತೆ ಜಿಲ್ಲೆಯ ಹಿರಿಯ ಕಲಾವಿದರು ಹೆಚ್ಚಾಗಿ ಎಲ್ಲಾ ಮಾಧ್ಯಮಗಳಲ್ಲಿ ಕಲಾಕೃತಿಗಳನ್ನು ರಚಿಸಿರುವುದನ್ನು ಕಾಣಬಹುದು.

೧೫. ಬೆಳಗಾವಿ ಜಿಲ್ಲೆಯಲ್ಲಿ ಇತರೆ ಜಿಲ್ಲೆಗಳಿಗಿಂತ ಹೆಚ್ಚಾಗಿ ಕಲಾಶಿಕ್ಷಣ ಸಂಸ್ಥೆಗಳು ಇರುವುದು ಕಾಣಬಹುದು. ಆದರೆ ಅವುಗಳಲ್ಲಿ ಅನುದಾನ ರಹಿತ ಕಲಾ ಸಂಸ್ಥೆಗಳು ಬಹುಸಂಖ್ಯೆಯಲ್ಲಿವೆ.

೧೬. ಇಲ್ಲಿರುವಂತಹ ಅನುದಾನ ರಹಿತ ಕಲಾ ಸಂಸ್ಥೆಗಳು ಅಗತ್ಯ ಸೌಲಭ್ಯಗಳ ಕೊರತೆಯಿಂದಾಗಿ ಕುಂಟಿತಗೊಳ್ಳುತ್ತಾ, ಕೆಲವೊಂದು ಸ್ಥಗಿತಗೊಂಡಿರುವುದನ್ನು ಕಂಡುಕೊಳ್ಳಬಹುದು.

೧೭. ಅನಾನುಕೂಲ ಸ್ಥಿತಿಯಲ್ಲಿರುವ ಕಲಾ ಸಂಸ್ಥೆಗಳಿಗೆ ಸರ್ಕಾರವು ಅಗತ್ಯ ಸೌಲಭ್ಯಗಳನ್ನು ಕಲ್ಪಿಸಿದರೆ ಅವುಗಳ ಸ್ಥಿತಿ ಉತ್ತಮಗೊಳ್ಳುವುದು, ಕಲಾಶಿಕ್ಷಣಕ್ಕಾಗಿ ವಿದ್ಯಾರ್ಥಿಗಳು ಹೊರ ರಾಜ್ಯಗಳಿಗೆ ಹೋಗುವುದನ್ನು ತಪ್ಪಿಸಬಹುದು.

ಇದು ಕಾಲಮಿತಿ ಅಧ್ಯಯನವಾಗಿರುವುದರಿಂದ ಈ ಅಧ್ಯಯನವು ಒಂದು ಪಕ್ಷಿನೋಟದ ಚಿತ್ರಣವನ್ನು ಕೊಟ್ಟಿದೆ. ಸಮಯದ ಮಿತಿಯಲ್ಲಿ ಗಮನಕ್ಕೆ ಬಂದ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಗಮನಕ್ಕೆ ಬಾರದ ಇನ್ನೂ ಹೊಸ ಹೊಸ ಅಂಶಗಳನ್ನು ಅಧ್ಯಾಯನಕಾರರಿಗೆ ಹುಡುಕಲು ಅವಕಾಶವಿದೆ.

* * * * *



## ಗ್ರಂಥ ಋಣ


೦೧. **ಆಲೇಖ್ಯ** — ಡಾ. ಅ.ಲ. ನರಸಿಂಹನ್
ಸಂಯೋಜಿತ, ಸಮಕಾಲೀನ
ಕಲಾವಿದರ ಸಂಸ್ಥೆ, ಬೆಂಗಳೂರು
೧೯೯೯

೦೨. **ಇತಿಹಾಸ ಪೂರ್ವ ಕಲೆ** — ಎನ್. ಮರಿಶಾಮಾಚಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು – ೨೦೦೨

೦೩. **ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ** — ಡಾ. ಯಾದಪ್ಪ ಪರದೇಶಿ
ಅ.ಪ್ರ. ಪಿಹೆಚ್.ಡಿ ಮ.ಪ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೧

೦೪. **ಕರ್ನಾಟಕದಲ್ಲಿ ಚಿತ್ರಕಲೆ** — ಡಾ. ಕೆ. ಶಿವರಾಮ ಕಾರಂತ.
ಪ್ರಸಾರಾಂಗ ಮೈ.ವಿ.ವಿ. ಮೈಸೂರು – ೧೯೭೨

೦೫. **ಕಲೆಗಳು – ೬೪** — ಎಂ. ಶ್ರೀಧರಮೂರ್ತಿ.
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು – ೧೯೭೪

೦೬. **ಕನ್ನಡ ರಂಗಭೂಮಿ ನಡೆದುಬಂದ ದಾರಿ** — ಬಿ.ಪುಟ್ಟಸ್ವಾಮಯ್ಯ
ಐ.ಬಿ.ಎಚ್. ಬೆಂಗಳೂರು – ೧೯೭೬

೦೭ **ಕಲಾನುಭವ** — ವೀ. ಸೀತಾರಾಮಯ್ಯ
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು – ೧೯೭೬

೦೮. **ಕಲೆ ಮತ್ತು ಹಬ್ಬ** — ಎಸ್.ಕೆ. ಹೂಗಾರ
ಪಠ್ಯಪುಸ್ತಕ ನಿರ್ದೇಶನಾಲಯ,
ಕ.ವಿ.ವಿ. ಧಾರವಾಡ – ೧೯೭೭

೦೯. **ಕರ್ನಾಟಕದ ರಂಗಭೂಮಿ** — ಎಚ್.ಕೆ. ರಂಗನಾಥ
ಸುರುಚಿ ಪ್ರಕಾಶನ ಸರಸ್ವತಿಪುರಂ
ಮೈಸೂರು – ೧೯೭೮

೧೦. **ಕಲೆಯ ದರ್ಶನ** — ಡಾ. ಕೆ. ಶಿವರಾಮ ಕಾರಂತ.
ರಾಜಲಕ್ಷ್ಮಿ ಪ್ರಕಾಶನ ಬೆಂಗಳೂರು – ೧೯೮೨




೧೧. **ಕರ್ನಾಟಕದ ಗತವೈಭವ** ಆಲೂರು ವೆಂಕಟರಾಯ
ವಿಶ್ವ ಕನ್ನಡ ಸಮ್ಮೇಳನ,
ಬೆಂಗಳೂರು – ೧೯೮೩

೧೨. **ಕರ್ನಾಟಕದ ಭಿತ್ತಿ ಚಿತ್ರಗಳು** ಬಿ.ವಿ.ಕೆ. ಶಾಸ್ತ್ರಿ
ಕರ್ನಾಟಕ ಲಲಿತಕಲಾ ಅಕಾಡೆಮಿ,
ಬೆಂಗಳೂರು – ೧೯೮೩

೧೩. **ಕಲೆ ಅನುಭವ ಮತ್ತು ಅನುಭಾವ** ಚಂದ್ರಕಾಂತ ಕುಸನೂರು
ಮಾಲಗತ್ತಿ ಪ್ರಿಂಟಿಂಗ್ ಆ್ಯಂಡ್
ಪಬ್ಲಿಷಿಂಗ್ ಹೌಸ್, ಬೆಳಗಾವಿ – ೧೯೯೦

೧೪. **ಕರ್ನಾಟಕ ಜನಪದ ಚಿತ್ರಕಲೆ** ಡಾ. ಎಸ್.ಸಿ. ಪಾಟೀಲ.
ವೀರಶೈವ ಅಧ್ಯಯನ ಸಂಸ್ಥೆ ಜಗದ್ಗುರು
ತೋಂಟದಾರ್ಯ ಸಂಸ್ಥಾನ ಮಠ ಗದಗ – ೧೯೯೩

೧೫. **ಕರ್ನಾಟಕ ಪ್ರಾಗೈತಿಹಾಸ ಕಾಲದ ಕಲೆ** ಪ್ರ.ಸಂ. ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು – ೧೯೯೪

೧೬. **ಕಿನ್ನಾಳದ ಗೊಂಬೆಗಳು** ಗವಿಸಿದ್ಧ. ಎನ್. ಬಳ್ಳಾರಿ
ಗುಲ್ಬರ್ಗಾ ವಿ.ವಿ. ಗುಲ್ಬರ್ಗಾ
೧೯೯೬

೧೭. **ಕರ್ನಾಟಕ ಸಂಸ್ಕೃತಿ ಸಮೀಕ್ಷೆ** ಡಾ. ಹೆಚ್. ತಿಪ್ಪೇರುದ್ರಸ್ವಾಮಿ.
ಪಿ.ವಿ.ಕೆ ಮೂರ್ತಿ ಪ್ರಕಾಶನ ಮೈಸೂರು – ೧೯೯೮

೧೮. **ಕಿತ್ತೂರು ಇತಿಹಾಸ** ಜಿ.ವ್ಹಿ. ಕೊಂಗವಾಡ
ಜಿಲ್ಲಾಧಿಕಾರಿಗಳು ಬೆಳಗಾವಿ ಜಿಲ್ಲೆ
೧೯೯೮

೧೯. **ಕರ್ನಾಟಕದ ಚಿತ್ರಕಲೆಯಲ್ಲಿ ಬಣ್ಣದ ಬಳಕೆ** ಕೆ.ವಿ. ಕಾಳೆ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೦

೨೦. **ಕರ್ನಾಟಕದ ಪುರಾತತ್ವ ನೆಲೆಗಳು** ಕೆ.ಬಿ. ಶಿವತಾರಕ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೧

೨೧. **ಕರಕುಶಲ ಕಲೆಗಳು** — ಸಂ. ಡಾ. ಕರೀಗೌಡ ಬೀಚನಳ್ಳಿ
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೨. **ಕಲಾ ಚರಿತ್ರೆ** — ಎನ್. ಮರಿಶಾಮಾಚಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,
ಬೆಂಗಳೂರು – ೨೦೦೨

೨೩. **ಕಲಾವಿದ ಎಂ.ಎ. ಚೆಟ್ಟಿಯವರ ಜೀವನ, ಕಲಾಕೃತಿಗಳು** — ಡಾ. ಲಕ್ಷ್ಮೀದೇವಿ ಗಾವಾಯಿ
ವೀರಶೈವ ಅಧ್ಯಯನ ಅಕಾಡೆಮಿ,
ಶ್ರೀ ನಾಗನೂರು ರುದ್ರಾಕ್ಷಿ ಮಠ
ಬೆಳಗಾವಿ – ೨೦೦೩

೨೪. **ಕಲಾವಿದನ ನೆನಪುಗಳು** — ಪಿ.ಆರ್. ತಿಪ್ಪೇಸ್ವಾಮಿ

೨೫. **ಕರ್ನಾಟಕ ಚರಿತ್ರೆ** — ಪ್ರೊ. ಬಿ. ಶೇಕ್ ಅಲಿ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೬. **ಗುರುದೇವ** — ಪ್ರಸಂ. ವೀರಯ್ಯ ಸ್ವಾಮಿಗಳು
ಶ್ರೀ ಭವಾನಿ ಆಫ್ಸೆಟ್ ಪ್ರಿಂಟರ್ಸ್,
ಹುಬ್ಬಳ್ಳಿ – ೨೦೦೦

೨೭. **ಚಿತ್ರಕಲಾ ಪ್ರವೇಶ** — ಗೋ.ಶ್ರೀ. ಹುದ್ದಾರ
ಸಮಾಜ ಪುಸ್ತಕಾಲಯ,
ಧಾರವಾಡ – ೧೯೭೪

೨೮. **ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು** — ಪ್ರಸಂ. ಪ್ರಾ. ಸುರೇಶ. ಡಿ. ಹಾಲಭಾವಿ, ಸಂ. ಡಾ. ಎಸ್.ಸಿ. ಪಾಟೀಲ
ರೇಣುಕಾ ಮುದ್ರಣಾಲಯ, ಧಾರವಾಡ
೧೯೯೫

೨೯. **ಚಿದ್ಘನ ದೀಪ್ತಿ** — ವೀರಯ್ಯ ಸ್ವಾಮಿಗಳು
ಶ್ರೀ ಸದ್ಗುರು ಶಿವಾನಂದ ಭಾರತಿ ಅಧ್ಯಾತ್ಮ
ತತ್ವ ಪ್ರಕಾಶನ, ಬೆಳಗಾಂವ – ೧೯೯೬

೩೦. **ಚೈತನ್ಯ** — ಪ್ರಸಂ. ಎಸ್.ಎ. ಭೋಜ
ಮಾಲಗತ್ತಿ ಆಫ್ಸೆಟ್ ಪ್ರಿಂಟರ್ಸ್
ಮತ್ತು ಪ್ರಕಾಶಕರು, ಬೆಳಗಾವಿ – ೧೯೯೭



೩೧. **ಚಿತ್ರಕಲಾ ಪ್ರಪಂಚ** — ಪಿ.ಆರ್. ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

೩೨. **ಜಾನಪದ ಕಲೆ, ಚಿತ್ರಕಲೆ** — ಡಾ. ಎಸ್.ಸಿ. ಪಾಟೀಲ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು – ೧೯೯೫

೩೩. **ಧಾರವಾಡ, ಬೆಳಗಾವಿ, ಬಿಜಾಪುರ, ಕಾನಾಡಾ** — ವೆಂಕಟಂ ಗೋಕಟ್ಟೀ
ಜಿಲ್ಲೆಗಳ ಗೆಜಿಟಿಯರ್, ಏಶಿಯನ್
ಎಜುಕೇಶನಲ್ ಸರ್ವಿಸಸ್, ಹೊಸ ದೆಹಲಿ – ೧೯೮೪

೩೪. **ದೃಶ್ಯಕಲೆಯ ಆರಾಧಕರು** — ಪ್ರಸಂ. ಬಿ.ವಿ.ಕೆ. ಶಾಸ್ತ್ರೀ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು – ೧೯೯೦

೩೫. **ಧಾರವಾಡ ಜಿಲ್ಲಾ ಗೆಜಿಟಿಯರ್** — ಸಂ. ಸೂರ್ಯನಾಥ. ಯು. ಕಾಮತ
ಕರ್ನಾಟಕ ಸರ್ಕಾರ, ಬೆಂಗಳೂರು
೧೯೯೫

೩೬. **ದೃಶ್ಯಕಲಾ** — ಎನ್. ಮರಿಶಾಮಾಚಾರ್
ಸಿ.ಎಂ.ಎನ್. ಪ್ರಕಾಶನ, ಜಯನಗರ
ಬೆಂಗಳೂರು – ೨೦೦೧

೩೭. **ನಮ್ಮ ಕರಕುಶಲ ವಸ್ತುಗಳು** — ಎಂ.ವಿ. ನಾರಾಯಣರಾವ್
ನ್ಯಾಶನಲ್ ಬುಕ್ ಟ್ರಸ್ಟ್ ಇಂಡಿಯಾ
ಹೊಸ ದೆಹಲಿ – ೧೯೯೭

೩೮. **ನಿಜದ ನೆಲೆ** — ಸಂ. ಡಾ. ಎಸ್.ಸಿ. ಪಾಟೀಲ
ಡಾ. ಬಿ.ಕೆ. ಹಿರೇಮಠ ಅಭಿನಂದನ ಗ್ರಂಥ
ಪ್ರ.ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ
ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟ

೩೯. **ನಿಪ್ಪಾಣಿ ವಾಡೆಯ ಭಿತ್ತಿಚಿತ್ರಕಲೆ** — ಬಿ.ಎಂ. ಪಾಟೀಲ
ಅ.ಪ್ರ, ಎಂ.ಫಿಲ್. ಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೭

೪೦. **ಭಾರತೀಯ ಚಿತ್ರಕಲೆ** — ಆರ್.ಜಿ. ರಾಯಕರ್
ಕರ್ನಾಟಕ ಲಲಿತಕಲಾ ಅಕಾಡೆಮಿ,



ಬೆಂಗಳೂರು – ೧೯೯೬

೪೧. **ಭಾರತೀಯ ಚಿತ್ರಕಲೆ** — ಸಿ. ಶಿವರಾಮಮೂರ್ತಿ
ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ — ಅನುವಾದ. ಪಿ.ಆರ್. ತಿಪ್ಪೇಸ್ವಾಮಿ
ಹೊಸ ದೆಹಲಿ – ೧೯೯೮

೪೨. **ಭಿತ್ತಿಚಿತ್ರ ಪರಂಪರೆ** — ಡಾ. ಅ.ಲ. ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

೪೩. **ಬೆಳಗಾವಿ ಮೋಹಕ ನಿಸರ್ಗ,** — ಕರ್ನಾಟಕ ಸರಕಾರ
**ವೈಭವಪೂರ್ಣ ಪರಂಪರೆ**
ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ
ನಿಗಮ ನಿಯಮಿತ – ೨೦೦೨

೪೪. **ಬೆಳಗಾವಿ ಜಿಲ್ಲೆಯ ಭವ್ಯ ಪರಂಪರೆ** — ಸಂ. ವ್ಹಿ.ಸಿ. ಮಾಲಗತ್ತಿ
ಮಾಲಗತ್ತಿ ಆಫ್ ಸೆಟ್ ಪ್ರಿಂಟರ್ಸ್
ಮತ್ತು ಪಬ್ಲಿಷರ್ಸ್, ಬೆಳಗಾವಿ – ೨೦೦೨

೪೫. **ರಂಗಪ್ರವೇಶ** — ಬಸವರಾಜ ಡೋಣೂರ
ಕಲಾ ಗಂಗಾಧರ ಪ್ರಕಾಶನ – ೧೯೯೮

೪೬. **ವಿಶಿಷ್ಟ ವರ್ಣಚಿತ್ರಗಳ ಆಗರ ಬಾದಾಮಿ** — ಡಾ. ಅ. ಸುಂದರ
ಚಾಲುಕ್ಯ ಶ್ರೀ ಬಾದಾಮಿ – ೧೯೮೨

೪೭. **ವರ್ಣಸಂಚಯ** — ಡಾ. ಎಸ್.ಸಿ. ಪಾಟೀಲ.
ವಿಜಯ ಚಿತ್ರಕಲಾ ಮಹಾವಿದ್ಯಾಲಯ
ಇಲಕಲ್ಲ – ೨೦೦೧

೪೮. **ಶೃಂಗಾರ ಲಹರಿ** — ಪ್ರೊ. ಎಂ.ಎಚ್. ಕೃಷ್ಣಯ್ಯ
ಸಿಸ್ಟಮ್ ಪ್ರಿಂಟ್ಸ್, ಬೆಂಗಳೂರು
೧೯೮೯

೪೯. **ಸುವರ್ಣ ಕರ್ನಾಟಕ ದರ್ಶನ** — ಕೆ. ಅನಂತರಾಮ ರಾವ್
೫೦ರ ಸಂವತ್ಸರಗಳು
ವಿದ್ಯಾ ಪಬ್ಲಿಶಿಂಗ್ ಹೌಸ್,
ಮಂಗಳೂರು – ೨೦೦೬



**ಆಯ್ದ ನಿಯತಕಾಲಿಕೆಗಳು :**


೧. **ಈ ಹಣ್ಣು ಕಣ್ಣಿಗಷ್ಟೆ, ಬಾಯಿಗಲ್ಲ** (ಲೇ) : ಅನುರಾಧ. ಯ. ದೀಕ್ಷಿತ
'ಸುಧಾ' ವಾರಪತ್ರಿಕೆ – ೧೯೯೭

೨. **ಕರ್ನಾಟಕದ ಜನಪದ ಕಲೆಗಳು** ಡಾ. ಬಿ.ಆರ್. ಹಿರೇಮಠ
ಕರ್ನಾಟಕ ಭಾರತಿ

೩. **ಗೋಕಾಕದ ಅಂದ ಚೆಂದದ ಆಟಿಗೆಗಳು** (ಲೇ) : ಎಸ್.ವಿ. ಪಾಟೀಲ
'ಕರ್ಮವೀರ' ವಾರಪತ್ರಿಕೆ – ೧೯೯೫

೪. **ಗೋಕಾಕದ ಜೀವಂತ ಕಲೆ – ಜಿನಗಾರಿಕೆ** (ಲೇ) : ಮಹಾಲಿಂಗ ಮಂಗಿ
'ಜನಪದ' – ೧೯೯೩

೫. **ಚಿತ್ರಕಲೆಯ ಆರು ಅಂಗಗಳ ಲಕ್ಷಣಗಳು** ಡಾ. ಎಸ್.ಸಿ. ಪಾಟೀಲ
ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ – ೧೯೮೭


* * * * *



ಇಂಗ್ಲೀಷ ಗ್ರಂಥಗಳು :


1. **Early Chamber Tombs Of India** — A. Sundar
   New Delhi - 1978
2. **Felection Vol** — P.B. Desai
   Dharwar - 1971
3. **Mural Painting in India** — J.C. Nagapal
   Jain Publication,
   Delhi - 1987
4. **Painting of Ajenta** — J. Griffiths
   Securety of State
   for India - 1897
5. **Painting at Badami** — Stella Cramrisch
   Journal of the Indian
   Society of Oriantal Art
   Vol. IV
6. **Techniques in Indian Mural Painting** — Jayanth Chakravarthi
   Bagachi and Compny
   Culcutta - 1980
7. **The Cave Painting of Ajanta** — Madanjeet Singh
   London - 1965




**ಸಂಕ್ಷೇಪಗಳು :**

| | |
|---|---|
| ೧. ಪ್ರ.ಸಂ. | ಪ್ರಧಾನ ಸಂಪಾದಕರು |
| ೨. ಕ.ವಿ.ವಿ.ಹ. | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೩. ಕ.ಲ.ಲ.ಅ. | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ೪. ಮ.ಪ್ರ. | ಮಹಾಪ್ರಬಂಧ |
| ೫. ಸಂ. | ಸಂಪಾದಕರು |
| ೬. ಗು.ವಿ.ವಿ. | ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ |
| ೭. ಪು.ಸಂ. | ಪುಟ ಸಂಖ್ಯೆ |
| ೮. ಮೈ.ವಿ.ವಿ. | ಮೈಸೂರು ವಿಶ್ವವಿದ್ಯಾಲಯ, ಮೈಸೂರು |
| ೯. ಲೇ. | ಲೇಖಕರು |
| ೧೦. ಕ.ವಿ.ವಿ. | ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ |
| ೧೧. ಕಿ.ಪ್ರ. | ಕಿರು ಪ್ರಬಂಧ |



